श्रीमुम्मडिकृष्णराज ओडेयर् विरचितः

# श्रीतत्त्वनिधिः

## चतुर्थः सम्पुटः

# ब्रह्मनिधिः

(कर्णाटभाषानुवादसहितः)



ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ

# ಶ್ರೀತತ್ತ್ವನಿಧಿ

## ನಾಲ್ಕನೆಯ ಸಂಪುಟ

# ಬ್ರಹ್ಮನಿಧಿ

(ಕನ್ನಡ ಅನುವಾದ ಸಹಿತ)

ಕನ್ನಡಾನುವಾದ

ವಿದ್ವಾನ್ ಡಾ. ಟಿ. ವಿ. ಸತ್ಯನಾರಾಯಣ ಎಂ.ಎ., ಪಿಹೆಚ್.ಡಿ.



ಪ್ರಾಚ್ಯವಿದ್ಯಾಸಂಶೋಧನಾಲಯ

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

2016

श्रीमुम्मडिकृष्णराज ओडेयर् विरचितः

# श्रीतत्त्वनिधिः

## चतुर्थः सम्पुटः

# ब्रह्मनिधिः

(कर्णाटभाषानुवादसहितः)



ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ

# ಶ್ರೀತತ್ತ್ವನಿಧಿ

## ನಾಲ್ಕನೆಯ ಸಂಪುಟ

# ಬ್ರಹ್ಮನಿಧಿ

(ಕನ್ನಡ ಅನುವಾದ ಸಹಿತ)

ಕನ್ನಡಾನುವಾದ

ವಿದ್ವಾನ್ ಡಾ. ಟಿ. ವಿ. ಸತ್ಯನಾರಾಯಣ ಎಂ.ಎ., ಪಿಹೆಚ್.ಡಿ.



ಪ್ರಾಚ್ಯವಿದ್ಯಾಸಂಶೋಧನಾಲಯ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
2016

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ

# ಶ್ರೀತತ್ತ್ವನಿಧಿ

ನಾಲ್ಕನೆಯ ಸಂಪುಟ

## ಬ್ರಹ್ಮನಿಧಿ

(ಕನ್ನಡ ಅನುವಾದ ಸಹಿತ)

श्रीमुम्मडिकृष्णराज ओडेयर् विरचितः

# श्रीतत्त्वनिधिः

चतुर्थः सम्पुटः

## ब्रह्मनिधिः

(कर्णाटभाषानुवादसहितः)





ಕನ್ನಡಾನುವಾದ

**ವಿದ್ವಾನ್ ಡಾ. ಟಿ. ವಿ. ಸತ್ಯನಾರಾಯಣ** ಎಂ.ಎ., ಪಿಹೆಚ್.ಡಿ.

ನಿವೃತ್ತ ಉಪನಿರ್ದೇಶಕ ಮತ್ತು ಹಾಲಿ ಗೌರವ ಸಲಹಾಗಾರರು

ಪ್ರಾಚ್ಯವಿದ್ಯಾಸಂಶೋಧನಾಲಯ

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - 570 004

ಪ್ರಾಚ್ಯವಿದ್ಯಾಸಂಶೋಧನಾಲಯಗ್ರಂಥಮಾಲಾ - 206

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ

# ಶ್ರೀತತ್ತ್ವನಿಧಿ

ನಾಲ್ಕನೆಯ ಸಂಪುಟ

# ಬ್ರಹ್ಮನಿಧಿ

(ಕನ್ನಡ ಅನುವಾದ ಸಹಿತ)



ಗೌರವಸಂಪಾದಕರು

**ಪ್ರೊ.ಕೆ.ಎಸ್.ರಂಗಪ್ಪ**

ಪಿಹೆಚ್.ಡಿ., ಡಿ.ಎಸ್ಸಿ., ಎಫ್.ಆರ್.ಎಸ್.ಸಿ., ಎಫ್.ಎನ್.ಎಸ್ಸಿ.

ಕುಲಪತಿಗಳು, ಮೈಸೂರು ವಿಶ್ವವಿದ್ಯಾನಿಲಯ

ಪ್ರಧಾನಸಂಪಾದಕರು

ಅಲಂಕಾರಶಾಸ್ತ್ರವಿದುಷಿ

**ಪ್ರೊ.ಹೆಚ್.ಪಿ.ದೇವಕಿ** ಎಂ.ಎ., ಪಿಹೆಚ್.ಡಿ.

ನಿರ್ದೇಶಕರು

ಪ್ರಾಚ್ಯವಿದ್ಯಾಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು,

ಸ್ನಾತಕೋತ್ತರ ಸಂಸ್ಕೃತ ಅಧ್ಯಯನ ಕೇಂದ್ರ, ಮಾನಸಗಂಗೋತ್ರಿ, ಮೈಸೂರು

ನಿವೃತ್ತ ಸಂದರ್ಶಕ ಪ್ರಾಧ್ಯಾಪಕರು, ಸಾರ್ಬೋನ್ ವಿಶ್ವವಿದ್ಯಾನಿಲಯ, ಪ್ಯಾರಿಸ್, ಫ್ರಾನ್ಸ್

**ಪ್ರಾಚ್ಯವಿದ್ಯಾಸಂಶೋಧನಾಲಯ**

ಮೈಸೂರು ವಿಶ್ವವಿದ್ಯಾನಿಲಯ,

ಮೈಸೂರು-570 005

**2016**

ಪ್ರಾಚ್ಯವಿದ್ಯಾಸಂಶೋಧನಾಲಯ

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-570 005

Phone : 0821-2423136

Fax : 0821 - 2420331

E-mail ID : orimys5@yahoo.co.in



ಪ್ರತಿಗಳು : 500

ಬೆಲೆ : RS. 1,500/-

$ 75/-



*ಮುದ್ರಣ:*

**ಉದಯರವಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್**

**# 1354/1, 1ನೇ ಮೇನ್‌ರೋಡ್, ಕೃಷ್ಣಮೂರ್ತಿಪುರಂ,**

**ಮೈಸೂರು - 570 004**

**ದೂರವಾಣಿ : 0821-2332971**

ಪ್ರಾಚ್ಯವಿದ್ಯಾಸಂಶೋಧನಾಲಯಗ್ರಂಥಮಾಲಾ - 206

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ

# ಶ್ರೀತತ್ತ್ವನಿಧಿ

ನಾಲ್ಕನೆಯ ಸಂಪುಟ

# ಬ್ರಹ್ಮನಿಧಿ

(ಕನ್ನಡ ಅನುವಾದ ಸಹಿತ)


ಗೌರವಸಂಪಾದಕರು

**ಪ್ರೊ.ಕೆ.ಎಸ್.ರಂಗಪ್ಪ**

ಪಿಹೆಚ್.ಡಿ., ಡಿ.ಎಸ್ಸಿ., ಎಫ್.ಆರ್.ಎಸ್.ಸಿ., ಎಫ್.ಎನ್.ಎಸ್ಸಿ.

ಕುಲಪತಿಗಳು, ಮೈಸೂರು ವಿಶ್ವವಿದ್ಯಾನಿಲಯ

ಪ್ರಧಾನಸಂಪಾದಕರು

ಅಲಂಕಾರಶಾಸ್ತ್ರವಿದುಷಿ

**ಪ್ರೊ.ಹೆಚ್.ಪಿ.ದೇವಕಿ** ಎಂ.ಎ., ಪಿಹೆಚ್.ಡಿ.

ನಿರ್ದೇಶಕರು

ಪ್ರಾಚ್ಯವಿದ್ಯಾಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು,

ಸ್ನಾತಕೋತ್ತರ ಸಂಸ್ಕೃತ ಅಧ್ಯಯನ ಕೇಂದ್ರ, ಮಾನಸಗಂಗೋತ್ರಿ, ಮೈಸೂರು

ನಿವೃತ್ತ ಸಂದರ್ಶಕ ಪ್ರಾಧ್ಯಾಪಕರು, ಸಾರ್ಬೋನ್ ವಿಶ್ವವಿದ್ಯಾನಿಲಯ, ಪ್ಯಾರಿಸ್, ಫ್ರಾನ್ಸ್

ಕನ್ನಡಾನುವಾದ

**ವಿದ್ವಾನ್ ಡಾ. ಟಿ.ವಿ. ಸತ್ಯನಾರಾಯಣ** ಎಂ.ಎ., ಪಿಹೆಚ್.ಡಿ.

ನಿವೃತ್ತ ಉಪನಿರ್ದೇಶಕ ಮತ್ತು ಹಾಲಿ ಗೌರವ ಸಲಹಾಗಾರರು



**ಪ್ರಾಚ್ಯವಿದ್ಯಾಸಂಶೋಧನಾಲಯ**

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-570 005

**2016**

# ಸಂಪಾದಕಮಂಡಳಿ

*ಗೌರವ ಸಂಪಾದಕರು*

**ಪ್ರೊ. ಡಾ. ಕೆ.ಎಸ್.ರಂಗಪ್ಪ**

ಪಿಹೆಚ್.ಡಿ., ಡಿ.ಎಸ್ಸಿ., ಎಫ್.ಆರ್.ಎಸ್.ಸಿ., ಎಫ್.ಎಸ್.ಎಸ್ಸಿ.

ಮಾನ್ಯ ಕುಲಪತಿಗಳು, ಮೈ.ವಿ.ವಿ.

*ಉಪಸಂಪಾದಕರು*

**ಪ್ರೊ. ಡಾ. ಆರ್.ರಾಜಣ್ಣ** ಎಂ.ಎ., ಪಿಹೆಚ್.ಡಿ.

ಮಾನ್ಯ ಕುಲಸಚಿವರು, ಮೈ.ವಿ.ವಿ.

**ಪ್ರೊ. ಡಾ. ಡಿ. ಶ್ರೀಜಯ್ ದೇವರಾಜ ಅರಸ್** ಎಂ.ಎ.,ಎಂ.ಆರ್.ಪಿ.,ಎ.ಐ.ಟಿ.ಪಿ.,ಪಿಹೆಚ್.ಡಿ.

ನಿವೃತ್ತ ಕುಲಸಚಿವರು (ಪರೀಕ್ಷಾಂಗ), ಮೈ.ವಿ.ವಿ.

*ಪ್ರಧಾನ ಸಂಪಾದಕರು*

**ವಿದುಷಿ ಪ್ರೊ.ಡಾ.ಹೆಚ್.ಪಿ.ದೇವಕಿ** ಎಂ.ಎ., ಪಿಹೆಚ್.ಡಿ.

ನಿರ್ದೇಶಕರು, ಪ್ರಾಚ್ಯವಿದ್ಯಾಸಂಶೋಧನಾಲಯ

*ಸಂಪಾದಕರು*

**ವಿದ್ವಾನ್ ಡಾ. ಹೆಚ್.ವಿ.ನಾಗರಾಜರಾವ್** ಎಂ.ಎ., ಡಿ.ಲಿಟ್.

ನಿವೃತ್ತ ಸಹಾಯಕ ಸಂಶೋಧಕರು ಶ್ರೇಣಿ-1

**ವಿದ್ವಾನ್ ಡಾ. ಟಿ.ವಿ. ಸತ್ಯನಾರಾಯಣ** ಎಂ.ಎ., ಪಿಹೆಚ್.ಡಿ.

ನಿವೃತ್ತ ಉಪನಿರ್ದೇಶಕ ಮತ್ತು ಹಾಲಿ ಗೌರವ ಸಲಹಾಗಾರರು

**ಡಾ. ಕೆ.ವಿ.ರಾಮಪ್ರಿಯ** ಎಂ.ಎ., ಪಿಹೆಚ್.ಡಿ.

ಉಪನಿರ್ದೇಶಕ (ಪ್ರಭಾರ)

*ಕರಡು ಪ್ರತಿಗಳನ್ನು ತಿದ್ದಿದವರು*

**ವಿದ್ವಾನ್ ಡಾ. ಹೆಚ್.ವಿ.ನಾಗರಾಜರಾವ್** ಎಂ.ಎ., ಡಿ.ಲಿಟ್.

ನಿವೃತ್ತ ಸಹಾಯಕ ಸಂಶೋಧಕರು ಶ್ರೇಣಿ-1

**ವಿದ್ವಾನ್ ಡಾ. ಟಿ.ವಿ. ಸತ್ಯನಾರಾಯಣ** ಎಂ.ಎ., ಪಿಹೆಚ್.ಡಿ.

ನಿವೃತ್ತ ಉಪನಿರ್ದೇಶಕ ಮತ್ತು ಹಾಲಿ ಗೌರವ ಸಲಹಾಗಾರರು

*ಡಿ.ಟಿ.ಪಿ.*

**ಶ್ರೀಮತಿ ಪಿ. ಗೌರಿ** ಎಂ.ಎ., ಹಸ್ತಪ್ರತಿಶಾಸ್ತ್ರ ಡಿಪ್ಲೊಮಾ

ಸಹಾಯಕ ಸಂಶೋಧಕರು ಶ್ರೇಣಿ-2

*ತಾಂತ್ರಿಕ ಸಹಾಯಕರು*

**ಶ್ರೀ ದಿದ್ದಿಗಿ ವಂಶಿ ಕೃಷ್ಣ** ಎಂ.ಎ.

ಸಹಾಯಕ ಸಂಶೋಧಕರು ಶ್ರೇಣಿ-2

**ಶ್ರೀ ಭಾಸ್ಕರ**

ಛಾಯಾಗ್ರಾಹಕ

## ಮೂಲ ಪ್ರೇರಕರು




**ಶ್ರೀಮನ್ಮಹಾರಾಜ ಹತ್ತನೆಯ ಶ್ರೀಚಾಮರಾಜೇಂದ್ರ ಒಡೆಯರ್‌ರವರು**

**(1863-1894 A.D.)**

**ಪ್ರಾಚ್ಯವಿದ್ಯಾಸಂಶೋಧನಾಲಯವನ್ನು ಸ್ಥಾಪನೆ ಮಾಡಿದವರು**




**ಶ್ರೀಮನ್ಮಹಾರಾಜ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು**

**(1794-1868 A.D.)**

**ಪ್ರಾಚ್ಯ ಮೈಸೂರು ರಾಜ್ಯದ ಅಧಿಪತಿ**

**ಶ್ರೀತತ್ತ್ವನಿಧಿಗ್ರಂಥವನ್ನು ರಚಿಸಿದವರು**




ಮೈಸೂರು ಒಡೆಯರ್ ವಂಶವೃಕ್ಷ

**(1399-1974 A.D.)**

ಸಂಸ್ಕೃತ ಸಾಹಿತ್ಯಾರಾಧಕರು



ಪ್ರೊ. ಡಾ. ಕೆ.ಎಸ್.ರಂಗಪ್ಪ
ಮಾನ್ಯ ಕುಲಪತಿಗಳು
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ಮುನ್ನುಡಿ

ಹಳೆಯ ಮೈಸೂರು ಸಂಸ್ಥಾನವನ್ನಾಳಿದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ರವರಿಂದ ಸಂಸ್ಕೃತಭಾಷೆಯಲ್ಲಿ ವಿರಚಿತವಾದ ದೇವತಾ ವಿಶ್ವಕೋಶಗ್ರಂಥ ಶ್ರೀತತ್ತ್ವನಿಧಿಯ ನಾಲ್ಕನೆಯ ಸಂಪುಟ 'ಬ್ರಹ್ಮನಿಧಿ' ಕನ್ನಡ ಅನುವಾದ ಸಹಿತ ಲೋಕಾರ್ಪಣೆಯಾಗುತ್ತಿರುವುದು ಶತಮಾನೋತ್ಸವದ ಸಂಭ್ರಮದಲ್ಲಿರುವ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಹೆಮ್ಮೆ ತರುವಂತಹ ವಿಷಯವಾಗಿದೆ. ಮೈಸೂರು ಸಂಸ್ಥಾನದ ಸಾಂಸ್ಕೃತಿಕ ರೂವಾರಿಯೆಂದೇ ಖ್ಯಾತನಾಮರಾಗಿರುವ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರದ್ದು ಸಾಹಿತ್ಯಕ್ಷೇತ್ರದಲ್ಲಿಯೂ ಸಹ ಉಜ್ಜ್ವಲವಾದ ಹೆಸರು. ಶೈಶವದಿಂದಲೇ ಅತ್ಯುತ್ತಮ ಶಿಕ್ಷಣ ಪಡೆದು ಬಹುಭಾಷಾ ವಿಶಾರದರಾಗಿ, ದೇವಭಾಷೆ ಸಂಸ್ಕೃತ, ದೇಶಭಾಷೆ ಕನ್ನಡ ಎರಡೂ ಸೇರಿ ನಾನಾ ಸಾಹಿತ್ಯ ಪ್ರಕಾರಗಳಿಗೆ ಸಂಬಂಧಿಸಿದಂತೆ ಒಟ್ಟು ಐವತ್ತೆಂಟು ಕೃತಿಗಳನ್ನು ರಚನೆ ಮಾಡಿದವರು ಅವರು. ಶ್ರೀತತ್ತ್ವನಿಧಿಯು ಇವರ ಒಟ್ಟು ರಚನೆಗಳಲ್ಲಿಯೇ 'ಕೃತಿವಿಭೂತಿ' ಎನಿಸಬಲ್ಲ ಶ್ರೇಷ್ಠ ಕೃತಿ. ಕಳೆದ ಜನವರಿ ನಾಲ್ಕರಂದು ಮೈಸೂರು ವಿಶ್ವವಿದ್ಯಾನಿಲಯ ಆಚರಿಸಿದ 'ಅಖಿಲಭಾರತ ವಿಜ್ಞಾನ ಕಾಂಗ್ರೆಸ್ಸಿ'ನ ಮಹಿಳಾ ಅಧಿವೇಶನದ ಪ್ರಾರಂಭೋತ್ಸವ ಸಂದರ್ಭದಲ್ಲಿ ಇದೇ 'ಬ್ರಹ್ಮನಿಧಿ' ಸಂಪುಟದ ಇಂಗ್ಲಿಷ್ ಅನುವಾದವನ್ನು ಕೇಂದ್ರ ಮಾನವ ಸಂಪನ್ಮೂಲ ಮತ್ತು ಅಭಿವೃದ್ಧಿ ಸಚಿವರಾದ ಸನ್ಮಾನ್ಯ ಶ್ರೀಮತಿ ಸ್ಮೃತಿ ಜುಬಿನ್ ಇರಾನಿರವರು ಸಾರಸ್ವತ ಲೋಕಕ್ಕೆ ಸಮರ್ಪಣೆ ಮಾಡಿದುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳುತ್ತೇನೆ. ಇಂಗ್ಲಿಷ್ ಅನುವಾದವನ್ನು ಸ್ಥೂಲವಾಗಿ ಗಮನಿಸಿರುವ ನಾನು ಕನ್ನಡ ಅನುವಾದವೂ ಸಹ ಸಾಹಿತ್ಯಾಸಕ್ತರಿಗೆ, ಸಂಶೋಧಕರಿಗೆ, ಒಟ್ಟಾರೆ ಜ್ಞಾನಪಿಪಾಸುಗಳಿಗೆ ಉಪಯುಕ್ತ ಗ್ರಂಥವಾಗಲೆಂದು ಹಾರೈಸುತ್ತೇನೆ.

ಪ್ರಾಚ್ಯವಿದ್ಯಾಸಂಶೋಧನಾಲಯಕ್ಕೆ ಭೇಟಿ ನೀಡಿರುವ ಸಂದರ್ಭಗಳಲ್ಲಿ ನಾನು ಶ್ರೀತತ್ತ್ವನಿಧಿಯ ಹಸ್ತಪ್ರತಿಯನ್ನು ಗಮನಿಸಿದ್ದೇನೆ. ಭಾಷೆ ಸಂಸ್ಕೃತವಾದರೂ ಹಸ್ತಪ್ರತಿಯ ಲಿಪಿ ಕನ್ನಡ. ಶ್ರೀಸಾಮಾನ್ಯರ ಅನುಕೂಲಕ್ಕಾಗಿ ತಮ್ಮ ಹಲವಾರು ಸಂಸ್ಕೃತ ಗ್ರಂಥಗಳನ್ನು ಹೀಗೆ ಕನ್ನಡ ಲಿಪಿಯಲ್ಲಿಯೇ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ಬರೆದಿದ್ದಾರೆ. ಸಂಸ್ಕೃತ ಸಾಹಿತ್ಯ ಮತ್ತು ಕನ್ನಡ ಸಾಹಿತ್ಯಗಳೆರಡರಲ್ಲೂ ಅವರು ಅಸಾಧಾರಣ ಪಾಂಡಿತ್ಯವುಳ್ಳವರು. ಭಾರತೀಯ ಸಂಸ್ಕೃತಿಯ ಮೂಲವಾಹಿನಿಯೇ ಸಂಸ್ಕೃತ ಭಾಷೆ. ಸಂಸ್ಕೃತ ಸಾಹಿತ್ಯಗಂಗೆಯನ್ನು ಹೊಸಗನ್ನಡದಲ್ಲಿ ಅವತರಿಸುವಂತೆ ಮಾಡಿದ ಭಗೀರಥರು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು. ಒಟ್ಟು ಒಂಭತ್ತು ಸಂಪುಟಗಳಿರುವ ಮೈಸೂರು ಶೈಲಿಯ ಸುಂದರ ವರ್ಣಚಿತ್ರಗಳಿರುವ ವಿಶ್ವಕೋಶ ಶ್ರೀತತ್ತ್ವನಿಧಿ ಈವರೆಗೂ ಸಂಸ್ಕೃತಭಾಷೆಯಲ್ಲಿ ರಚಿತವಾಗಿರುವ ವಿಶ್ವಕೋಶಗಳಲ್ಲಿಯೇ ಒಂದು ಉಜ್ಜ್ವಲ ಕೃತಿರತ್ನ. ಸಾವಿರಕ್ಕೂ ಮೀರಿದ ಅದ್ಭುತ ರಮಣೀಯ ವರ್ಣಚಿತ್ರಗಳು ಈ ಗ್ರಂಥಗಳಲ್ಲಿನ ವಿಶೇಷ ಆಕರ್ಷಣೆ. ಪ್ರಾಚ್ಯವಿದ್ಯಾಸಂಶೋಧನಾಲಯದಲ್ಲಿ ಸಾವಿರಾರು ಸಂಖ್ಯೆಯಲ್ಲಿ ತಾಳೆಗರಿಯ ಹಾಗೂ ಕಾಗದದ ಹಸ್ತಪ್ರತಿಗಳಿವೆ. ಶ್ರೀತತ್ತ್ವನಿಧಿಯ ಹಸ್ತಪ್ರತಿಯು ಕಾಗದದ ಹಸ್ತಪ್ರತಿಗಳಲ್ಲಿಯೇ ರಾಜನಂತಿರುವ ಅಪರೂಪವೆನಿಸುವಂತಹ ಹಸ್ತಪ್ರತಿ.

ನಾನು ವಿಜ್ಞಾನಕ್ಷೇತ್ರಕ್ಕೆ ಸಂಬಂಧಪಟ್ಟವನು. ನನ್ನ ಪ್ರೌಢಶಾಲಾಮಟ್ಟದಲ್ಲಾಗಲೀ ಪದವಿ ಶಿಕ್ಷಣದ ಅವಧಿಯಲ್ಲಾಗಲೀ ಸಂಸ್ಕೃತ ಭಾಷೆಯನ್ನು ಅಧ್ಯಯನ ಮಾಡಿದವನಲ್ಲ. ಆದರೆ ರಾಷ್ಟ್ರಕವಿ ಕುವೆಂಪುರವರ 'ನವಿಲು' ಕವನ ಸಂಕಲನದಲ್ಲಿನ 'ಸಂಸ್ಕೃತಮಾತೆ' ಎಂಬ ಕವಿತೆಯನ್ನು ಓದಿದ್ದೇನೆ. ಹಲವು ಸಾವಿರ ವರ್ಷಗಳ ಹಿಂದೆ ವಿಶ್ವಾಮಿತ್ರ ಮಹರ್ಷಿಯ ಕೊರಳಿನಿಂದ ಗಾಯತ್ರೀ ಛಂದಸ್ಸಿನಲ್ಲಿ ಹೊಮ್ಮಿ ಬಂದ ''ಧಿಯೋ ಯೋ ನಃ ಪ್ರಚೋದಯಾತ್'' ಎಂಬ ವಾಣಿಯನ್ನು ಸ್ಮರಿಸುತ್ತಾ ಕವಿವರ್ಯ ಕುವೆಂಪುರವರು ''ಮಾನವನು ಬಾನೆಡೆಗೆ ಮೊಗವೆತ್ತಿ ಕೈಮುಗಿದು ವೇದದಲಿ ಪ್ರಾರ್ಥಿಸಿದ ದನಿ ನಿನ್ನದೆಲೆ ತಾಯೆ | .... ನೀನಿಲ್ಲದೆಲ್ಲಿಯದು ಭರತಖಂಡದ ಬದುಕು ಸಂಪತ್ತು ಸಂಸ್ಕೃತಿ?'' .... ಸಾಲುಗಳನ್ನೋದುವಾಗ ರೋಮಾಂಚನಗೊಂಡಿದ್ದೇನೆ. ಹಾಗೆಯೇ ನಮ್ಮ ಮೈಸೂರು ವಿಶ್ವವಿದ್ಯಾನಿಲಯದ ಲಾಂಛನದಲ್ಲಿ ಧ್ಯೇಯವಾಣಿಯಾಗಿ ಶೋಭಿಸುತ್ತಿರುವ ಶ್ರೀಕೃಷ್ಣಪರಮಾತ್ಮನ ಗೀತಾವಾಣಿ ''ನ ಹಿ ಜ್ಞಾನೇನ ಸದೃಶಮ್'' ಸಾಲನ್ನು ಮತ್ತೆ ಮತ್ತೆ ಓದಿ ಧನ್ಯತಾಭಾವವನ್ನು ಅನುಭವಿಸಿದ್ದೇನೆ.

ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ನಂತರ ಅವರ ಉತ್ತರಾಧಿಕಾರಿಯಾಗಿ ಮೈಸೂರು ಸಂಸ್ಥಾನದ ಸಿಂಹಾಸನವನ್ನು ಅಲಂಕರಿಸಿದ ಅವರ ದತ್ತುಪುತ್ರರೂ ನಿಜಸಂಬಂಧದಲ್ಲಿ ಅವರ ಮೊಮ್ಮಗನೂ ಆದ ಹತ್ತನೆಯ ಚಾಮರಾಜ ಒಡೆಯರ್‌ರವರಿಂದ

ಸ್ಥಾಪನೆಗೊಂಡು (1891) ಪ್ರಾಚ್ಯವಿದ್ಯಾಸಂಶೋಧನಾಲಯ ಬರಲಿರುವ ಅಕ್ಟೋಬರ್ ತಿಂಗಳಿಗೆ ನೂರ ಇಪ್ಪತ್ತೈದನೆಯ ವರ್ಷವನ್ನು ಪೂರೈಸಲಿದೆ. ಹಸ್ತಪ್ರತಿಗಳಲ್ಲಿ ಅಡಗಿರುವ ಪ್ರಾಚೀನ ಜ್ಞಾನಸಂಪತ್ತಿನ ಮಹಾಸಾಗರದಂತಿರುವ ಈ ಸಂಸ್ಥೆಯು ಬಹಳ ಕಾಲ ಅಜ್ಞಾತವಾಗಿಯೇ ಉಳಿದಿದ್ದ **ಕೌಟಿಲ್ಯನ ಅರ್ಥಶಾಸ್ತ್ರವನ್ನು** ಭಾರತದಲ್ಲಿಯೇ ಪ್ರಪ್ರಥಮವಾಗಿ ಪ್ರಕಟಿಸಿ (1909) ಸಮಸ್ತ ವಿಶ್ವದ ಜ್ಞಾನಾಸಕ್ತರನ್ನು ಚಕಿತಗೊಳಿಸಿದೆ. 1916ರಿಂದಲೂ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸೇರ್ಪಡೆಯಾಗಿ ಅದರ ಅಂಗಸಂಸ್ಥೆಯಾಗಿ ಸಂಸ್ಕೃತ ಸಾಹಿತ್ಯದ ಹಸ್ತಪ್ರತಿಗಳ ರಕ್ಷಣೆ, ಪ್ರಕಟಣೆಯ ಕಾರ್ಯವನ್ನು ನಿರ್ವಹಿಸುತ್ತಾ ಬಂದಿದೆ.

ಶ್ರೀತತ್ತ್ವನಿಧಿಯ ಮೊದಲ ಮೂರು ಸಂಪುಟಗಳಾದ ಶಕ್ತಿನಿಧಿ 1997ರಲ್ಲಿ, ವಿಷ್ಣುನಿಧಿ 2002ರಲ್ಲಿ, ಶಿವನಿಧಿ 2004ರಲ್ಲಿ ಇಂಗ್ಲೀಷ್ ಹಾಗೂ ಕನ್ನಡ ಅನುವಾದಗಳ ಸಹಿತ ಅನುವಾದಗೊಂಡು ಲೋಕಾರ್ಪಣೆಗೊಂಡಿವೆ. ಭಾರತದ ವಿವಿಧೆಡೆ ಅಮೇರಿಕಾ, ಫ್ರಾನ್ಸ್ ದೇಶಗಳ ಗ್ರಂಥಾಲಯಗಳಲ್ಲಿ ಸಾಹಿತ್ಯಾಸಕ್ತರಿಗೆ ಆಕರಗ್ರಂಥಗಳಾಗಿ ಬಳಕೆಯಾಗುತ್ತಿವೆ. 1997ರಲ್ಲಿ ಪ್ರಥಮ ಸಂಪುಟ ಶಕ್ತಿನಿಧಿಯ ಪ್ರಕಟಣೆಯಾದಾಗ ಪ್ರಾಚ್ಯವಿದ್ಯಾಸಂಶೋಧನಾಲಯ ಸಂಸ್ಥೆಯ ನಿರ್ದೇಶಕರಾಗಿದ್ದ ಡಾ. (ಶ್ರೀಮತಿ) ಹೆಚ್.ಪಿ. ದೇವಕಿಯವರೇ ಪುನಃ ಸಂಸ್ಥೆಯ ನಿರ್ದೇಶಕರಾಗಿ ನಾಲ್ಕನೆಯ ಸಂಪುಟ 'ಬ್ರಹ್ಮನಿಧಿ'ಯ ಪ್ರಕಟಣೆಯ ಜವಾಬ್ದಾರಿಯನ್ನು ನಿರ್ವಹಿಸಿರುವುದಕ್ಕಾಗಿ ಹಾಗೂ ಪ್ರಾಚ್ಯವಿದ್ಯಾಸಂಶೋಧನಾಲಯದ ನೂರ ಇಪ್ಪತ್ತೈದು ವರ್ಷಗಳ ಸುದೀರ್ಘ ಇತಿಹಾಸದಲ್ಲಿ ಪ್ರಪ್ರಥಮ ಮಹಿಳಾ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿರುವುದಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ.

ಅನುವಾದಕರುಗಳು ಮೂಲ ಗ್ರಂಥಕಾರನಿಗೂ, ಅದನ್ನೋದುವ ಸಹೃದಯರಿಗೂ ನಡುವಣ ಸೇತುವೆ ಇದ್ದಂತೆ. ಶ್ರೀತತ್ತ್ವನಿಧಿಯ ಮೊದಲ ಮೂರು ಸಂಪುಟಗಳನ್ನು, ನಾಲ್ಕನೆಯ 'ಬ್ರಹ್ಮನಿಧಿ' ಸಂಪುಟವನ್ನೂ ಸರಳವಾದ ಇಂಗ್ಲಿಷ್ ಭಾಷೆಗೆ ಅನುವಾದಿಸಿರುವ ವಿದ್ವಾನ್ **ಡಾ. ಹೆಚ್.ವಿ. ನಾಗರಾಜರಾವ್** ವಿಶ್ವವಿಖ್ಯಾತರು, ಸಜ್ಜನಿಕೆಯ ಸಾಕಾರಮೂರ್ತಿ. ಶ್ರೀತತ್ತ್ವನಿಧಿಯ ಸ್ವಾರಸ್ಯವನ್ನು ಜಗತ್ತಿನಾದ್ಯಂತ ಹರಡಿರುವ ಭಾಷಾಸಕ್ತರಿಗೆ, ಇತಿಹಾಸತಜ್ಞರಿಗೆ ಒಟ್ಟಿನಲ್ಲಿ ಭಾರತೀಯ ಸಂಸ್ಕೃತಿಯ ಅಧ್ಯಯನಾಸಕ್ತರಿಗೆ ನಿಲುಕುವಂತೆ ಮಾಡಿರುವ ಇವರು ಅಭಿನಂದನಾರ್ಹರು. ಶ್ರೀತತ್ತ್ವನಿಧಿಯ ವಿಷ್ಣುನಿಧಿ, ಶಿವನಿಧಿ ಸಂಪುಟಗಳನ್ನು ಹಾಗೂ ಈಗಿನ 'ಬ್ರಹ್ಮನಿಧಿ' ಸಂಪುಟವನ್ನು ತಿಳಿಯಾದ ಕನ್ನಡಭಾಷೆಗೆ ಅನುವಾದಿಸಿ ಜನಸಾಮಾನ್ಯರಿಗೂ ಸಹ ಈ ಗ್ರಂಥವು ಸುಲಭಗ್ರಾಹ್ಯವಾಗುವಂತೆ ಪ್ರಯತ್ನಿಸಿರುವ ಸಂಸ್ಥೆಯ ಗೌರವ ಸಲಹೆಗಾರ **ವಿದ್ವಾನ್ ಡಾ. ಟಿ.ವಿ. ಸತ್ಯನಾರಾಯಣರವರಿಗೆ** ವಿಶ್ವವಿದ್ಯಾನಿಲಯದ ಪರವಾಗಿ ಅಭಿನಂದಿಸುತ್ತೇನೆ.

ರಾಜರ್ಷಿ ನಾಲ್ಮಡಿ ಕೃಷ್ಣರಾಜ ಒಡೆಯರ್‌ರವರಿಂದ 1916ರಲ್ಲಿ ಸ್ಥಾಪನೆಗೊಂಡು ಇದೇ ವರ್ಷ 2016ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಶತಮಾನೋತ್ಸವವನ್ನು ಆಚರಿಸುತ್ತಿದೆ. ಇಂತಹ ಅವಿಸ್ಮರಣೀಯ ಚರಿತ್ರಾರ್ಹ ಶುಭಸಂದರ್ಭದಲ್ಲಿ ವಿಶ್ವವಿದ್ಯಾನಿಲಯದ ಕುಲಪತಿ ಸ್ಥಾನದಲ್ಲಿ ಅಧಿಕಾರ ನಿರ್ವಹಿಸುವ ಸುಯೋಗ ನನ್ನದಾಗಿದೆ. ಮೈಸೂರು ಸಂಸ್ಥಾನವನ್ನು ಸುದೀರ್ಘಕಾಲ ಆಳಿದ ಸಾಹಿತ್ಯ-ಸಂಗೀತ ಕಲೋಪಾಸಕರಾಗಿದ್ದ ಮಹಾಚೇತನ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್ ಮೇರುಕೃತಿ ಶ್ರೀತತ್ತ್ವನಿಧಿಯ 'ಬ್ರಹ್ಮನಿಧಿ' ಸಂಪುಟ ಪ್ರಾಚ್ಯವಿದ್ಯಾಸಂಶೋಧನಾಲಯದ ಗ್ರಂಥಮಾಲೆಯ 206ನೆಯ ಕೃತಿಕುಸುಮವಾಗಿ ನನ್ನ ಕರ್ತವ್ಯದ ಅವಧಿಯಲ್ಲಿ ಲೋಕಾರ್ಪಣೆಗೊಳ್ಳುತ್ತಿರುವುದು ನನಗೆ ಆತ್ಮತೃಪ್ತಿಯನ್ನುಂಟುಮಾಡಿದೆ.

ಮೈಸೂರು ಎಂಬ ಪದದೊಡನೆ ಬೆರೆತು ಹೋಗಿರುವ ಮೈಸೂರು ಮಲ್ಲಿಗೆಯ ಕಂಪಿಗಿಂತಲೂ, ಇಲ್ಲಿಯ ಮಣ್ಣಿನಲ್ಲಿ ಬೆಳೆದು ವಿಶೇಷ ಸೌರಭಯುತವಾದ ಶ್ರೀಗಂಧದ ಅಂದದ ಕಲಾಕೃತಿಗಳಿಗಿಂತಲೂ ಮನಮೋಹಕವಾದ ಮೈಸೂರಿನ ಹೊಳಪಿನ ರೇಶಿಮೆಯ ವಸ್ತ್ರಗಳಿಗಿಂತಲೂ ಸಾರಸ್ವತಲೋಕದ ವಿಸ್ಮಯ ಕುತೂಹಲಗಳನ್ನು ಕೆರಳಿಸಬಲ್ಲ, ಸಹೃದಯರಿಗೆ ಅಲೌಕಿಕ ಮುದ ನೀಡುವ ಕೌಟಿಲ್ಯನ ಅರ್ಥಶಾಸ್ತ್ರ, ಶ್ರೀತತ್ತ್ವನಿಧಿಯಂತಹ ಕೃತಿಗಳಿಂದ ಮೈಸೂರಿನ, ಮೈಸೂರು ವಿಶ್ವವಿದ್ಯಾನಿಲಯದ ಘನತೆ ಗೌರವಗಳು ವರ್ಧಿಸಲೆಂದು ಸರಸ್ವತಿಯಲ್ಲಿ ವಂದನೆಗಳನ್ನು ಸಲ್ಲಿಸುತ್ತಾ ಹಾರೈಸುತ್ತೇನೆ.

**ಡಾ. ಕೆ.ಎಸ್. ರಂಗಪ್ಪ**
ಕುಲಪತಿಗಳು, ಮೈಸೂರುವಿಶ್ವವಿದ್ಯಾನಿಲಯ

# ಸಂಪಾದಕರ ನುಡಿ

ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತವಾದ ಶ್ರೀತತ್ತ್ವನಿಧಿಯು ಸಾಹಿತ್ಯ ಮತ್ತು ಚಿತ್ರಕಲೆಗಳೆರಡೂ ಸಹ ಸಂಗಮಗೊಂಡಿರುವ ವಿಶ್ವಕೋಶವಾಗಿದ್ದು, ಇದರಲ್ಲಿನ ಒಂಭತ್ತು ಸಂಪುಟಗಳಲ್ಲಿ ಮೊದಲ ಮೂರು ಸಂಪುಟಗಳು ಪ್ರಕಟಣೆಗೊಂಡಿವೆ. ಪ್ರಾಚ್ಯವಿದ್ಯಾಸಂಶೋಧನಾಲಯ ಗ್ರಂಥಮಾಲೆಯ 206ನೆಯ ಕೃತಿಕುಸುಮವಾಗಿ ನಾಲ್ಕನೆಯ 'ಬ್ರಹ್ಮನಿಧಿ' ಸಂಪುಟವು ಸಂಸ್ಕೃತ ಮೂಲ ಮತ್ತು ಕನ್ನಡ ಅನುವಾದ ಸಹಿತ ಲೋಕಾರ್ಪಣೆಯಾಗುತ್ತಿರುವುದು ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಅದರ ಅಂಗವಾದ ನಮ್ಮ ಸಂಸ್ಥೆಯ ವಿದ್ವಾಂಸರೆಲ್ಲರಿಗೂ ಸಂತಸದ ವಿಷಯವಾಗಿದೆ. ವಿಶ್ವಕೋಶಗಳ ಸರಣಿಯಲ್ಲಿಯೇ ಅದ್ಭುತವಾದ ಗ್ರಂಥವಾದ 'ಶ್ರೀತತ್ತ್ವನಿಧಿ' ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರಂತಹ ಮಹಾಚೇತನವೊಂದು ಸಮಗ್ರ ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಗೆ ನೀಡಿರುವ ಶಾಶ್ವತವಾದ ಮಹಾಕಾಣಿಕೆ. 'ನವನಿಧಿ'ಗಳೆಂಬ ಒಂಭತ್ತು ಸಂಪುಟಗಳಿರುವ ಈ ಕೃತಿಯಲ್ಲಿ ರಮಣೀಯವಾದ ವರ್ಣಚಿತ್ರಗಳೇ ವಿಶೇಷ ಆಕರ್ಷಣೆ. ಸ್ಫುಟವಾದ ಸುಂದರ ಕನ್ನಡ ಲಿಪಿಯಲ್ಲಿ ಬರೆಯಲಾಗಿರುವ ಶ್ರೀತತ್ತ್ವನಿಧಿಯು ಹಿಂದೂಧರ್ಮದ ಪ್ರಾಚೀನ ಹಾಗೂ ಅರ್ವಾಚೀನ ಶಾಸ್ತ್ರಗ್ರಂಥಗಳೆಲ್ಲದರ ಸಾರಸಂಗ್ರಹ. ಉಪನಿಷತ್ತುಗಳೆಂಬ ಗೋವುಗಳಿಂದ ಗೀತೆಯೆಂಬ ಅಮೃತವನ್ನು ಗೋಪಾಲನಂದನ ಶ್ರೀಕೃಷ್ಣಪರಮಾತ್ಮನು ಅರ್ಜುನನೆಂಬ ಕರುವಿಗಾಗಿ (ಹಾಲ್ಗರೆದು) ತಂದಂತೆ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ಸಾಹಿತ್ಯಾಸಕ್ತರೆಲ್ಲರಿಗಾಗಿ ವೇದ, ಆಗಮ, ತಂತ್ರ, ಪುರಾಣ, ಧರ್ಮಶಾಸ್ತ್ರ, ಇತಿಹಾಸ, ಮಂತ್ರಜ್ಯೋತಿಷಾದಿ ಸಕಲಶಾಸ್ತ್ರಗಳೆಂಬ ಸಂಸ್ಕೃತ ವಾಙ್ಮಯ ಮಹಾಸಾಗರವನ್ನು ಮಥಿಸಿ ಹೊರತೆಗೆದ ಉಜ್ವಲರತ್ನ ಶ್ರೀತತ್ತ್ವನಿಧಿ. ಇದರಲ್ಲಿರುವ ಒಂಭತ್ತು ಸಂಪುಟಗಳು ಕ್ರಮವಾಗಿ - 1. ಶಕ್ತಿನಿಧಿ 2. ವಿಷ್ಣುನಿಧಿ 3. ಶಿವನಿಧಿ 4. ಬ್ರಹ್ಮನಿಧಿ 5. ಗ್ರಹನಿಧಿ 6. ವೈಷ್ಣವನಿಧಿ 7. ಶೈವನಿಧಿ 8. ಆಗಮನಿಧಿ ಮತ್ತು 9. ಕೌತುಕನಿಧಿ. ಈ ಎಲ್ಲಾ ನವನಿಧಿಗಳೂ ಸೇರಿ ಆರುಸಾವಿರಕ್ಕೂ ಮೀರಿ ಶ್ಲೋಕಗಳೂ ಇವುಗಳಲ್ಲಿ ಬರುವ ವರ್ಣನೆಗಳಿಗೆ ಅನುಗುಣವಾಗಿ ಒಂದು ಸಾವಿರಕ್ಕೂ ಮೀರಿ ವರ್ಣಚಿತ್ರಗಳು ಶ್ರೀತತ್ತ್ವನಿಧಿಯಲ್ಲಿವೆ. ಇವುಗಳಲ್ಲಿ ಪ್ರಥಮ ಸಂಪುಟ ಶಕ್ತಿನಿಧಿಯು 1997ರಲ್ಲಿ ವಿದ್ವಾನ್ ಡಾ. ಹೆಚ್.ವಿ.ನಾಗರಾಜರಾವ್‌ರವರಿಂದ ಇಂಗ್ಲಿಷ್ ಮತ್ತು ವಿದ್ವಾನ್ ಹೆಚ್.ಎಸ್.ಫಾಠಕರವರಿಂದ ಕನ್ನಡಾನುವಾದ ಸಹಿತ ಪ್ರಕಟವಾಯಿತು. ಐದು ವರ್ಷಗಳ ನಂತರ 2002ರಲ್ಲಿ ವಿಷ್ಣುನಿಧಿ, 2004ರಲ್ಲಿ ಶಿವನಿಧಿ ಸಾರಸ್ವತಲೋಕದ ಬೆಳಕನ್ನು ಕಂಡವು. ಹದಿಮೂರು ವರ್ಷಗಳ ನಂತರ 2015ರಲ್ಲಿ ಚತುರ್ಥ ಸಂಪುಟವಾದ ಬ್ರಹ್ಮನಿಧಿಯ ಮುದ್ರಣದ ಸಿದ್ಧತೆಗಳೆಲ್ಲವೂ ಸಂಪೂರ್ಣಗೊಂಡಿದ್ದರೂ ಈ ಶುಭವರ್ಷ 2016ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಶತಮಾನೋತ್ಸವವನ್ನು ಆಚರಿಸುತ್ತಿರುವ ವಿಶೇಷ ಸಂದರ್ಭದಲ್ಲಿ ರಾಷ್ಟ್ರೀಯ ವಿಜ್ಞಾನ ಕಾಂಗ್ರೆಸ್ಸಿನ ಮಹಿಳಾ ಸಮ್ಮೇಳನದ ಆರಂಭೋತ್ಸವದ ಸಂದರ್ಭದಲ್ಲಿ ಗ್ರಂಥವು ಬಿಡುಗಡೆಯಾಗಲೆಂಬ ಉದ್ದೇಶದಿಂದ 'ಬ್ರಹ್ಮನಿಧಿ' ಸಂಪುಟದ ಇಂಗ್ಲಿಷ್ ಅನುವಾದವನ್ನು ಕಳೆದ ಜನವರಿ 4, 2016ರಲ್ಲಿ ಕೇಂದ್ರ ಸಂಪನ್ಮೂಲ ಸಚಿವೆ ಶ್ರೀಮತಿ ಸ್ಮೃತಿ ಜುಬಿನ್ ಇರಾನಿಯವರ

ಹಸ್ತದಿಂದ ಬಿಡುಗಡೆ ಮಾಡಿಸಲಾಯಿತು. ಇದೀಗ ಕನ್ನಡ ಅನುವಾದ ಸಾರಸ್ವತ ಲೋಕದ ಸಹೃದಯರ ಕೈ ಸೇರುತ್ತಿರುವ ಅವಿಸ್ಮರಣೀಯ ಸಂದರ್ಭದಲ್ಲಿ ಶ್ರೀತತ್ತ್ವನಿಧಿಯ ಪ್ರಕಟಣೆಗಾಗಿ ಈ ಮೊದಲು ಶ್ರಮಿಸಿರುವ ಹಲವಾರು ಮಹನೀಯರುಗಳನ್ನು ಗೌರವಪೂರ್ವಕವಾಗಿ ಸ್ಮರಿಸಲಾಗಿದೆ.

1954ರಲ್ಲಿಯೇ ಪ್ರಾಚ್ಯವಿದ್ಯಾಸಂಶೋಧನಾಲಯವನ್ನು ಸೇರಿದ ಇನ್ನೂ ಪ್ರಕಟವಾಗಿರದ ಶ್ರೀತತ್ತ್ವನಿಧಿಯ ಹಸ್ತಪ್ರತಿಯನ್ನು ಬಹಳಕಾಲದ ನಂತರ ಪ್ರಕಟಿಸುವ ಪ್ರಯತ್ನವು ಸಂಸ್ಥೆಯ ಅಂದಿನ ನಿರ್ದೇಶಕರೂ ಆಗಿದ್ದ ಈಗ ಕೀರ್ತಿಶೇಷರಾಗಿರುವ ಡಾ. ಜಿ.ಮರುಳಸಿದ್ಧಯ್ಯನವರಿಂದ 1969ರಲ್ಲಿಯೇ ನಡೆದು ಕನ್ನಡ ಲಿಪಿಯಲ್ಲಿದ್ದ ಗ್ರಂಥವನ್ನು ದೇವನಾಗರಿಗೆ ಪರಿವರ್ತಿಸಲಾಯಿತು. ಸಂಸ್ಥೆಯ ಹಿರಿಯ ವಿದ್ವಾಂಸರುಗಳಾದ ವಿದ್ವಾನ್ ಶಂಕರಗಣಪತಿ ಫಾಠಕ್, ಡಾ.ಹೆಚ್.ವಿ. ನಾಗರಾಜರಾವ್, ವಿದ್ವಾನ್ ಮಾಳಗಿ ರಾಮಾಚಾರ್ಯ, ವಿದ್ವಾನ್ ಮರಿಬಸವಾರಾಧ್ಯರು, ವಿದ್ವಾನ್ ಸಿ.ರಾಜಶೇಖರಮೂರ್ತಿ ಇವರುಗಳಿಂದ ಗ್ರಂಥದ ದೇವನಾಗರಿಯ ನಕಲು ಸಿದ್ಧವಾಯಿತು. ಶ್ರೀತತ್ತ್ವನಿಧಿಯಲ್ಲಿರುವ ಜ್ಞಾನಸಂಪತ್ತು ಅಜ್ಞಾತವಾಗಿ ಹಸ್ತಪ್ರತಿರೂಪದಲ್ಲಿಯೇ ಉಳಿಯದೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಗೆ ಅನುವಾದಗೊಂಡು, ಮೂಲ ಹಸ್ತಪ್ರತಿಯ ಪ್ರತಿರೂಪಸಹಿತ ಸಾಹಿತ್ಯಾಸಕ್ತರನ್ನು ತಲುಪಲೆಂಬ ಉದ್ದೇಶದಿಂದ ವಿಶ್ವವಿದ್ಯಾನಿಲಯಕ್ಕೆ ಧನಸಹಾಯವನ್ನು ಕೋರಿ ಸಲ್ಲಿಸಿದ ಮನವಿಗಳು ಫಲಿಸಲಿಲ್ಲ. ಆದರೆ ಡಾ. ಜಿ. ಮರುಳಸಿದ್ಧಯ್ಯನವರು ಅದ್ಭುತವಾದ ವರ್ಣಚಿತ್ರ ಹಾಗೂ ಸ್ಫುಟವಾದ ಸುಂದರ ಅಕ್ಷರಗಳಿಂದ ಬರೆಯಲಾಗಿದ್ದ ಕಾಗದದ ಹಸ್ತಪ್ರತಿಯ ಸಂರಕ್ಷಣೆಗೆ ಅತಿ ವ್ಯವಸ್ಥಿತ ರೀತಿಯ ಕ್ರಮಗಳನ್ನು ಕೈಗೊಂಡರು. ಸಂಸ್ಥೆಯ ಮೈಕ್ರೋಫಿಲಂ ಸೆಕ್ಷನ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಸಿ.ಎಸ್.ಶ್ರೀನಿವಾಸನ್ ಮತ್ತು ಹೆಚ್.ಎಸ್. ಸುಬ್ಬರಾವ್‌ರವರು ಶ್ರದ್ಧೆಯಿಂದ ನಿರ್ವಹಿಸಿದ ವಿಶೇಷ ರೀತಿಯ ಸಂರಕ್ಷಣಾ ವಿಧಾನದಿಂದ ಶ್ರೀತತ್ತ್ವನಿಧಿಯ ಹಸ್ತಪ್ರತಿಯು ಇಂದಿಗೂ ಸಹ ಯಥಾಸ್ಥಿತಿಯಲ್ಲಿದೆ. ಪುನಃ 1992ರಲ್ಲಿ ಹಾಗೂ 1994ರಲ್ಲಿ ಪ್ರಥಮ ಸಂಪುಟವಾದ ಶಕ್ತಿನಿಧಿಯ ಪ್ರಕಟಣೆಗೆ ಪ್ರಯತ್ನಗಳು ನಡೆದರೂ ಮುಖ್ಯವಾಗಿ ಬೇಕಾಗಿದ್ದ ಧನಸಹಾಯದ ನೆರವು ದೊರೆಯಲಿಲ್ಲ.

1997ರಲ್ಲಿ ಕುಲಪತಿಗಳಾಗಿ ಮೈಸೂರು ವಿಶ್ವವಿದ್ಯಾನಿಲಯದ ಆಡಳಿತದ ಚುಕ್ಕಾಣಿಯನ್ನು ಹಿಡಿದಿದ್ದ ಪ್ರೊ.ಡಾ.ಎಂ.ಮಾದಯ್ಯನವರ ಉದಾರ ಮನಸ್ಸಿನ ಫಲವಾಗಿ ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣಮಹೋತ್ಸವದ ನಿಧಿಯಿಂದ ಐದು ಲಕ್ಷ ರೂಪಾಯಿಗಳ ಮಂಜೂರಾತಿ ಲಭಿಸಿತು. ಶಕ್ತಿನಿಧಿಯ ಮೂಲ ಸಂಸ್ಕೃತಭಾಗವು ಇಂಗ್ಲಿಷ್ ಮತ್ತು ಕನ್ನಡ ಅನುವಾದಗಳೊಡನೆ 1997ರ ಸೆಪ್ಟೆಂಬರ್ 2ನೇ ತಾರೀಖು ತಿರುಪತಿಯ ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠದ ಕುಲಪತಿಗಳಾಗಿದ್ದ ಡಾ. ಎಸ್.ಬಿ. ರಘುನಾಥಾಚಾರ್ಯರ ಸಮಕ್ಷಮದಲ್ಲಿ ಕುಲಪತಿ ಎಂ. ಮಾದಯ್ಯನವರಿಂದ ಬಿಡುಗಡೆಗೊಂಡಿತು. 2002ರಲ್ಲಿ ವಿಷ್ಣುನಿಧಿ, 2004ರಲ್ಲಿ ಶಿವನಿಧಿಗಳು ಸಚಿತ್ರ ಸಂಸ್ಕೃತಮೂಲದ ಪ್ರತಿರೂಪ ಮತ್ತು ಅನುವಾದಗಳೊಡನೆ ಲೋಕಾರ್ಪಣೆಗೊಂಡ ಹನ್ನೆರಡು ವರ್ಷಗಳ ನಂತರ, ಈಗಿನ ಕುಲಪತಿಗಳೂ, ಸಂಸ್ಕೃತಭಾಷೆಯ ಅಭಿಮಾನಿಗಳೂ, ಮುಖ್ಯವಾಗಿ ಮಾನವೀಯತೆಯ ಸಾಕಾರಮೂರ್ತಿಯೂ ಆಗಿರುವ ಡಾ. ಕೆ.ಎಸ್.ರಂಗಪ್ಪನವರ

ಪ್ರೋತ್ಸಾಹದಿಂದ ನಾಲ್ಕನೆಯ ಸಂಪುಟವಾದ ಬ್ರಹ್ಮನಿಧಿಯು ಅನುವಾದ ಸಹಿತವಾಗಿ ಪ್ರಕಟಣೆಗೊಳ್ಳುತ್ತಿದೆ. ಹಲವಾರು ಕೈಗಳ, ಮನಸ್ಸುಗಳ ಪರಿಶ್ರಮ ಸಹಕಾರಗಳು ಸಾರ್ಥಕವಾಗಿವೆ.

### ಶ್ರೀತತ್ತ್ವನಿಧಿಗ್ರಂಥದ ಹಸ್ತಪ್ರತಿ :

ಸಾವಿರದ ಒಂಭೈನೂರ ಐವತ್ತನಾಲ್ಕನೆಯ ಇಸವಿ, ಫೆಬ್ರವರಿಯ ಒಂಭತ್ತನೆಯ ತಾರೀಖು 9.2.1954, ಪ್ರಾಚ್ಯವಿದ್ಯಾಸಂಶೋಧನಾಲಯದ ಇತಿಹಾಸದಲ್ಲಿಯೇ ಒಂದು ಪ್ರಶಸ್ತವಾದ ದಿನ. ಸಂಸ್ಕೃತ ಸಾಹಿತ್ಯದಲ್ಲಿನ ವಿಶ್ವಕೋಶಗಳ ಸರಣಿಯಲ್ಲಿಯೇ ಅಪರೂಪವೆನಿಸುವಂತಹ ಅದ್ಭುತ ರಮಣೀಯ ಗ್ರಂಥ ಶ್ರೀತತ್ತ್ವನಿಧಿಯ ಅಪ್ರಕಟಿತ ಹಸ್ತಪ್ರತಿಯೊಂದನ್ನು ಆ ದಿನ ಪ್ರಾಚ್ಯವಿದ್ಯಾಸಂಶೋಧನಾಲಯಕ್ಕೆ ಸಂಗ್ರಹಿಸಿ ತರಲಾಯಿತು. ಮೈಸೂರಿನ ಚಾಮುಂಡಿಪುರಂನಲ್ಲಿ ಮನೆ ನಂ. 972, ಸಿಮೆಂಟ್‌ಬ್ಲಾಕ್‌ನಲ್ಲಿ ವಾಸವಾಗಿದ್ದ ಶ್ರೀ ಎಂ.ಬಿ. ಬಸವರಾಜ ಬಹದ್ದೂರ್ ಎಂಬುವರ ನಿವಾಸದಿಂದ ಹಸ್ತಪ್ರತಿಯನ್ನು ಪಡೆದುಕೊಳ್ಳುವ ಜವಾಬ್ದಾರಿಯನ್ನು ವಹಿಸಿಕೊಂಡಿದ್ದ ಸಂಸ್ಥೆಯ ಹಿರಿಯ ವಿದ್ವಾಂಸರಾದ ಶ್ರೀ ಎಂ.ಎನ್.ಜೋಯಿಸ್‌ರವರು ಸಮಗ್ರವಾಗಿಯೇ ದೊರೆತ ಶ್ರೀತತ್ತ್ವನಿಧಿಯ ಹಸ್ತಪ್ರತಿಯನ್ನು ತಂದು ಪ್ರಾಚ್ಯವಿದ್ಯಾಸಂಶೋಧನಾಲಯ ಸಂಸ್ಥೆಯ ಅಂದಿನ ಕ್ಯುರೇಟರ್ ಆಗಿದ್ದ ಶ್ರೀ ಎಚ್.ಆರ್. ರಂಗಸ್ವಾಮಿ ಅಯ್ಯಂಗಾರ್‌ರವರಿಗೆ ಸಮರ್ಪಿಸಿದರು. ಸಂಸ್ಥೆಯಲ್ಲಿರುವ ಲೆಡ್ಜರ್ ನಂ. 4ರ 35ನೆಯ ಪುಟದಲ್ಲಿ ಹಸ್ತಪ್ರತಿಯನ್ನು ನೀಡಿದವರ ಹೆಸರು, ಸಂಗ್ರಹಿಸಿ ತಂದ ಹಾಗೂ ಸಂಸ್ಥೆಗಾಗಿ ಅದನ್ನು ಪಡೆದುಕೊಂಡವರ ಹೆಸರನ್ನು ದಾಖಲಿಸಲಾಗಿದೆ. ಈ ಹಸ್ತಪ್ರತಿಯ ಎಷ್ಟು ನಕಲುಗಳನ್ನು ಸಿದ್ಧಪಡಿಸಲಾಯಿತು ಎಂಬುದರ ಬಗೆಗೆ ಹಾಗೂ ವರ್ಣಚಿತ್ರಕಾರರ ಹೆಸರುಗಳಾಗಲೀ ಹಸ್ತಪ್ರತಿಯಲ್ಲಿ ಎಲ್ಲಿಯೂ ಸಹ ಮಾಹಿತಿ ದೊರೆಯುವುದಿಲ್ಲ.

ಇಂದಿಗೆ ಸುಮಾರು ನೂರ ಅರವತ್ತು ವರ್ಷಗಳಿಗಿಂತ ಹಿಂದೆಯೇ ಬರೆದಿರಬಹುದಾದ ಹಸ್ತಪ್ರತಿಯು ಕಾಗದದ ದೊಡ್ಡ ಹಾಳೆಗಳ ಮೇಲೆ ಸಂಸ್ಕೃತಭಾಷೆಯಲ್ಲಿರುವ ಗ್ರಂಥಭಾಗವನ್ನು ಕನ್ನಡಲಿಪಿಯಲ್ಲಿ ಬರೆದಿರುವ ಹಸ್ತಪ್ರತಿಯಾಗಿದೆ. ಶೀರ್ಷಿಕೆಗಳನ್ನು ಕೆಂಪುಶಾಯಿಯಿಂದಲೂ ಉಳಿದ ಪಠ್ಯಭಾಗವನ್ನು ಕಡುನೀಲಿ ಮತ್ತು ಕಪ್ಪು ಶಾಯಿಯಿಂದಲೂ ಬರೆಯಲಾಗಿದೆ. ಪ್ರತಿ ಪತ್ರವೂ ಸಹ 15" ಹದಿನೈದು ಅಂಗುಲ ಉದ್ದ ಮತ್ತು 11.5" ಹನ್ನೊಂದೂವರೆ ಅಂಗುಲ ಅಗಲವಿದ್ದು ಪ್ರತಿ ಪತ್ರದ ಎರಡು ಮಗ್ಗುಲಲ್ಲೂ ಸಹ ಸುಂದರ ಸ್ಫುಟವಾದ ಬರವಣಿಗೆಯ ನಡುವೆ ವರ್ಣಚಿತ್ರಗಳನ್ನು ಬಿಡಿಸಲಾಗಿದೆ. ಪ್ರತಿಪತ್ರದ ಮೇಲಿನ ಭಾಗದಲ್ಲಿ ಮುಂಬದಿಯಲ್ಲಿ ಮಾತ್ರ ಕ್ರಮಸಂಖ್ಯೆಯನ್ನು ಸೂಚಿಸಲಾಗಿದೆ. ಪ್ರತಿಯೊಂದು ವರ್ಣಚಿತ್ರಕ್ಕೂ ಪ್ರತ್ಯೇಕವಾಗಿ ಕ್ರಮಸಂಖ್ಯೆಯನ್ನು ನೀಡಲಾಗಿದೆ. ಪ್ರತಿಯೊಂದು ಪತ್ರದ ಸುತ್ತಲೂ ಒಂದು ಅಂಗುಲದಷ್ಟು ಒಳಭಾಗಕ್ಕೆ ಆದಂತೆ ಕಿತ್ತಲೆಯ ಬಣ್ಣದ ಚೌಕಟ್ಟನ್ನು ಬರೆದು ಪುನಃ ಇದರ ಒಳಭಾಗಕ್ಕೆ ಹಳದಿ ಬಣ್ಣದ ಚೌಕಟ್ಟು ಗೆರೆಯನ್ನು ಎಳೆಯಲಾಗಿದೆ. ಪ್ರತಿಯೊಂದು ಸಂಪುಟದ ಅಥವಾ ನವನಿಧಿಗಳಲ್ಲಿನ ಹಾಳೆ ಅಥವಾ ಪತ್ರಗಳನ್ನು ಬಿಡಿಯಾಗಿಯೇ ಇರಿಸಿ ಒಂಭತ್ತು ಪ್ರತ್ಯೇಕ ಸಂಪುಟಗಳಾಗಿಸಿ ಮೇಲೆ ಕೆಳಗೆ ದಪ್ಪನೆಯ ಕಾಗದದ ರಟ್ಟುಗಳನ್ನಿಟ್ಟು ಪ್ರತ್ಯೇಕಿಸಲಾಗಿದೆ. ಈ ಎಲ್ಲ ಒಂಭತ್ತು ಸಂಪುಟಗಳೂ ಸೇರಿದಂತೆಯೇ ಹಸ್ತಪ್ರತಿಗೆ S.A. 852 ಎಂಬ ಕ್ರಮಸಂಖ್ಯೆಯನ್ನು

ನೀಡಲಾಗಿದ್ದು, ನವನಿಧಿಗಳೆಲ್ಲವೂ ಸೇರಿ 578 ಐದು ನೂರ ಎಪ್ಪತ್ತೆಂಟು ಪತ್ರಗಳೂ (ಅರ್ಥಾತ್ 1156 ಪುಟಗಳು) ಸಾವಿರಕ್ಕೂ ಮೀರಿ ವರ್ಣಚಿತ್ರಗಳು ಹಸ್ತಪ್ರತಿಯಲ್ಲಿವೆ.

ಋಷಿಗಳನ್ನು ಹೊರತುಪಡಿಸಿ, ಹಸ್ತಪ್ರತಿಯಲ್ಲಿ ಬರುವ ದೇವತೆಗಳು, ಮಾನವರು ಉಜ್ವಲವಾದ ವೇಷಭೂಷಣಧಾರಿಗಳಾಗಿದ್ದು ಅವರುಗಳ ಚಿತ್ರಗಳಿಗೆ ವಿಶೇಷವಾಗಿ ವಸ್ತ್ರಗಳು, ಆಯುಧ, ವಾದ್ಯ ಮತ್ತು ಆಭರಣಾದಿಗಳಿಗೆ ಎಲೆಹಸಿರು, ಕೆಂಪು ಮತ್ತು ಹಳದಿ ಬಣ್ಣಗಳನ್ನು ಬಳಸಲಾಗಿದೆ. ಹಲವೆಡೆ ವಸ್ತ್ರಗಳಿಗೆ ಗಿಳಿಹಸಿರು, ತಿಳಿಗೆಂಪು, ಕಪ್ಪು ಹಾಗೂ ಬೂದಿಬೆರೆತ ನೀಲಿಯ ಬಣ್ಣಗಳನ್ನು ಲೇಪಿಸಲಾಗಿದೆ. ವಸ್ತ್ರಗಳ ನೆರಿಗೆ, ಮಡಿಕೆ ಮೊದಲಾದವನ್ನು ಸೂಚಿಸಲು ಹಾಗೂ ದೇವತೆಗಳ ವಾಹನಗಳಾದ ಪ್ರಾಣಿ, ಪಕ್ಷಿಗಳ ಚಿತ್ರಗಳಿಗೆ ಅವುಗಳ ಸಹಜಬಣ್ಣವನ್ನೇ ಲೇಪಿಸಲಾಗಿದೆ. ಗ್ರಂಥದಲ್ಲಿ ಹೆಸರಿಸಲಾಗಿರುವ ದೇವತೆಗಳಿಗೂ ಮಾನವರಿಗೂ ಅವರುಗಳ ಶರೀರವರ್ಣವನ್ನು ಗ್ರಂಥದಲ್ಲಿಯೇ ಸೂಚಿಸಿದ್ದರೂ ಸಹ ಎಲ್ಲಿಯೂ ಅವರುಗಳ ಮುಖ ಹಾಗೂ ದೇಹಭಾಗಗಳಿಗೆ ವರ್ಣಲೇಪನವನ್ನು ಮಾಡಿರುವುದಿಲ್ಲ.

ಶ್ರೀತತ್ತ್ವನಿಧಿಯ ರಚನೆಯೇ ಒಂದು ಮಹಾಯೋಜನೆಯಾಗಿದ್ದು, ಒಟ್ಟು ನವನಿಧಿಗಳಲ್ಲಿ ಒಂದೊಂದು ನಿಧಿಯ ರಚನೆಗೂ ಸಹ ನೂರಾರು ಹಸ್ತಪ್ರತಿರೂಪದಲ್ಲಿದ್ದ ಆಕರಗ್ರಂಥಗಳನ್ನು ಮುಮ್ಮಡಿಯವರು ಅವಲಂಬಿಸಿದ್ದಾರೆ. ಮುದ್ರಣಕಲೆಯೇ ತಿಳಿದಿರದ ಅಂದಿನ ದಿನಗಳಲ್ಲಿ ಶ್ರೀತತ್ತ್ವನಿಧಿಯಂತಹ ಲೋಕೋತ್ತರವಾದ ಕೃತಿಯೊಂದನ್ನು ಸಿದ್ಧಪಡಿಸುವಲ್ಲಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ನೇತೃತ್ವದಲ್ಲಿ ಹಲವಾರು ಸಂಸ್ಕೃತ ವಿದ್ವಾಂಸರು, ಸೂಕ್ಷ್ಮಚಿತ್ರಕಾರರು, ಲಿಪಿಕಾರರು ಕೈಜೋಡಿಸಿದ್ದಾರೆ. ಮೊದಲ ಐದು ಸಂಪುಟಗಳಲ್ಲಿ ಒಂದಕ್ಕಿಂತಲೂ ಒಂದು ಸುಂದರವೆನಿಸುವ ವರ್ಣಚಿತ್ರಗಳಿದ್ದು, ವೈಷ್ಣವ ಮತ್ತು ಶೈವನಿಧಿಯಲ್ಲಿ ರೇಖಾಚಿತ್ರಗಳಿವೆ. ಶೈವನಿಧಿಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಯೋಗಾಸನದ ರೇಖಾಚಿತ್ರಗಳಿದ್ದರೂ ಉದ್ದೇಶಪೂರ್ವಕವಾಗಿಯೇ ಅವುಗಳಿಗೆ ವರ್ಣಲೇಪನವನ್ನು ಮಾಡಿಲ್ಲ. ಹಾಗೆಯೇ ಕೊನೆಯ ಸಂಪುಟವಾದ ಕೌತುಕನಿಧಿಯಲ್ಲೂ ಸಹ ವರ್ಣಲೇಪನವಿಲ್ಲದ ರೇಖಾಚಿತ್ರಗಳಿವೆ.

ಪ್ರಾಚ್ಯವಿದ್ಯಾಸಂಶೋಧನಾಲಯದಲ್ಲಿರುವ ಹಸ್ತಪ್ರತಿಯ (S.A.852) ಒಂಭತ್ತು ಸಂಪುಟಗಳ ಅಂದರೆ ನವನಿಧಿಗಳ ಪತ್ರಸಂಖ್ಯೆಯ ಕ್ರಮವನ್ನು ಈ ಕೆಳಗೆ ನೀಡಲಾಗಿದೆ. 1 ರಿಂದ 35 ಸಂಖ್ಯೆಯವರೆಗೆ ಶ್ರೀತತ್ತ್ವನಿಧಿ ಗ್ರಂಥದ ನವನಿಧಿಗಳ ವಿಷಯಾನುಕ್ರಮಣಿಕೆಯನ್ನು ಬರೆಯಲಾಗಿದೆ. ಪುನಃ ಶಕ್ತಿನಿಧಿಯಿಂದ ಗ್ರಂಥದ ಪತ್ರಸಂಖ್ಯೆ ಪ್ರಾರಂಭವಾಗುತ್ತದೆ. ಪ್ರತಿ ಸಂಪುಟದಲ್ಲಿರುವ ಪತ್ರಗಳ ಸಂಖ್ಯೆ, ಚಿತ್ರಗಳ ಸಂಖ್ಯೆ ಹಾಗೂ ಶ್ಲೋಕಗಳ ಸಂಖ್ಯೆಗಳು ಈ ಕೆಳಗಿನಂತಿದೆ -

| | | | | | |
|---|---|---|---|---|---|
| ಪತ್ರಸಂಖ್ಯೆ | 1-35 | - | ವಿಷಯಾನುಕ್ರಮಣಿಕೆ | | |
| ಪತ್ರಸಂಖ್ಯೆ | 1-66 | - | ಶಕ್ತಿನಿಧಿ | - | 106 ವರ್ಣಚಿತ್ರಗಳು |
| ಪತ್ರಸಂಖ್ಯೆ | 71-93 | - | ವಿಷ್ಣುನಿಧಿ | - | 115 ವರ್ಣಚಿತ್ರಗಳು |
| ಪತ್ರಸಂಖ್ಯೆ | 95-125 | - | ಶಿವನಿಧಿ | - | 81 ವರ್ಣಚಿತ್ರಗಳು |
| ಪತ್ರಸಂಖ್ಯೆ | 130-188 | - | ಬ್ರಹ್ಮನಿಧಿ | - | 405 ವರ್ಣಚಿತ್ರಗಳು |

| | | | | | |
|---|---|---|---|---|---|
| ಪತ್ರಸಂಖ್ಯೆ | 190-321 | - | ಗ್ರಹನಿಧಿ | - | 337 ವರ್ಣಚಿತ್ರಗಳು |
| ಪತ್ರಸಂಖ್ಯೆ | 323-355 | - | ವೈಷ್ಣವನಿಧಿ | - | 14 ವರ್ಣಚಿತ್ರಗಳು |
| ಪತ್ರಸಂಖ್ಯೆ | 356-392 | - | ಶೈವನಿಧಿ | - | 263 ರೇಖಾಚಿತ್ರಗಳು |
| ಪತ್ರಸಂಖ್ಯೆ | 394-450 | - | ಆಗಮನಿಧಿ | - | 50 ರೇಖಾಚಿತ್ರಗಳು |
| ಪತ್ರಸಂಖ್ಯೆ | 454-538 | - | ಕೌತುಕನಿಧಿ | - | 162 ರೇಖಾಚಿತ್ರಗಳು |

**ಶ್ರೀತತ್ತ್ವನಿಧಿ (ಗ್ರಂಥದ ಮಹತ್ತ್ವ) :**

ಶ್ರೀತತ್ತ್ವನಿಧಿ ಧಾರ್ಮಿಕ ಜಿಜ್ಞಾಸುಗಳಿಗಾಗಿ, ಸಾಹಿತ್ಯಜ್ಞಾನಪಿಪಾಸುಗಳಿಗಾಗಿ, ಶಿಲ್ಪಿಗಳಿಗಾಗಿ, ಚಿತ್ರಕಾರರಿಗಾಗಿಯೇ ರಚಿತವಾದ ವಿಶ್ವಕೋಶ. ಭಾರತದ ಮಣ್ಣಿನಲ್ಲಿ ಆವಿರ್ಭವಿಸಿದ ಮೂರು ಪ್ರಮುಖ ಧಾರ್ಮಿಕವಾಹಿನಿಗಳಾದ ಶಾಕ್ತಪಂಥ, ವೈಷ್ಣವಪಂಥ ಮತ್ತು ಶೈವಪಂಥಗಳೆಲ್ಲವಕ್ಕೂ ಸಮಾನವಾದ ಪುರಸ್ಕಾರ ಶ್ರೀತತ್ತ್ವನಿಧಿಯಲ್ಲಿ ಕಂಡುಬರುತ್ತದೆ. ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡರಲ್ಲಿಯೂ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಸೇರಿದಂತೆ ಸುಮಾರು ಐವತ್ತೆಂಟು ಗ್ರಂಥಗಳನ್ನು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ರಚಿಸಿದ್ದು 'ಶ್ರೀತತ್ತ್ವನಿಧಿ'ಯು ಅವರ ಒಟ್ಟು ರಚನೆಗಳಲ್ಲಿಯೇ ಮೇರು ಸದೃಶವಾದಂತಹ ಕೃತಿ. ವಿಶ್ವದ ಯಾವುದೇ ಭಾಷೆಯಲ್ಲಿಯೂ ಇಂತಹ ರಚನೆ ಇದುವರೆಗೂ ಕಂಡುಬಂದಿಲ್ಲ. ಹಿಂದೂಧಾರ್ಮಿಕ ಜಗತ್ತಿನಲ್ಲಿರುವಂತೆ ಗ್ರೀಕರಲ್ಲಿಯೂ ಬಹು ಪ್ರಾಚೀನ ಕಾಲದಿಂದಲೂ ಸಹ ಹಲವಾರು ದೇವ-ದೇವಿಯರನ್ನು ಕಲ್ಪಿಸಿ ಆರಾಧಿಸುವ, ನಾನಾ ರೂಪಾಕೃತಿಯ ದೇವತಾತತ್ತ್ವಗಳಿಗೆ ಸೀಮಿತವಾದ ಸಾಹಿತ್ಯರಚನೆಗಳಿವೆ.

ವೈದಿಕಸಂಸ್ಕೃತಿಗೆ ಜಗತ್ತಿನಲ್ಲಿ ಹೆಚ್ಚು ಹತ್ತಿರವಾಗಬಹುದಾದ ಸಂಸ್ಕೃತಿ ಗ್ರೀಕರ ಹೆಲೆನಿಕ್ ಸಂಸ್ಕೃತಿ. ದೇವತಾವಿಷಯಕ ತತ್ತ್ವಗಳಿಗೆ ಸಂಬಂಧಿಸಿದಂತೆ ಹಿಂದೂಧಾರ್ಮಿಕ ಸಂಸ್ಕೃತಿಗೆ ಸರಿಸಮಾನವಾದ ದೇವತಾವಾದ ಗ್ರೀಕ್ ಮೈಥಾಲಜಿ. ಲಭಿಸಿರುವ ಐತಿಹಾಸಿಕ ದಾಖಲೆ ಮತ್ತು ಸಾಹಿತ್ಯಿಕ ದಾಖಲೆಗಳ ಆಧಾರದಿಂದ ಸ್ಪಷ್ಟವಾಗಿರುವಂತೆ ಗ್ರೀಕರಲ್ಲಿಯೂ ಸಹ ಪ್ರಾಚೀನಕಾಲದಿಂದಲೂ ಪ್ರಕೃತಿಯಲ್ಲಿನ ಶಕ್ತಿಯನ್ನು ಹಲವಾರು ದೇವ-ದೇವಿಯರುಗಳನ್ನಾಗಿ ಗುರುತಿಸಿ ರೂಪ ಆಕೃತಿಗಳನ್ನು ಕಲ್ಪಿಸಿ ಪೂಜೆ ಹಾಗೂ ಬಲಿಗಳನ್ನು ಸಲ್ಲಿಸುವ ಪದ್ಧತಿ ರೂಢಿಯಲ್ಲಿತ್ತು. ಅವರಲ್ಲಿ ಕೆಲವರು ಅಂತರಿಕ್ಷದಲ್ಲಿ ಪರಿವಾರಸಹಿತರಾಗಿ, ಕೆಲವರು ಭೂಮಿಯಲ್ಲೂ, ಉಳಿದವರು ಪಾತಾಳಕ್ಕೂ ಸೀಮಿತರಾಗಿದ್ದು ಮಾನವರಿಗಾಗಿಯೇ ಹಲವಾರು ಕರ್ತವ್ಯಗಳನ್ನು ನೆರವೇರಿಸುತ್ತಿದ್ದರು. ಹಿಂದೂಧರ್ಮದಲ್ಲಿನ ದೇವತೆಗಳಂತೆ ಗ್ರೀಕರ ದೇವತೆಗಳೂ ಸಹ ಅಮೃತಸೇವನೆಯಿಂದ ಅಮರರೂ, ಸದಾಸುಖಿಗಳೂ, ಚಿರಯೌವನ ಸಂಪನ್ನರೂ, ಮಾನವರಿಗೆ ಅಗೋಚರರಾಗಿದ್ದರೂ ಸಹ ಪರೀಕ್ಷಾರ್ಥವಾಗಿ ಪಶುಪಕ್ಷಿಗಳ ರೂಪದಲ್ಲಿ ಕಾಣಿಸಿಕೊಳ್ಳುವವರೂ ಆಗಿದ್ದವರು. ಹಿಂದೂಧಾರ್ಮಿಕ ದಾಖಲೆಗಳ ಪ್ರಕಾರ ಮೇರುಪರ್ವತವು ದೇವತೆಗಳು ವಿಹರಿಸುವ, ವಾಸಿಸುವ ತಾಣ, ಅದರ ಅತ್ಯಂತ ಎತ್ತರದ ಮೇಲ್ಭಾಗವೇ ಸ್ವರ್ಗ. ಗ್ರೀಕರ ಧಾರ್ಮಿಕ ಕೃತಿಗಳಲ್ಲಿರುವಂತೆ ಒಲಂಪಸ್ ಪರ್ವತವು ಜಿಯಸ್ (Zeus) ಮತ್ತು ಅವನ ಪರಿವಾರದ ದೇವತೆಗಳ ಆವಾಸಸ್ಥಾನ. ಇಂದ್ರನಂತೆ ಜಿಯಸ್ಸನೂ ಸಹ ವಜ್ರಪಾಣಿ. ವಜ್ರ (Thunder bolt) ಆತನ ನೆಚ್ಚಿನ ಆಯುಧ. ಚಿತ್ರಗಳಲ್ಲಿ,

ಶಿಲ್ಪಗಳಲ್ಲಿ ಮಿಂಚಿನ ಸಹಿತ ಅವನು ಪ್ರದರ್ಶಿತನಾಗಿದ್ದಾನೆ. ಹಿಂದೂಧರ್ಮದಲ್ಲಿ ಸೃಷ್ಟಿ-ಸ್ಥಿತಿ-ಲಯಗಳ ನಿಯಾಮಕರಾಗಿ ಬ್ರಹ್ಮ-ವಿಷ್ಣು-ಮಹೇಶ್ವರರು ಇರುವಂತೆ ಗ್ರೀಕ್ ಧಾರ್ಮಿಕ ಜಗತ್ತಿನಲ್ಲಿ ಜಿಯಸ್ (Zeus), ಪೊಸಿಡನ್ (Poseidon) ಮತ್ತು ಆಡಿಸ್ (Hades) ಎಂಬ ತ್ರಿಮೂರ್ತಿಗಳು ಕ್ರಮವಾಗಿ ಅಂತರಿಕ್ಷ, ಭೂಮಿ ಮತ್ತು ಪಾತಾಳಗಳ ಅಧಿಪತಿಗಳು. ಜಿಯಸ್ಸನು ಇಂದ್ರನಿಗೆ ಸಮಾನವಾಗಿ ಒಲಂಪಸ್ ಪರ್ವತದಲ್ಲಿನ ಸಮಸ್ತ ದೇವತೆಗಳ ಅಧಿಪತಿ. ಆತನ ದೇವಪತ್ನಿ 'ಹಿರಾ' (Hera) ಸಂಪತ್ತಿನ ಅಧಿದೇವತೆ, ಮನೆಯ ಭಾಗ್ಯದೇವತೆ, ಅದೃಷ್ಟಸೂಚಕ ದೇವತೆಯಾಗಿ ಹಿಂದೂ ಜಗತ್ತಿನ ಲಕ್ಷ್ಮಿಯನ್ನು ಹೋಲುತ್ತಾಳೆ. ಪೊಸಿಡನ್ (Poseidon) ಜಲಾಭಿಮಾನಿದೇವರು. ಇವನು ವರುಣನಂತೆ ಸಮಸ್ತ ಜಲಜಂತುಗಳ ಸಂರಕ್ಷಕ, ಸಮುದ್ರಾಧಿಪತಿ ಹಾಗೂ ಸಮಸ್ತನದಿಗಳ, ಭೂಕಂಪಗಳ ನಿಯಂತ್ರಕ, ಡೆಮಿಟರ್ (Demitor) ಎಂಬುವವಳು ಸಮೃದ್ಧಿಯ ಫಲವತ್ತತೆಯ ಅಧಿದೇವತೆ. ಇನ್ನು ಅಪೋಲೋ (Apollo) ನಾಲ್ಕು ಕುದುರೆಗಳನ್ನು ಹೂಡಿರುವ ರಥಾರೂಢನಾಗಿ ಆಕಾಶದಲ್ಲಿ ಸಂಚರಿಸುತ್ತಾ ಮಾನವರ ಆರೋಗ್ಯಭಾಗ್ಯವನ್ನೂ, ಸಂಗೀತ ನೃತ್ಯಾದಿ ಕಲೆಗಳಲ್ಲಿ ವಿಚಕ್ಷಣತೆಯನ್ನೂ ದಯಪಾಲಿಸುವ ದೇವತೆಯಾಗಿದ್ದಾನೆ. ಹಿಂದೂಧರ್ಮದಲ್ಲಿನ ಸೂರ್ಯನನ್ನು ವಿಶೇಷವಾಗಿ ದೇವತೆ ಅಪೋಲೋ ಹೋಲುತ್ತಾನೆ. ಅಥೆನ (Athena) ಹಿಂದೂಧರ್ಮದ ಸರಸ್ವತಿಗೆ ಸಮಾನಳಾಗಿ ವಿದ್ಯಾಭಿಮಾನಿ ಹಾಗೂ ಕಲಾಭಿಮಾನಿದೇವತೆಯಾಗಿದ್ದಾಳೆ. ಇನ್ನು ದೇವಶಿಲ್ಪಿ ವಿಶ್ವಕರ್ಮನಿಗೆ ಹತ್ತಿರವಾಗುವವನು ಹೆಪಾಸ್ಟಿಯಸ್ (Hephasteus). ಇವನು ಲೋಹಕರ್ಮಿಗಳಿಗೆ, ಕಮ್ಮಾರರಿಗೆ ಅಧಿದೇವತೆಯಾಗಿದ್ದು, ಶಿಲ್ಪಗಳಲ್ಲಿಯೂ ಚಿತ್ರಗಳಲ್ಲಿಯೂ ಇವನನ್ನು ಕೈಯಲ್ಲಿ ಸುತ್ತಿಗೆ ಹಿಡಿದಂತೆ ವಿನ್ಯಾಸಗೊಳಿಸುತ್ತಾರೆ. ಆರಿಸ್ (Ares) ಸಮರಾಭಿಮಾನಿ ದೇವತೆಯಾಗಿದ್ದು, ಹಿಂದೂಧರ್ಮದ ಸೇನಾನಿಗೆ (ಕಾರ್ತಿಕೇಯನಿಗೆ) ಸಮಾನನಾಗಿದ್ದಾನೆ. ಹಿಂದೂ ಜಗತ್ತಿನಲ್ಲಿನ ಸೌಂದರ್ಯದೇವತೆ ರತಿಗೆ ಸಮಾನಳಾಗಿ ಆಫ್ರೊಡೈಟ್ (Aphrodite) ಸೌಂದರ್ಯದ, ಪ್ರೇಮದ ಅಧಿದೇವತೆ ಯಾಗಿದ್ದಾಳೆ. ಡಯೋನೈಸಸ್ (Dionysus) ಹಿಂದೂಧರ್ಮದ ಸೋಮನಿಗೆ ಸಮಾನನಾಗಿ ಮದಿರೆಯ ಹಾಗೂ ಪುಂಸತ್ವದ ಅಧಿದೇವತೆಯಾಗಿದ್ದಾನೆ. ಪಾತಾಳಲೋಕದ ಕತ್ತಲೆಯ ಜಗತ್ತಿನ ನರಕದ ಅಧಿಪತಿ ಆಡಿಸ್ (Hades). ಮೂರು ತಲೆಯ ಆರು ಕಣ್ಣುಗಳ ಶ್ವಾನವು ಸದಾ ಇವನ ಸಂಗಾತಿಯಾಗಿದ್ದು, ಮೃತರನ್ನು ಪಾಪಗಳಿಗೆ ಅನುಗುಣವಾಗಿ, ನರಕಕ್ಕೆ ಸೆಳೆದೊಯ್ಯುವ ಆಡಿಸ್ ಹಿಂದೂಧರ್ಮದ ಮೃತ್ಯುದೇವತೆ ಯಮರಾಜನಿಗೆ ಸಮಾನನಾಗಿದ್ದಾನೆ. ಹಿಂದೂಧರ್ಮದಲ್ಲಿ ಇರುವಂತೆ ಅಪ್ಸರೆಯರೂ ಯಕ್ಷಗಂಧರ್ವಕಿನ್ನರರೂ ಗ್ರೀಕ್ ಧಾರ್ಮಿಕಲೋಕದಲ್ಲಿಯೂ ಇದ್ದು, ಅತಿವಿಸ್ತರಭಯದಿಂದ ಈ ಎಲ್ಲಾ ಮಾಹಿತಿಯನ್ನು ಕೈಬಿಡಲಾಗಿದೆ.

ಗ್ರೀಕ್ ದೇವ-ದೇವಿಯರ ರೂಪಾಕೃತಿಗಳನ್ನು ಅವರ ಲೋಕೋತ್ತರವಾದ ಮಹಿಮೆಗಳನ್ನು ಹೋಮರನ ಕ್ರಿ.ಪೂರ್ವದ ಮಹಾಕಾವ್ಯಗಳಾದ ಇಲಿಯಡ್, ಒಡಿಸ್ಸಿಗಳು ಚಿತ್ರಿಸಿವೆ. ವೈದಿಕಸಂಹಿತೆಗಳಂತೆಯೇ ಗ್ರೀಕ್‌ಭಾಷೆಯಲ್ಲಿಯೂ ಸಹ ಛಂದೋಬದ್ಧವಾದ ದೇವತಾಗಾಥೆಗಳು ಹಾಡಲ್ಪಡುತ್ತಿದ್ದುದಕ್ಕೆ ಸಾಕಷ್ಟು ಪುರಾವೆಗಳಿವೆ. ರೋಮನ್ ನಗರದಲ್ಲಿ 1471ರಲ್ಲಿ ಸ್ಥಾಪನೆಗೊಂಡ ಪುರಾತನ ವಸ್ತುಸಂಗ್ರಹಾಲಯವು (Capitolime Museum) ಗ್ರೀಕರ ಹೆಲೆನಿಕ್ ಸಂಸ್ಕೃತಿಯನ್ನು ಬಿಂಬಿಸುವಂತಹ ಶಿಲ್ಪಕಲಾಕೃತಿಗಳನ್ನು ವರ್ಣಚಿತ್ರಗಳನ್ನು ಸಹ ಒಳಗೊಂಡಿದ್ದು ಕೆಲವು ಮಾತ್ರ ಲಭಿಸಿವೆ.

ಆದರೆ ಗ್ರೀಕ್ ಧಾರ್ಮಿಕ ಸಂಸ್ಕೃತಿಯು ಕಾಲಕ್ರಮೇಣ ತನ್ನ ಅಸ್ತಿತ್ವವನ್ನೇ ಕಳೆದುಕೊಂಡು ರೋಮನ್ನರ ಸಂಸ್ಕೃತಿಯೊಡನೆ ಬೆರೆತುಹೋಗಿ ಕ್ರೈಸ್ತಧಾರ್ಮಿಕ ಸಂಪ್ರದಾಯಕ್ಕೆ ಬದ್ಧವಾಗಿರುವುದನ್ನು ಇಂದಿನ ದಿನಗಳಲ್ಲಿ ಕಾಣಬಹುದಾಗಿದೆ.

ಆದರೆ ಹಿಂದೂಧಾರ್ಮಿಕ ಜಗತ್ತಿನ, ದೇವತಾತತ್ತ್ವಗಳ ಅತಿಪ್ರಾಚೀನ ಪ್ರತಿನಿಧಿಗಳಾದ ವೈದಿಕಯುಗದ ಇಂದ್ರ, ಅಗ್ನಿ, ವಾಯು (ಮರುತ್ತು), ವರುಣ, ರುದ್ರ, ವಿಷ್ಣು, ಸವಿತೃ, ಮೊದಲಾದ ದೇವತೆಗಳು ಮುಂದೆ ಪುರಾಣಗಳ ಕಾಲದಲ್ಲಿ ಮತ್ತೂ ವೈಭವೋಪೇತವಾದ ರೂಪಾಕೃತಿಗಳನ್ನು ಪಡೆದು, ತಮ್ಮದೇ ವಿಶಿಷ್ಟವಾದ ವೇಷ-ಭೂಷಣ-ಆಯುಧಗಳಿಂದ ಲೋಕಹಿತಕ್ಕಾಗಿ ಮಾನವರ ನಡುವೆ ಅವತರಿಸುತ್ತಾ ಇಂದಿಗೂ ಸಹ ದೇವಸ್ಥಾನಗಳಲ್ಲಿ ಪೂಜನೀಯರಾಗಿದ್ದಾರೆ. ಅಗ್ನಿಯು ದೀಪಗಳ ಜ್ಯೋತಿಯಾಗಿ, ವರುಣನು ಮಂಗಲಕಲಶಗಳ ಜಲವಾಗಿ, ವಾಯುವು ಧೂಪಗಳ ಮೂಲಕ ಯಾವುದೇ ಶುಭಕಾರ್ಯದಲ್ಲಿ ಇದ್ದೇ ಇರುತ್ತಾರೆ.

ದೇವತೆಗಳ ರೂಪಾಕೃತಿಗಳನ್ನು ಶಿಲ್ಪದಲ್ಲಿ ಸೆರೆಹಿಡಿಯುವ, ವರ್ಣಚಿತ್ರಗಳಲ್ಲಿ ಮೂಡಿಸುವ ಪ್ರಯತ್ನ ಹಿಂದಿನಿಂದಲೂ ರೂಢಿಯಲ್ಲಿದ್ದು, ಪ್ರಾಚೀನಕಾಲದಿಂದ ಇಂದಿನವರೆಗೂ ರಚಿತವಾಗಿರುವ ನಾನಾಗ್ರಂಥಗಳಲ್ಲಿನ ದೇವತಾತತ್ತ್ವಗಳನ್ನು ಮೂಲ ಆಕರಗಳಲ್ಲಿನ ಶ್ಲೋಕಗಳ ಸಹಿತ ಸಚಿತ್ರ ನಿರೂಪಣೆಯ ಪ್ರಯತ್ನ ಶ್ರೀತತ್ತ್ವನಿಧಿಯಲ್ಲಿ ನಡೆದಿದೆ. ಆದರೆ ಶ್ರೀತತ್ತ್ವನಿಧಿಯಲ್ಲಿರುವಂತೆ ಪ್ರಮುಖ ಧರ್ಮವೊಂದರಲ್ಲಿನ ನಾನಾ ದೇವತೆಗಳಿಗೆ ಋಷಿಗಳಿಗೆ, ಮಹಿಮಾನ್ವಿತ ಸ್ತ್ರೀ-ಪುರುಷರಿಗಷ್ಟೇ ಅಲ್ಲದೆ ಧಾರ್ಮಿಕ ಕೃತಿಗಳಿಗೂ, ಸಾಹಿತ್ಯ-ಕಲೆಗಳಿಗೂ ರೂಪಾಕೃತಿಗಳನ್ನು ಕಲ್ಪಿಸಿ ವರ್ಣಚಿತ್ರಗಳಿಂದ ಅಭಿವ್ಯಕ್ತಿಗೊಳಿಸಿ ಗ್ರಂಥರೂಪದಲ್ಲಿ ತರುವ ಪ್ರಯತ್ನದಲ್ಲಿ ಮುಮ್ಮಡಿಯವರೇ ಅದ್ವಿತೀಯರು. ಸಾಹಿತ್ಯ ಮತ್ತು ಚಿತ್ರಕಲೆಗಳ ರಮಣೀಯ ಸಮಾಗಮವಾಗಿರುವ ಶ್ರೀತತ್ತ್ವನಿಧಿ ಸಮಸ್ತ ವಿಶ್ವದ ಸಾಹಿತ್ಯಲೋಕಕ್ಕೆ ಕರ್ನಾಟಕದ ಕೊಡುಗೆ, ತತ್ರಾಪಿ ಮೈಸೂರು ವಿಶ್ವವಿದ್ಯಾನಿಲಯದ ಕೊಡುಗೆ.

'ಶ್ರೀತತ್ತ್ವನಿಧಿ' ಹೆಸರಿನ ಔಚಿತ್ಯ :

ಶ್ರೀತತ್ತ್ವನಿಧಿಯು ಪರಮಪ್ರಾಚೀನ ಕೃತಿಗಳಾದಂತಹ ವೇದಗಳಿಂದ ಆರಂಭಿಸಿ ಕ್ರಿ.ಶ. 1709-10ರಲ್ಲಿ ರಚಿತವಾದ ಕೆಳದಿಯ ಬಸವಭೂಪಾಲನ ಶಿವತತ್ತ್ವರತ್ನಾಕರದವರೆಗೂ, ಸಂಸ್ಕೃತ ಸಾಹಿತ್ಯದ ಸುದೀರ್ಘ ಇತಿಹಾಸದಲ್ಲಿ ಪ್ರಸಿದ್ಧವಾಗಿರುವ ಅಸಂಖ್ಯಾತ ಗ್ರಂಥಗಳ ಕೂಲಂಕಷ ಅಧ್ಯಯನ ನಡೆಸಿ ಸಾರಸಂಗ್ರಹರೂಪದಲ್ಲಿ ಹೊರತಂದಿರುವ ವಿಶ್ವಕೋಶವಾಗಿದೆ. ಇದರಲ್ಲಿನ ಒಟ್ಟು ಒಂಭತ್ತು ಭಾಗಗಳು ನವನಿಧಿಗಳೆಂಬ ಹೆಸರಿನಲ್ಲಿ ಶಕ್ತಿ-ವಿಷ್ಣು-ಶಿವ-ಬ್ರಹ್ಮ-ಗ್ರಹ-ವೈಷ್ಣವ- ಶೈವ-ಆಗಮ-ಕೌತುಕನಿಧಿಗಳಾಗಿ ವಿಂಗಡಣೆಗೊಂಡಿದ್ದು ಈ ಮಹಾಕೃತಿಯ ರಚನೆಗಾಗಿ ಪರಿಶೀಲಿಸಲಾಗಿರುವ ಆಕರಗ್ರಂಥಗಳ ಪಟ್ಟಿಯೇ ದೀರ್ಘವಾಗಿದೆ. ಪ್ರಥಮ ಸಂಪುಟ 'ಶಕ್ತಿನಿಧಿ'ಯ ಪ್ರಾರಂಭದಲ್ಲಿ ಬರುವ ಪ್ರಾಸ್ತಾವಿಕ ಶ್ಲೋಕಗಳಲ್ಲಿ ಸಂಸ್ಕೃತ ಸಾಹಿತ್ಯದ ಯಾವ ಯಾವ ಪ್ರಕಾರ-ಶಾಖೆ-ಉಪಶಾಖೆಗಳಿಗೆ ಸಂಬಂಧಿಸಿದ ಶಾಸ್ತ್ರಗ್ರಂಥಗಳನ್ನು ಅವಲೋಕಿಸಲಾಗಿದೆಯೆಂಬುದನ್ನು ಅತಿ ಸಂಕ್ಷಿಪ್ತವಾಗಿ ನೀಡಲಾಗಿದೆ :

**ಶ್ರೀಮಚ್ಚಾಮುಂಡಿಕಾದೇವೀಕಟಾಕ್ಷಶುಭವೀಕ್ಷಣಾತ್ |**
**ನಿಗಮಾಗಮತಂತ್ರಾಣಾಂ ಪುರಾಣವಚಸಾಮಪಿ || 5 ||**

ಧರ್ಮಶಾಸ್ತ್ರೇತಿಹಾಸಾನಾಮ್ ಉಪತಂತ್ರಗಿರಾಮಪಿ |
ಮಂತ್ರಜ್ಯೋತಿಷಶಿಲ್ಪಾನಾಂ ಸಾರಂ ಸಂಗೃಹ್ಯ ತತ್ತ್ವತಃ || 6 ||

ಇದುವರೆಗೂ ಜಗತ್ತಿನಲ್ಲಿಯೇ ಎಲ್ಲಿಯೂ ಸಹ ಶ್ರೀತತ್ತ್ವನಿಧಿಯಂತಹ ದೇವತಾವಿಷಯಕವಾದ ಸಚಿತ್ರ ವಿಶ್ವಕೋಶಗ್ರಂಥ ರಚನೆಗೊಂಡಿಲ್ಲ. ಸಕಲಶಾಸ್ತ್ರಸಾರವಾದ ತಮ್ಮ ಕೃತಿಗೆ 'ಶ್ರೀತತ್ತ್ವನಿಧಿ' ಎಂಬ ಹೆಸರನ್ನು ಮುಮ್ಮಡಿಯವರು ಆಯ್ಕೆ ಮಾಡಿಕೊಂಡಿರುವುದೂ ಸಹ ಅತ್ಯಂತ ಸಮರ್ಪಕವಾಗಿದ್ದು, ಹಿಂದಿನ ಪ್ರತಿಭಾನ್ವಿತ ಗ್ರಂಥಕಾರರನ್ನು, ದಾರ್ಶನಿಕರನ್ನು ಅವರು ಅನುಸರಿಸಿದ್ದಾರೆ. ಶ್ರೀತತ್ತ್ವನಿಧಿಯೆಂಬ ಸಮಸ್ತ ಪದದಲ್ಲಿ 'ಶ್ರೀ' ಎಂದರೆ ಸಂಪತ್ತು, ಶೋಭೆ, ಸೌಂದರ್ಯ. ಸಂಪತ್ತಿನ ಅಧಿದೇವತೆ ಲಕ್ಷ್ಮಿಯ ಹೆಸರೂ ಹೌದು. ಪವಿತ್ರ ಗ್ರಂಥಗಳಿಗೆ ಸಂಬಂಧಿಸಿದಂತೆ ಆಂಗ್ಲಭಾಷೆಯಲ್ಲಿ 'Holy' ಎಂಬ ಪದವನ್ನು (ಉಪಸರ್ಗವನ್ನು) ಹಚ್ಚಿ Holy Bhagavadgita, Holy Bible, Holy Quran ಎಂಬುದಾಗಿ ವ್ಯವಹರಿಸುವುದು ರೂಢಿಯಲ್ಲಿದೆ. 'ಸಿದ್ಧಂ ಸಿದ್ಧಾಧಿಕಾರಾಂಶ್ಚ ಶ್ರೀಪೂರ್ವಂ ಸಮುದೀರಯೇತ್' ಎಂಬ ಸೂಕ್ತಿಗೆ ಅನುಗುಣವಾಗಿ 'ಶ್ರೀ' ಎಂಬುದು ದೇವತೆಗಳ, ಶ್ರೇಷ್ಠಕೃತಿಗಳ, ಶ್ರೇಷ್ಠವ್ಯಕ್ತಿಗಳ ಹೆಸರನ್ನು ಪ್ರಾರಂಭಿಸುವ ಮೊದಲು ಹಚ್ಚಬೇಕಾದ ಗೌರವದ್ಯೋತಕವೂ ಹೌದು. ಆಂಗ್ಲಭಾಷೆಯಲ್ಲಿನ Mister, Mistressಗೆ ಸಮಾನವಾಗಿ ಭಾರತೀಯರಲ್ಲಿ ರೂಢಿಯಲ್ಲಿರುವ ಶ್ರೀಮಾನ್, ಶ್ರೀ ಹಾಗೂ ಶ್ರೀಮತಿ ಎಂಬ ಮರ್ಯಾದೆಯ ದ್ಯೋತಕವೂ ಹೌದು. ಇನ್ನು 'ತತ್ತ್ವ'ವೆಂದರೆ ಸಿದ್ಧಾಂತರೂಪದಲ್ಲಿರುವುದು, ಜೀವ-ಜಗತ್ತುಗಳ ಸಾರಭೂತವಾಗಿರುವುದು, ಜಗತ್ತಿನಲ್ಲಿರುವಂತಹದ್ದು, ಎಣಿಕೆಗೆ ನಿಲುಕುವಂತಹದ್ದು ಎಂಬ ಅರ್ಥದಲ್ಲಿ 'ತತ್ತ್ವ' ಪದದ ಬಳಕೆಯಾಗಿದೆ. ಜೀವ-ಜಗತ್ತನ್ನು ಇಪ್ಪತ್ತೈದು ತತ್ತ್ವಗಳಲ್ಲಿ ವಿವರಿಸಿರುವ ಸಾಂಖ್ಯದರ್ಶನದ ಪ್ರತಿಪಾದಕರಾದ ಕಪಿಲಮಹರ್ಷಿಗಳು ತಮ್ಮ ಕೃತಿಗೆ 'ತತ್ತ್ವಸಮಾಸ'ವೆಂಬ ಹೆಸರನ್ನು ನೀಡಿರುವರು. ಮಹಾದಾರ್ಶನಿಕ ಭಾಮತಿಕಾರರಾದ ವಾಚಸ್ಪತಿಮಿಶ್ರರು ಸಾಂಖ್ಯದರ್ಶನಕ್ಕೆ ಸಂಬಂಧಿಸಿದ ತಮ್ಮ ಕೃತಿಗೆ 'ತತ್ತ್ವಕೌಮುದೀ' ಎಂಬುದಾಗಿಯೂ, ಯೋಗಸೂತ್ರದ ವ್ಯಾಸಭಾಷ್ಯಕ್ಕೆ ಬರೆದ ವಿವರಣೆಗೆ 'ತತ್ತ್ವವೈಶಾರದೀ' ಎಂದೂ ಸಹ ಹೆಸರನ್ನು ಕೊಟ್ಟಿರುವರು. ಶ್ರೀತತ್ತ್ವನಿಧಿಯೂ ಸಹ ಹಲವಾರು ಆಕರಗ್ರಂಥಗಳ ಸಾರಸಂಗ್ರಹವೆಂದು ಮುಮ್ಮಡಿಯವರೇ ಮೇಲಿನ ಶ್ಲೋಕದಲ್ಲಿ 'ಸಾರಂ ಸಂಗ್ರಹ್ಯ ತತ್ತ್ವತಃ' ಎಂಬುದಾಗಿ ಸ್ವತಃ ತಿಳಿಸಿದ್ದಾರೆ. 'ಶ್ರೀ-ತತ್ತ್ವ-ನಿಧಿ' ಎಂಬಲ್ಲಿ 'ನಿಧಿ' ಎಂದರೆ ರಾಶಿ, ಸಂಗ್ರಹ, ಸಂಪತ್ತು, ನೆಲೆ, ಕೂಡಿಸುವಿಕೆ (ಜಲನಿಧಿ, ತಪೋನಿಧಿ, ತೋಯನಿಧಿ) ಎಂಬುದಾಗಿ ಸಾಂದರ್ಭಿಕವಾದ ನಾನಾ ಅರ್ಥಗಳಿವೆ. ಹಿಂದೂ ಧಾರ್ಮಿಕ ಗ್ರಂಥಗಳಾದ ಪುರಾಣಗಳಲ್ಲಿರುವಂತೆ ಧನಕನಕಾದಿ ಸಂಪತ್ತಿನ ಅಧಿಪತಿ ಕುಬೇರ. ಇವನಲ್ಲಿರುವ ಒಂಬತ್ತು ನಿಧಿಗಳು 'ಕುಬೇರಸ್ಯ ನವಧಾ ರತ್ನವಿಶೇಷಃ' ಎಂಬ ಸೂಕ್ತಿಗನುಗುಣವಾಗಿ ಕುಬೇರನ ಅಪೂರ್ವ ಸಂಪತ್ತುಗಳು ಕ್ರಮವಾಗಿ ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ ಮತ್ತು ವರ ಮುಂತಾದವುಗಳು. (ಮಹಾಪದ್ಮಶ್ಚ ಪದ್ಮಶ್ಚ ಶಂಖೋ ಮಕರಕಚ್ಛಪೌ | ಮುಕುಂದಃ ಕುಂದನೀಲೌ ಚ ವರಶ್ಚ ನಿಧಯೋ ನವ || ಅಮರಕೋಶ 1-81) ಜ್ಞಾನಸಂಪತ್ತಿನ ನಿಧಿಯಾಗಿರುವ ಶ್ರೀತತ್ತ್ವನಿಧಿಯ ಒಂಭತ್ತು ಸಂಪುಟಗಳನ್ನು 'ನವನಿಧಿ'ಗಳೆಂದು ಹೆಸರಿಸುವಲ್ಲಿ ಮುಮ್ಮಡಿಯವರಿಗೆ ಕುಬೇರನ ನವನಿಧಿಗಳೇ ಪ್ರೇರಣೆಯಾಗಿರಬಹುದು. ಶ್ರೀತತ್ತ್ವನಿಧಿಯಲ್ಲಿನ ನವನಿಧಿಗಳ ಅಧ್ಯಯನದಿಂದ ಕುಬೇರನ

ನವನಿಧಿಗಳನ್ನು ಸಹ ಸುಲಭವಾಗಿಸಿಕೊಳ್ಳಬಹುದು ಎಂದು ಶಕ್ತಿನಿಧಿಯ ಪೀಠಿಕಾಶ್ಲೋಕಗಳಲ್ಲಿ ಸೂಚಿಸಲಾಗಿದೆ. 'ಏತನ್ನವನಿಧಿಜ್ಞಾನಾತ್ ಸುಲಭಾ ನಿಧಯೋ ನವ' (ಶಕ್ತಿನಿಧಿ-16).

**ಶ್ರೀತತ್ತ್ವನಿಧಿಯ ನವನಿಧಿಗಳ ಸಾರಾಂಶ :**

**ಶಕ್ತಿನಿಧಿ :** ಶಕ್ತಿನಿಧಿಯಲ್ಲಿ ಲೋಕಸೃಷ್ಟಿಗೆ ಕಾರಣಳಾದ ಆದಿಶಕ್ತಿ ಪಾರ್ವತಿಯ ಹಾಗೂ ಅವಳ ಪರಿವಾರದ ದೇವ-ದೇವಿಯರ ವಿವಿಧರೂಪಾಕೃತಿಗಳಿಗೆ ಸಂಬಂಧಿಸಿದ ಧ್ಯಾನಶ್ಲೋಕಗಳನ್ನು ಹಲವಾರು ಆಕರಗಳಿಂದ ಸಂಗ್ರಹಿಸಿ ಚಿತ್ರಸಹಿತ ನೀಡಲಾಗಿದೆ. ಶಕ್ತಿಯ ಉಪಾಸನೆ ಪ್ರಾಚೀನಕಾಲದಿಂದಲೂ ಸಹ ಭಾರತದಲ್ಲಿ ರೂಢಿಯಲ್ಲಿದ್ದು, ಹರಪ್ಪ ಮೊಹೆಂಜೋದಾರೋಗಳಲ್ಲಿ ನಡೆಸಿದ ಭೂಸಂಶೋಧನೆಗಳೂ ಸಹ ಶಾಕ್ತಸಂಪ್ರದಾಯದ ಪ್ರಾಚೀನತೆಯನ್ನು ಎತ್ತಿ ಹಿಡಿಯುತ್ತವೆ. ಭಾರತೀಯ ಸಮಾಜದಲ್ಲಿ ತಾಯಿಯ ವಿಷಯದಲ್ಲಿರುವ ಪೂಜ್ಯಭಾವನೆ ತೈತ್ತಿರೀಯ ಉಪನಿಷತ್ತಿನಲ್ಲಿ 'ಮಾತೃದೇವೋ ಭವ' ಮಹಾಭಾರತದ "ಭೂಮೇಃ ಗರೀಯಸೀ ಮಾತಾ" ಮೊದಲಾದ ಸೂಕ್ತಿಗಳೇ ನಿದರ್ಶನ. ಮೊದಲು ವಿಷ್ಣುವನ್ನು ವಂದಿಸಿ ಮುಮ್ಮಡಿಯವರು ತಮ್ಮ ಕುಲದೈವವಾದ ಚಾಮುಂಡೇಶ್ವರಿಯ ವರ್ಣನಾಪರವಾದ ಶ್ಲೋಕಗಳಿಂದ ಪ್ರಪ್ರಥಮ ನಿಧಿಯಾದ ಶಕ್ತಿಯನ್ನು ಪ್ರಾರಂಭಿಸುತ್ತಾರೆ.

ಲಕ್ಷ್ಮೀಪ್ರದಾನಸಮಯೇ ನವವಿದ್ರುಮಾಭಾಂ
ವಿದ್ಯಾಪ್ರದಾನಸಮಯೇ ಶರದಿಂದುಶುಭ್ರಾಮ್ |
ವಿದ್ವೇಷಿವರ್ಗವಿಜಯೇ ಹರಿನೀಲವರ್ಣಾ-
ಮಂಬಾಂ ತ್ರಿಲೋಕಜನನೀಮಜನಿಂ ಪ್ರಪದ್ಯೇ || (ಶಕ್ತಿನಿಧಿ, 2)

"ಸಂಪತ್ತನ್ನು ನೀಡುವಾಗ ಹವಳದ ಕುಡಿಯಂತಹ ಅರುಣಕಾಂತಿಯ (ಲಕ್ಷ್ಮೀಯಾಗಿ), ವಿದ್ಯೆಯನ್ನು ಅನುಗ್ರಹಿಸುವಾಗ ಶರತ್ಕಾಲದ ಚಂದ್ರಮನಂತೆ ಧವಲಕಾಂತಿಯ (ಸರಸ್ವತಿಯಾಗಿ), ಶತ್ರುಗಳ ದಮನಕಾಲದಲ್ಲಿ ಇಂದ್ರನೀಲಮಣಿಯಂತೆ ಕೃಷ್ಣವರ್ಣೆ (ಕಾಳಿ)ಯಾಗಿಯೂ ಇರುವ ತ್ರಿಲೋಕಜನನಿಯಾದ ಸ್ವತಃ ಅಜನಿ (ಜನ್ಮರಹಿತೆ)ಯಾದ ತಾಯಿ 'ಅಂಬಾ' ಪಾರ್ವತಿಗೆ ಶರಣು" ಎಂಬುದಾಗಿ ಭಕ್ತಿಪೂರ್ವಕವಾಗಿ ನುಡಿಯುತ್ತಾರೆ.

ಶಕ್ತಿನಿಧಿಯ ಒಟ್ಟು ಸಾವಿರದ ಮುನ್ನೂರು ಶ್ಲೋಕಗಳ ಇತಿಮಿತಿಯಲ್ಲಿ ಹಿಂದೂಧರ್ಮದಲ್ಲಿ ಬರುವ ಅಸಂಖ್ಯಾತ ಸ್ತ್ರೀದೇವತೆಯರೆಲ್ಲರ ರೂಪಾಕೃತಿಗಳಿಗೆ ಸಂಬಂಧಿಸಿದಂತೆ ಹಲವು ಆಧಾರಗಳಿಂದ ಧ್ಯಾನಶ್ಲೋಕಗಳನ್ನು ಸಂಗ್ರಹಿಸಿ ವರ್ಣಚಿತ್ರಸಹಿತ ನೀಡಲಾಗಿದೆ. ಜಗನ್ಮಾತೆಯು ಚಾಮುಂಡಾಂಬಿಕೆಯಾಗಿಯೂ, ಮಹಾಲಕ್ಷ್ಮೀಯಾಗಿಯೂ, ಮಹಾಸರಸ್ವತಿಯಾಗಿಯೂ ರಾಜರಾಜೇಶ್ವರಿಯಾಗಿಯೂ ಶ್ರೀಚಕ್ರದಲ್ಲಿ ನೆಲಸಿರುವ ಲಲಿತಾಂಬಿಕೆಯಾಗಿಯೂ ರಾರಾಜಿಸಿದ್ದಾಳೆ.

ಪಾರ್ವತಿಯ ಇನ್ನಿತರ ವಿವಿಧರೂಪಗಳು, ದುರ್ಗಾಧ್ಯಾನ, ತುಳಸೀಧ್ಯಾನ, ಮೂಲಾಧಾರಾದಿ ಚಕ್ರಗಳಲ್ಲಿ ನೆಲಸಿರುವ ಸಪ್ತಪೀಠೇಶ್ವರಿಯರು, ಚತುಷ್ಷಷ್ಟಿಕಲಾದೇವಿಯರು, ಯೋಗಿನಿಯರು, ವಾಗೀಶ್ವರಿಯ ವಿವಿಧರೂಪಗಳ ಸಚಿತ್ರ

ವರ್ಣನೆಗಳಿವೆ. ಸಿದ್ಧ, ಶಾಬರ, ತಂತ್ರ ಮೊದಲಾದ ಗ್ರಂಥವನ್ನಾಧರಿಸಿ ವರ್ಣಮಾಲೆಯ ಐವತ್ತೊಂದು ಅಕ್ಷರಗಳನ್ನು ದೇವತೆಗಳೆಂದು ಕಲ್ಪಿಸಿ ವರ್ಣಚಿತ್ರಗಳ ಸಹಿತ ಧ್ಯಾನಶ್ಲೋಕಗಳನ್ನು ನೀಡಲಾಗಿದೆ. ಶಕ್ತಿನಿಧಿಯಲ್ಲಿನ ಮತ್ತೊಂದು ವಿಶೇಷವೆಂದರೆ ಚಿತ್ರಸಂಖ್ಯೆ 55a ರಲ್ಲಿ ಚಿತ್ರಿತವಾಗಿರುವ (ಮಣಿಕರ್ಣಿಕಾ ದೇವಿಯ ಹಸ್ತದಲ್ಲಿರುವ) ಶುಕ. ಈ ಶುಕದ ಬಿಚ್ಚಿದ ರೆಕ್ಕೆಯಲ್ಲಿರುವ 'ನಮಃ ಶಿವಾಯ' ಮಂತ್ರದ 120 ರೀತಿಯ ಉಚ್ಚಾರಣಾಕ್ರಮವನ್ನು ಕೋಷ್ಟಕ ರೂಪದಲ್ಲಿ ಸೂಚಿಸಲಾಗಿದೆ. ಮೋಕ್ಷಪ್ರಾಪ್ತಿಗೆ ಸುಲಭಮಾರ್ಗವಾದ ಪಂಚಾಕ್ಷರಮಹಾಮಂತ್ರದ ನೂರಇಪ್ಪತ್ತು ಬಗೆಯ ಪ್ರಸ್ತಾರಕ್ರಮವನ್ನು ಶಕ್ತಿನಿಧಿಯ ಕನ್ನಡ ಅನುವಾದಭಾಗದಲ್ಲಿ ನೀಡಲಾಗಿದೆ.

**ವಿಷ್ಣುನಿಧಿ :** ಹಿಂದೂಧಾರ್ಮಿಕ ಜಗತ್ತಿನಲ್ಲಿ ಬ್ರಹ್ಮ-ವಿಷ್ಣು-ಮಹೇಶ್ವರರು ಸೃಷ್ಟಿ-ಸ್ಥಿತಿ-ಲಯಗಳ ತ್ರಿಮೂರ್ತಿಗಳೆಂದೇ ಪ್ರಸಿದ್ಧರು. ಪಾಂಚರಾತ್ರ, ಭಾಗವತ, ಅಷ್ಟಾಕ್ಷರೀಕಲ್ಪ, ಮಯೂಖ, ಬ್ರಹ್ಮಾಂಡಪುರಾಣ, ಭವಿಷ್ಯೋತ್ತರಪುರಾಣಾದಿ ಗ್ರಂಥಗಳನ್ನು ಆಧರಿಸಿ ಮಹಾವಿಷ್ಣುವಿನ ವಿವಿಧರೂಪಾಕೃತಿಗಳ ವರ್ಣನೆಗಳ ಧ್ಯಾನಶ್ಲೋಕಗಳನ್ನು ಸಂಗ್ರಹಿಸಿ ಅವುಗಳಿಗನುಗುಣವಾದ ವರ್ಣಚಿತ್ರಗಳನ್ನು ನೀಡಲಾಗಿದೆ. ವಿರಾಟ್‌ಪುರುಷನಾಗಿ ಮಹಾವೈಕುಂಠಮೂರ್ತಿಯಾಗಿ ಲಕ್ಷ್ಮೀ, ಭೂದೇವಿ, ಶ್ರೀದೇವಿಯರೊಡನೆ ವಿಷ್ಣುವು ವಿರಾಜಿಸಿದ್ದಾನೆ. ಮಹಾವಿಷ್ಣುವಿನ ಪರಿವಾರದಲ್ಲಿರುವ ದೇವತಾಸ್ತ್ರೀ-ಪುರುಷರೆಲ್ಲರೂ ವಿಷ್ಣುನಿಧಿಯಲ್ಲಿ ಚಿತ್ರಿತರಾಗಿದ್ದಾರೆ. ಪಂಚಮುಖಿ ನರಸಿಂಹ, ಪ್ರತಾಪರಾಮ, ಪಟ್ಟಾಭಿರಾಮ, ಅನಂತಮೂರ್ತಿ, ಸಂತಾನಗೋಪಾಲ, ಮದನಗೋಪಾಲ ಹಾಗೂ ವಿಷ್ಣುವಿನ ಅಪರೂಪದ ರೂಪಾಕೃತಿಯಾದ ಅಷ್ಟಮುಖ ಗಂಡಭೇರುಂಡ ನರಸಿಂಹಮೂರ್ತಿಯ ಅದ್ಭುತ ವರ್ಣಚಿತ್ರ ವಿಷ್ಣುನಿಧಿಯ ಮತ್ತೊಂದು ಪ್ರಮುಖ ಆಕರ್ಷಣೆ. ಜಗದ್ರಕ್ಷಕನಾದ ಮಹಾವಿಷ್ಣು ಪ್ರಲಯಕಾಲದಲ್ಲಿ ಲೋಕರಕ್ಷಣೆಗಾಗಿ ಮತ್ಸ್ಯಾವತಾರಿಯಾಗಿಯೂ, ಶ್ರೀದೇವಿ ಭೂದೇವಿಯರನ್ನು ರಕ್ಷಿಸಿದ ಮಹಾವರಾಹಾವತಾರಿಯಾಗಿ, ಅಮೃತಮಥನ ಸಮಯದಲ್ಲಿ ಕೂರ್ಮಾವತಾರಿಯಾಗಿ, ಹಿರಣ್ಯಕಶಿಪುವನ್ನು ವಧಿಸಲು ನರಸಿಂಹನಾಗಿ, ಬಲಿಯ ಬಳಿ ದಾನ ಕೇಳುವಾಗ ವಾಮನನಾಗಿ, ರಾವಣಸಂಹಾರಕ್ಕಾಗಿ ಶ್ರೀರಾಮನಾಗಿ, ಕ್ಷತ್ರಿಯ ಸಂಹಾರಕ್ಕಾಗಿ ಅವತರಿಸಿದ ಪರಶುರಾಮನಾಗಿ, ಹಲಧರ ಬಲರಾಮನಾಗಿ, ಕೃಷ್ಣನಾಗಿ, ಕಲ್ಕಿಯಾಗಿ ಹೀಗೆ ದಶಾವತಾರಿಯಾಗಿ ಮೂಡಿ ಬಂದಿರುವ ಭವ್ಯಚಿತ್ರಸಹಿತ ಧ್ಯಾನಶ್ಲೋಕಗಳನ್ನು ವಿಷ್ಣುನಿಧಿ ಒಳಗೊಂಡಿದೆ. ಮಹಾವಿಷ್ಣುವಿನ ಬುದ್ಧಾವತಾರವನ್ನು ಶ್ರೀತತ್ತ್ವನಿಧಿಯಲ್ಲಿ ಪರಿಗಣಿಸಿಲ್ಲ.

**ಶಿವನಿಧಿ :** ಆಗಮ-ಪುರಾಣಾದಿ ಮೂಲಗಳಿಂದ ಮಹಾದೇವನ ನಾನಾಸ್ವರೂಪಗಳನ್ನು ಚಿತ್ರಸಹಿತ ವರ್ಣಿಸುವ ಧ್ಯಾನಶ್ಲೋಕಗಳಿಗಾಗಿ ಶಿವನಿಧಿಯು ಮೀಸಲಾಗಿದೆ. ಸದಾಶಿವನು ಶ್ವೇತವರ್ಣದ ಮಹಾಕೈಲಾಸಮೂರ್ತಿಯಾಗಿ, ಮೂವತ್ತಾರು ಭುಜಗಳ ಅಘೋರಮೂರ್ತಿಯಾಗಿ ವರ್ಣಚಿತ್ರಕಾರ ಕುಂಚದಿಂದ ಭವ್ಯವಾಗಿ ಮೂಡಿಬಂದಿದ್ದಾನೆ. ಮಹಾಕಾಳೀ ಸಮೇತನಾಗಿ ನೀಲವರ್ಣದಿಂದ ಶೋಭಿಸುವ ಮಹಾಕಾಲನಾಗಿ, ಶುಭ್ರವರ್ಣದ ಅಮೃತಮೃತ್ಯುಂಜಯನಾಗಿ, ಅರುಣಿಮಕಾಂತಿಯ ನೀಲಕಂಠನಾಗಿ, ಶ್ವೇತವರ್ಣದ ರುದ್ರಮಹೇಶ್ವರನಾಗಿ ರಾರಾಜಿಸಿರುವ ಶಿವನ ಸುಂದರ ಹಾಗೂ ರುದ್ರಭಯಂಕರರೂಪಗಳ ವರ್ಣನೆಯನ್ನು ಕಲಾವಿದರು ಅದ್ಭುತ ರಮಣೀಯವೆನಿಸುವಂತೆ ಚಿತ್ರಿಸುವಲ್ಲಿ ತಮ್ಮ

ಕೌಶಲವನ್ನು ಮೆರೆದಿದ್ದಾರೆ. ಪಂಚಾನನ ಶಿವನ ಮೂರ್ತಿಗಳಾದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನಸ್ವರೂಪ ವರ್ಣನೆಗಳು ಸುಂದರಚಿತ್ರಸಹಿತವಾಗಿ ಮೂಡಿಬಂದಿವೆ. ಹಿಂದೂಧಾರ್ಮಿಕ ಜಗತ್ತಿನಲ್ಲಿ ಶಿವನು ನೃತ್ಯಾಭಿಮಾನಿ ದೇವತೆ. ದೇವಲೋಕದ ಗಾಯಕ ತುಂಬುರನ ಗಾಯನಕ್ಕೆ ನರ್ತಿಸುವ ನಟರಾಜ ಶಿವನನ್ನು, ಭವಾನಿಯ ಲಾಸ್ಯವಿಲಾಸವನ್ನು ವರ್ಣಿಸುವ ಧ್ಯಾನಶ್ಲೋಕಗಳನ್ನು ನಾನಾ ಆಕರಗಳಿಂದ ಸಂಗ್ರಹಿಸುವಲ್ಲಿ ಮುಮ್ಮಡಿಯವರು ಸಫಲರಾಗಿದ್ದಾರೆ. ಚಿತ್ರಕಾರರೂ ಸಹ ಶಿವನ ನಾಟ್ಯ ಹಾಗೂ ಭವಾನಿಯ ಲಾಸ್ಯವೆರಡನ್ನೂ ಅದ್ಭುತವೆಂಬಂತೆ ತಮ್ಮ ಚಿತ್ರಗಳಲ್ಲಿ ಮೂಡಿಸಿದ್ದಾರೆ.

ಜಗತ್ತಿನ ವೈವಿಧ್ಯಮಯವಾದ ಸೃಷ್ಟಿ ಪ್ರಕ್ರಿಯೆಗೆ ಶಿವನ ತಾಂಡವ ನೃತ್ಯವೇ ನಾಂದಿ. ಭಾರತೀಯರ ಪ್ರಕಾರ ನೃತ್ಯಕಲೆಯ ಅಧಿದೇವತೆಗಳಾದ ಶಿವ-ಶಿವಾನಿಯರು ಶಿವನಿಧಿಯಲ್ಲಿ ಸಪ್ತವಿಧವಾದ ಶಿವತಾಂಡವನೃತ್ಯಗಳಾದ ಆನಂದತಾಂಡವ, ಸಂಧ್ಯಾತಾಂಡವ, ಉಮಾತಾಂಡವ, ಗೌರೀತಾಂಡವ, ಕಾಲಿಕಾತಾಂಡವ, ತ್ರಿಪುರತಾಂಡವ, ಸಂಹಾರತಾಂಡವಗಳನ್ನು ಸೂಕ್ತ ಆಧಾರಗಳಿಂದ ಆಯ್ದ ಶ್ಲೋಕಗಳಲ್ಲಿ ಮಾಡಿರುವ ವರ್ಣನೆಗಳಿಗೆ ವರ್ಣಚಿತ್ರಕಲಾವಿದರುಗಳು ತಮ್ಮ ಕೌಶಲ್ಯವನ್ನೆಲ್ಲಾ ಧಾರೆಯೆರೆದು ಚಿತ್ರಗಳನ್ನು ಬಿಡಿಸಿದ್ದಾರೆ. ಭವ, ಶರ್ವ ಮೊದಲಾದ ಶಿವನ ಅಷ್ಟಮೂರ್ತಿಗಳ, ಶಂಭು, ಪಿನಾಕ ಮೊದಲಾದ ಏಕಾದಶರುದ್ರರ, ಪರಮೇಶ್ವರನ ಐವತ್ತೈದು ಲೀಲಾಮೂರ್ತಿಗಳ, ಗಿರಿಜೆಯೊಡನೆ ವಿವಾಹದ ಸಂದರ್ಭದಲ್ಲಿ ಕಲ್ಯಾಣಸುಂದರನಾಗಿ ಶೋಭಿಸುವ ಶಿವನ ವರ್ಣನೆ ಶಿವನಿಧಿಯಲ್ಲಿನ ಮತ್ತೊಂದು ಆಕರ್ಷಣೆ. ಸತಿಪತಿಯರ ಅದ್ವೈತವನ್ನು ಸಾರಿ ಹೇಳುತ್ತಿರುವ ಶಿವನ ವಿಶೇಷರೂಪವಾದ ಅರ್ಧನಾರೀಶ್ವರನ ಚಿತ್ರಣವು ಮನೋಹರವಾಗಿ ಮೂಡಿಬಂದಿದೆ.

ಶಿವನಿಧಿಯನ್ನು ಜಗದ ಮಾತಾಪಿತೃಗಳ ವರ್ಣನೆಗೆ ಮುಡಿಪಾಗಿಟ್ಟ ಮುಮ್ಮಡಿಯವರು ಶಿವಪುತ್ರರುಗಳಾದ ಗಣಪತಿ-ಸುಬ್ರಹ್ಮಣ್ಯರನ್ನು ಉಪೇಕ್ಷಿಸಿಲ್ಲ. ಗಣಪತಿಯ ಅಪೂರ್ವವಾದ ರೂಪಾಕೃತಿಗಳನ್ನು ಮೂವತ್ತೆರಡು ಧ್ಯಾನಶ್ಲೋಕಗಳಲ್ಲಿ ವರ್ಣಿಸಲಾಗಿದೆ. ಸುಂದರವಾದ ಮೂವತ್ತೆರಡು ಚಿತ್ರಗಳನ್ನು ವರ್ಣನೆಗೆ ಅನುಗುಣವಾಗಿ ಬಿಡಿಸಲಾಗಿದ್ದು, ಬೇರೆಲ್ಲೂ ನೋಡಲು ಸಿಗದ ಗಣಪತಿಯ ವಿವಿಧ ಭಂಗಿಗಳನ್ನು ಸಹೃದಯರು ಈ ವರ್ಣಚಿತ್ರಗಳಲ್ಲಿ ಗಮನಿಸಬಹುದು. ಗಣಪತಿಯ ಸೋದರನಾದ ಸುಬ್ರಹ್ಮಣ್ಯನ ಅಗ್ನಿಜಾತ, ಸುಬ್ರಹ್ಮಣ್ಯಾದಿ ಹದಿನೇಳು ಬಗೆಯ ರೂಪಾಕೃತಿಗಳಿಗೆ ಸಂಬಂಧಿಸಿದಂತೆ ವರ್ಣಚಿತ್ರಸಹಿತವಾಗಿ ಬಣ್ಣಿಸಲಾಗಿದೆ. ಹಾಗೆಯೇ ಅಷ್ಟವಿಧ ಭೈರವರೂ ಸಹ ಧ್ಯಾನಶ್ಲೋಕಗಳಲ್ಲಿ ವರ್ಣಿತರಾಗಿದ್ದಾರೆ. ಶಿವನಿಧಿಯಲ್ಲಿ ಒಟ್ಟು 81 ಅತಿಸುಂದರವಾದ ವರ್ಣಚಿತ್ರಗಳಿವೆ.

ಬ್ರಹ್ಮನಿಧಿ : ಶ್ರೀತತ್ತ್ವನಿಧಿಯ ನಾಲ್ಕನೆಯ ಸಂಪುಟವಾದ 'ಬ್ರಹ್ಮನಿಧಿ'ಯು ಜಗತ್ತಿನ ವೈವಿಧ್ಯಮಯ ಸೃಷ್ಟಿಕಾರ್ಯದಲ್ಲಿ ಪ್ರಮುಖಪಾತ್ರಧಾರಿಯಾದ ಬ್ರಹ್ಮ ಹಾಗೂ ವಿದ್ಯಾಭಿಮಾನಿದೇವತೆಯಾದ ಸರಸ್ವತಿ ಹಾಗೂ ಇವರ ಪರಿವಾರದಲ್ಲಿರುವ ದೇವತೆ, ಋಷಿ, ಮುನಿಗಳ, ಆಚಾರ್ಯರುಗಳ ವರ್ಣನಾಪರವಾದ ಧ್ಯಾನಶ್ಲೋಕಗಳಿಗೆ ಸೀಮಿತವಾಗಿದೆ. ಸುಮಾರು 405 ವರ್ಣಚಿತ್ರಗಳಿರುವ ಬ್ರಹ್ಮನಿಧಿಯು ಹಿಂದೂಧರ್ಮಕ್ಕೆ ಸಂಬಂಧಿಸಿದ ಸಾಹಿತ್ಯಕೃತಿಗಳೆಲ್ಲದರ ಸಂಕ್ಷಿಪ್ತ ಮಾಹಿತಿಯನ್ನು ನೀಡಬಲ್ಲ ಕೈಪಿಡಿಯಂತಿದೆ. ಬ್ರಹ್ಮನಿಧಿಯ ಮಾಹಿತಿಯನ್ನು ಮುಂದಿನ ಪುಟಗಳಲ್ಲಿ ನೀಡಲಾಗಿದೆ.

**ಗ್ರಹನಿಧಿ :** ಶ್ರೀತತ್ತ್ವನಿಧಿಯ ಒಟ್ಟು ಸಂಪುಟಗಳಲ್ಲಿ ಭಾರತೀಯ ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಿಸಿದ 'ಗ್ರಹನಿಧಿ'ಯು ದೊಡ್ಡದೆನಿಸಿದೆ. ಆರು ವೇದಾಂಗಗಳಲ್ಲಿ ಜ್ಯೋತಿಷವೂ ಸಹ ಒಂದಾಗಿದ್ದು ಅತಿಪ್ರಾಚೀನಕಾಲದಿಂದಲೂ ಭಾರತದಲ್ಲಿ ಜ್ಯೋತಿಶ್ಶಾಸ್ತ್ರದ ಕ್ರಮಬದ್ಧ ಅಧ್ಯಯನ ನಡೆದುಕೊಂಡು ಬಂದಿದೆ. ದೂರದರ್ಶಕಯಂತ್ರದ ಪರಿಚಯವೇ ಇಲ್ಲದಂತಹ ಪುರಾತನಕಾಲದಲ್ಲಿಯೇ ಬರಿಗಣ್ಣಿನಲ್ಲಿ ಗ್ರಹ-ನಕ್ಷತ್ರಾದಿಗಳ ಸ್ವರೂಪವನ್ನು ಅಧ್ಯಯನ ಮಾಡಿದ ಲಗಧಾಚಾರ್ಯರೇ ಮೊದಲಾದವರ ಪ್ರಯತ್ನಗಳು ಪ್ರಶಂಸಾರ್ಹವೇ ಸರಿ. ಗ್ರಹನಿಧಿಯಲ್ಲಿ ಸೂರ್ಯ, ಚಂದ್ರಾದಿಗ್ರಹಗಳನ್ನು, ನಕ್ಷತ್ರಗಳನ್ನು, ಯುಗಾದಿಕಾಲಸ್ವರೂಪವನ್ನು, ಅರವತ್ತು ಸಂವತ್ಸರಗಳು, ಆರು ಋತುಗಳು, ಭೂಮಿಯ ಚಲನೆಯಿಂದ ಉಂಟಾಗುವ ಉತ್ತರಾಯಣ, ದಕ್ಷಿಣಾಯನಗಳಿಗೂ ಸಹ ಅಧಿದೇವತೆಗಳನ್ನು ಕಲ್ಪಿಸಿ ಧ್ಯಾನ ಶ್ಲೋಕಗಳನ್ನು ನೀಡಲಾಗಿದೆ. ಆಯಾಯಾ ಮಾಸಗಳಿಗನುಗುಣವಾಗಿ ಮಾಡಬೇಕಾದ ವ್ರತಾದಿ ಕರ್ತವ್ಯಗಳನ್ನು ವರ್ಜಿಸಬೇಕಾದ ಕ್ರಿಯೆಗಳನ್ನು ವಿವರಿಸಲಾಗಿದೆ. ಸಂದರ್ಭೋಚಿತವಾಗಿ ನೀಡಬೇಕಾದ ದಾನಗಳ ವಿವರಗಳನ್ನು ಅವುಗಳಿಂದ ಪ್ರಾಪ್ತಿಯಾಗುವ ವಿಶೇಷ ಫಲಗಳನ್ನು ಸಹ ವಿವರಿಸಲಾಗಿದೆ. ಪ್ರಭವಾದಿ ಸಂವತ್ಸರಗಳಲ್ಲಿ ಜನಿಸುವ ವ್ಯಕ್ತಿಗಳ ಸ್ವಭಾವವನ್ನು ಜಾತಕಾಭರಣವೆಂಬ ಗ್ರಂಥಾನುಸಾರವಾಗಿ ನೀಡಲಾಗಿದೆ. ಕೆಡುಕನ್ನುಂಟುಮಾಡಬಲ್ಲ ಕಾಳ ರಾಹು, ಅಪಸ್ಮಾರ, ಮಹಾಕಾಲ, ಮೃತ್ಯುದೇವತೆ, ಕೃತ್ಯಾ ಇತ್ಯಾದಿ ದೇವತೆಗಳ ಸ್ವರೂಪ ಚಿತ್ರಣವೂ ಸಹ ಗ್ರಹನಿಧಿಯಲ್ಲಿದೆ. ಇವರುಗಳನ್ನು ಸುಪ್ರೀತರನ್ನಾಗಿಸಲು ನಿರ್ವಹಿಸಬೇಕಾದ ವಿಶೇಷವಾದ ಶಾಂತಿಕರ್ಮಗಳೂ ಸಹ ಗ್ರಹನಿಧಿಯಲ್ಲಿ ಇದ್ದು ಭಾರತೀಯ ಜ್ಯೋತಿಷಶಾಸ್ತ್ರದ ಸಮಸ್ತ ವಿಚಾರಗಳನ್ನೂ ಸಹ ಗ್ರಹನಿಧಿಯಲ್ಲಿ ಸಂಕ್ಷಿಪ್ತವಾಗಿ ನೀಡಲಾಗಿದೆ.

**ವೈಷ್ಣವನಿಧಿ :** ಭಾರತದಲ್ಲಿನ ಪ್ರಸಿದ್ಧ ವೈಷ್ಣವಕ್ಷೇತ್ರಗಳ ಹಾಗೂ ಪ್ರಸಿದ್ಧ ಯಾತ್ರಾಸ್ಥಳಗಳ ವಿವರಣಾತ್ಮಕ ಮಾಹಿತಿ 'ವೈಷ್ಣವನಿಧಿ'ಯಲ್ಲಿದೆ. ಬ್ರಹ್ಮಾಂಡಪುರಾಣದ ಲಕ್ಷ್ಮೀ-ನಾರಾಯಣ ಸಂವಾದದಲ್ಲಿ ಹೇಳಲಾಗಿರುವ ನೂರ ಹದಿನಾರು ವೈಷ್ಣವ ಯಾತ್ರಾಸ್ಥಳಗಳ ಪಟ್ಟಿಯನ್ನು ನೀಡಿ ವಿವರಿಸಲಾಗಿದ್ದು, ಪ್ರಸಿದ್ಧ ವೈಷ್ಣವ ಕ್ಷೇತ್ರಗಳಾಗಿ ನೂರೆಂಟು ತಿರುಪತಿಗಳನ್ನೂ, ಶ್ರೀರಂಗವೇ ಮೊದಲಾದ ಅಷ್ಟಕ್ಷೇತ್ರಗಳ ಮಾಹಿತಿಯನ್ನು ನೀಡಲಾಗಿದೆ. ಪ್ರತಿಯೊಂದು ಪವಿತ್ರಕ್ಷೇತ್ರದ ದೇವರುಗಳು ಮತ್ತು ಅವರೊಡನಿರುವ ದೇವಿಯರುಗಳ ಹೆಸರುಗಳು, ದೇವಸ್ಥಾನಕ್ಕೆ ನಿರ್ಮಿಸಿರುವ ವಿಮಾನಗಳ (ಗೋಪುರ) ಸ್ವರೂಪ, ದೇವರು ಅಭಿಮುಖವಾಗಿರುವ ದಿಕ್ಕುಗಳು, ದೇವಸ್ಥಾನಕ್ಕೆ ಸೇರಿದ ತೀರ್ಥಗಳ ಹೆಸರುಗಳು, ದೇವರುಗಳ ಭಂಗಿ ಅರ್ಥಾತ್ ಕುಳಿತಿರುವ, ನಿಂತಿರುವ, ಶಯನಿಸಿರುವ ಭಂಗಿ ಮೊದಲಾದ ಸಮಸ್ತವಿವರಗಳನ್ನು ನೀಡಲಾಗಿದೆ.

ಮೇಲಿನ ಮಾಹಿತಿಗಳಲ್ಲದೆ ವೈಷ್ಣವನಿಧಿಯಲ್ಲಿ ಶ್ರೀವೈಷ್ಣವಸಂಪ್ರದಾಯದ ಹನ್ನೆರಡು ಮಂದಿ ಆಳ್ವಾರರುಗಳ, ರಾಮಾನುಜರೇ ಮೊದಲಾದ ಆಚಾರ್ಯರುಗಳ ರೇಖಾಚಿತ್ರಸಹಿತವಾದ ಮಾಹಿತಿಯನ್ನು ನೀಡಲಾಗಿದೆ. ಶ್ರೀವೈಷ್ಣವಮತ ಮತ್ತು ಸಂಪ್ರದಾಯಗಳಿಗೆ ಸಂಬಂಧಿಸಿದ ಪ್ರಪತ್ತಿಸೋಪಾನ, ಊರ್ಧ್ವಪುಂಡ್ರವಿಧಾನ, ಯತಿರಾಜಸಪ್ತತಿ, ತುಳಸಿಮಹಾತ್ಮೆ, ರಾಮಾನುಜಾಚಾರ್ಯಕೃತ ಅಷ್ಟೋತ್ತರ ಮೊದಲಾದ ಕೃತಿಗಳ ಸಂಪೂರ್ಣ ಪಾಠವನ್ನು ನೀಡಲಾಗಿದೆ. ಸುಮಾರು 14 ರೇಖಾಚಿತ್ರಗಳು ವೈಷ್ಣವನಿಧಿಯಲ್ಲಿದ್ದು ಇವುಗಳಿಗೆ ವರ್ಣಲೇಪನವನ್ನು ಮಾಡಿರುವುದಿಲ್ಲ.

ಶೈವನಿಧಿ : ಏಳನೆಯ ಸಂಪುಟವಾದ 'ಶೈವನಿಧಿ'ಯನ್ನು ಲಲಿತಾಗಮ, ವಾಯವೀಯಸಂಹಿತಾ, ಶಿವರಹಸ್ಯ, ಸ್ಕಂದಪುರಾಣ, ವೀರಮಾಹೇಶ್ವರಖಂಡ ಮೊದಲಾದ ಕೃತಿಗಳ ಆಧಾರದಿಂದ ಸಿದ್ಧಪಡಿಸಲಾಗಿದೆ. ಶೈವಸಂಪ್ರದಾಯಕ್ಕೆ ಸಂಬಂಧಿಸಿದಂತೆ ವಿಶೇಷವಾದ ಮಾಹಿತಿಯನ್ನು ಒದಗಿಸುವ ಶೈವನಿಧಿಯಲ್ಲೇ 63 ಜನ 'ನಾಯನಾರ್'ಗಳೆಂದು ಪ್ರಸಿದ್ಧರಾದ ಶಿವಭಕ್ತರುಗಳನ್ನು, ಅವರ ಹೆಸರು, ವರ್ಣ, ಆಶ್ರಮಧರ್ಮ, ಸ್ವಕ್ಷೇತ್ರಗಳೊಡನೆ ಪರಿಚಯಿಸಲಾಗಿದೆ. ಶಿವಭಕ್ತರಿಗೆ ಪವಿತ್ರವಾಗಿದ್ದು ನಿತ್ಯವೂ ಧರಿಸುವ ವಿಭೂತಿಯ ಮಹಾತ್ಮೆ, ರುದ್ರಾಕ್ಷಿಯ ಮಹಾತ್ಮೆ, ಅದರಿಂದ ಲಭಿಸುವ ಫಲ, ಬಿಲ್ವಪತ್ರೆಯ ಪವಿತ್ರತೆ ಮೊದಲಾದ ವಿಷಯಗಳಿದ್ದು ಶೈವಮತಸ್ಥರಿಗೆ ನಿತ್ಯೋಪಯೋಗಿಯಾಗಬಲ್ಲ ಗ್ರಂಥಭಾಗವಾಗಿದೆ. ಯೋಗಾಸನದ ವಿವಿಧಭಂಗಿಗಳ ಚಿತ್ರಗಳು ಆಕರ್ಷಕವಾಗಿದ್ದು, ಒಟ್ಟು 263 ರೇಖಾಚಿತ್ರಗಳನ್ನು ಶೈವನಿಧಿಯಲ್ಲಿ ನೀಡಲಾಗಿದೆ.

ಆಗಮನಿಧಿ : ಸಂಸ್ಕೃತ ವಾಙ್ಮಯದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದಂತೆ ರಚಿತವಾಗಿರುವ ಸಾಹಿತ್ಯಕೃತಿಗಳ ಸಂಕ್ಷಿಪ್ತ ಪರಿಚಯ ಎಂಟನೆಯ ಸಂಪುಟವಾದ 'ಆಗಮನಿಧಿ'ಯಲ್ಲಿ ಅಡಕವಾಗಿದೆ. ವೈದಿಕಸಾಹಿತ್ಯದಿಂದ ಮೊದಲುಗೊಂಡು ನಾಲ್ಕು ವೇದಗಳು, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳು, ಹದಿನೆಂಟು ಪುರಾಣಗಳು, ಸ್ಮೃತಿಗಳು, ಆಗಮಗಳಲ್ಲಿ ವೈಷ್ಣವಾಗಮಗಳು ಮತ್ತು ಶೈವಾಗಮಗಳು ಇವುಗಳೆಲ್ಲದರ ಸಂಕ್ಷಿಪ್ತ ಮಾಹಿತಿಯನ್ನು ಆಗಮನಿಧಿಯಲ್ಲಿ ನೀಡಲಾಗಿದೆ. ರಾಮಾಯಣ, ಮಹಾಭಾರತ, ಪುರಾಣ, ಭಾಗವತ ಮೊದಲಾದವುಗಳಲ್ಲಿನ ಶ್ಲೋಕಸಂಖ್ಯೆಯನ್ನು ನೀಡಲಾಗಿದ್ದು ಸಂಸ್ಕೃತ ಸಾಹಿತ್ಯಚರಿತ್ರೆಯ ಒಂದು ವಿಹಂಗಮ ನೋಟ ಸಾಹಿತ್ಯಜಿಜ್ಞಾಸುಗಳಿಗೆ ನಿಶ್ಚಿತವಾಗಿಯೂ ಲಭಿಸುತ್ತದೆ. ಪಂಚಾಯತನ ಪೂಜಾಕ್ರಮಗಳನ್ನು ರೇಖಾಚಿತ್ರಗಳೊಡನೆ ನೀಡಲಾಗಿದ್ದು ಕನ್ನಡ ಭಾಷೆಯಲ್ಲಿ ವಿವರಣೆಯನ್ನೂ ಸಹ ಬರೆಯಲಾಗಿದೆ. ಒಟ್ಟಾರೆ ಸಾಹಿತ್ಯಾಸಕ್ತರಿಗೆ ಸಂಸ್ಕೃತ ಭಾಷೆಯಲ್ಲಿ ರಚಿತವಾಗಿರುವ ಧಾರ್ಮಿಕ ಕೃತಿಗಳ ಎಲ್ಲಾ ಮಾಹಿತಿಯೂ ಆಗಮನಿಧಿಯಲ್ಲಿ ಏಕತ್ರ ಲಭಿಸುತ್ತದೆ.

ಕೌತುಕನಿಧಿ : ಈ ಸಂಪುಟವು ಬೇರೆಯ ಕೃತಿಗಳನ್ನು ಅವಲಂಬಿಸದೆ ಮುಮ್ಮಡಿಯವರು ಸ್ವತಃ ರಚಿಸಿರುವ ಭಾಗವಾಗಿದೆ. ಕೌತುಕವೆಂದರೆ ಹರ್ಷ, ಕುತೂಹಲ, ವಿಸ್ಮಯ, ಉತ್ಸವ. 'ಕೌತುಕನಿಧಿ'ಯು ಶ್ರೀತತ್ತ್ವನಿಧಿಯ ಕೊನೆಯ ಭಾಗ ಅಥವಾ ಸಂಪುಟವಾಗಿದ್ದು ಇಲ್ಲಿ ಹಲವಾರು ಉಲ್ಲಾಸಕರ ಕ್ರೀಡೆಗಳ ವರ್ಣನೆಯನ್ನು ನೀಡಲಾಗಿದೆ. ಗಂಜೀಫಾ, ಪೇಟಿಕಾ (ಪಗಡೆ), ಆನೆಕಟ್ಟಿನ ಆಟ, ಸಂಖ್ಯಾಲಿಪಿ ಮೊದಲಾದ ಆಟಗಳನ್ನು ಆಡುವ ವಿಧಾನಗಳನ್ನು ಸಂಸ್ಕೃತದಲ್ಲಿ ಬರೆದು ಕನ್ನಡದಲ್ಲಿ ಅವುಗಳಿಗೆ ವಿವರಣೆಯನ್ನೂ ಸಹ ನೀಡಲಾಗಿದೆ. ಕೌತುಕನಿಧಿಯಲ್ಲಿ ಹದಿಮೂರು ಬಗೆಯ ಗಂಜೀಫಾ ಆಟಗಳ ವರ್ಣನೆಯಿದ್ದು, ಈ ಆಟವನ್ನು ಆಡಲು ಇಂದಿನ ಇಸ್ಪೀಟ್ ಎಲೆಯಂತಹ ಸಚಿತ್ರವಾದ ಕಾಗದದ ಕಾರ್ಡುಗಳನ್ನಿಟ್ಟುಕೊಂಡು ಶ್ರೀಮಂತರು ಆಡುತ್ತಿದ್ದ ಜನಪ್ರಿಯ ಆಟ. ಪರ್ಷಿಯಾ ದೇಶದಲ್ಲಿ ಪ್ರಪ್ರಥಮವಾಗಿ ಆವಿಷ್ಕಾರಗೊಂಡ ಈ ಕ್ರೀಡೆಯ ಬಗ್ಗೆ 'ಬಾಬರ್ ನಾಮ', 'ಐನ್-ಇ-ಅಕ್ಬರಿ'ಯಲ್ಲಿ ವಿಸ್ತೃತ ವಿವರಣೆಗಳಿವೆ. ಮೊಘಲರ ಕಾಲದಲ್ಲಿಯೂ ಇದೊಂದು ರಾಜರುಗಳ ಮೆಚ್ಚಿನ ಆಟವಾಗಿತ್ತು. ಕೌತುಕನಿಧಿಯಲ್ಲಿ ಮುಮ್ಮಡಿಯವರೇ ಆವಿಷ್ಕರಿಸಿದ

ಗಂಜೀಫಾ ಆಟದ ವಿವಿಧ ಪ್ರಕಾರಗಳನ್ನು ವರ್ಣಿಸಲಾಗಿದೆ. ಚಾಮುಂಡೇಶ್ವರೀ ಗಂಜೀಫಾ, ಜಗನ್ಮೋಹಿನೀ ಗಂಜೀಫಾ, ದಶಾವತಾರ ಗಂಜೀಫಾ, ನವಗ್ರಹ, ದೇವೀದಶಾವತಾರ, ಸರ್ವಮಂಗಳಾ, ನವರತ್ನ ಹಾಗೂ ಮೈಸೂರುಛದ ಗಂಜೀಫಾ ಮೊದಲಾದವು ಪ್ರಮುಖವಾದ ಆಟದ ಪ್ರಕಾರಗಳು.

'ಪೇಟಿಕಾಕ್ರೀಡಾ' (ಪಗಡೆಯಾಟ) ಅತ್ಯಂತ ಪುರಾತನ ಕಾಲದಿಂದಲೂ ಜನಪ್ರಿಯ ಆಟವಾಗಿದ್ದು, ಕೌತುಕನಿಧಿಯಲ್ಲಿ ಪಗಡೆಯಾಟದ ಬಗೆಗಳನ್ನು ಪಗಡೆಕಾಯಿಗಳ ಬಣ್ಣಗಳನ್ನು ವಿವರಿಸಲಾಗಿದೆ. ಪಗಡೆಯಾಟದ ಪ್ರಮುಖ ಬಗೆಗಳಾದ ಕೃಷ್ಣರಾಜಪೀಟು, ಸದ್ಯೋಜಾತಪೀಟು, ಅಷ್ಟಮುಖ, ಪುಣ್ಯಮುಖ, ಬುರುಜು ಪಗಡೆ, ನವಗ್ರಹ ಪಗಡೆ, ಭೂಚಕ್ರ ಮೊದಲಾದ ಪಗಡೆಯಾಟದ ಪ್ರಕಾರಗಳಿವೆ. ಆನೆಕಟ್ಟಿನ ಆಟ, ಸಂಖ್ಯಾಲಿಪಿ ಇವುಗಳೂ ಸಹ ಕೌತುಕನಿಧಿಯಲ್ಲಿನ ಇತರ ಮನಸ್ಸಿಗೆ ಮುದನೀಡುವ ಕ್ರೀಡೆಗಳಾಗಿದ್ದು ಸಂಖ್ಯಾಲಿಪಿಯು ಗಣಿತಕ್ಕೆ ಸಂಬಂಧಿಸಿದ್ದು ಬುದ್ಧಿಯನ್ನು ಹರಿತಗೊಳಿಸಬಲ್ಲ ಕ್ರೀಡೆಯಾಗಿದೆ.

**ವಿಶ್ವಕೋಶಗ್ರಂಥವಾಗಿ ಶ್ರೀತತ್ತ್ವನಿಧಿಯ ಮಹತ್ತ್ವ :**

ಆರುಸಾವಿರ ಶ್ಲೋಕಗಳ ಹರವಿನಲ್ಲಿ ಶ್ರೀತತ್ತ್ವನಿಧಿಯು ಹಿಂದೂ ಸಂಸ್ಕೃತಿಯಲ್ಲಿ ಜಿಜ್ಞಾಸೆಯುಳ್ಳವರಿಗಾಗಿ ಸಂಗೀತಕಲಾಜ್ಞಾನಪಿಪಾಸುಗಳಿಗಾಗಿ, ಶಿಲ್ಪಿಗಳಾಗಿ, ಚಿತ್ರಕಾರರುಗಳಿಗಾಗಿಯೇ ರಚಿತವಾದ ವಿಶ್ವಕೋಶಗ್ರಂಥ. ಭಾರತದ ಮಣ್ಣಿನಲ್ಲಿ ಮೊಳೆತ ಆಸ್ತಿಕ ಪರಂಪರೆಯ ಮೂರು ಪ್ರಮುಖವಾಹಿನಿಗಳಾದ ಶಾಕ್ತಪಂಥ, ವೈಷ್ಣವಪಂಥ ಮತ್ತು ಶೈವಪಂಥಗಳೆಲ್ಲವಕ್ಕೂ ದೇವತಾವಿಷಯಕ ಹಾಗೂ ತಾತ್ತ್ವಿಕವಿಷಯಗಳಿಗೆ ಸಂಬಂಧಿಸಿದಂತೆ ಸಮಾನವಾದ ಪುರಸ್ಕಾರ ಶ್ರೀತತ್ತ್ವನಿಧಿಯಲ್ಲಿ ಕಂಡುಬರುತ್ತದೆ.

ಜಗತ್ತಿನಾದ್ಯಂತ ಇಂದಿನ ದಿನಗಳಲ್ಲಿ ರಾಜ್ಯಾಡಳಿತಕ್ಕೆ ಸಂಬಂಧಿಸಿದ ಜ್ಞಾನಸಂಪತ್ತಿನ ಅಭಿವೃದ್ಧಿಗಾಗಿಯೇ ವಿವಿಧ ಮೂಲಗಳನ್ನು ಆಧರಿಸಿ ಗ್ರಂಥಗಳನ್ನು ಸಿದ್ಧಪಡಿಸುವಂತೆ, ಪ್ರಾಚೀನಭಾರತದಲ್ಲಿ ವಿಶ್ವಕೋಶಗಳ ಸರಣಿಯಲ್ಲಿ ಪರಿಗಣಿಸಬಹುದಾದ ಪುರಾಣಗಳೆಂಬ ಗ್ರಂಥಗಳ ರಚನೆಯಾಗಿತ್ತು. ದೇವತಾವಿಷಯಕ ಹಾಗೂ ರಾಜವಂಶಗಳ ಸಾಂಸ್ಕೃತಿಕ ದಾಖಲೆಗಳಾಗಿರುವ ಇಂತಹ ಪುರಾಣಗಳಲ್ಲಿ ಕೆಲವು ಪುರಾಣಗಳು ರಾಜನೀತಿ, ಸಂಗೀತ, ಶಿಲ್ಪ, ಜ್ಯೋತಿಷ, ವೈದ್ಯ, ವ್ಯಾಕರಣ, ಧನುರ್ವೇದ, ಕಾವ್ಯಾಲಂಕಾರಶಾಸ್ತ್ರ, ಅರ್ಥಶಾಸ್ತ್ರ, ಧರ್ಮಶಾಸ್ತ್ರ, ವೇದಾಂತ, ಸಾಂಖ್ಯ, ಯೋಗ, ಚಿತ್ರಕಲೆ ಮೊದಲಾದ ಶಾಸ್ತ್ರವಿಚಾರಗಳಲ್ಲದೆ ಸಕಲರೀತಿಯ ಲೌಕಿಕ, ಪಾರಲೌಕಿಕ ನಂಬಿಕೆಗಳಿಗೆ ಸಂಬಂಧಿಸಿದ ಹಲವಾರು ವಿಚಾರಗಳ ಜ್ಞಾನಕೋಶಗಳಂತಿದೆ. ಅಗ್ನಿಪುರಾಣ (16,000 ಶ್ಲೋಕ), ಗರುಡಪುರಾಣ (18,000 ಶ್ಲೋಕ), ವಿಷ್ಣುಧರ್ಮೋತ್ತರಪುರಾಣ (22,000 ಶ್ಲೋಕ), ಇತ್ಯಾದಿಗಳು ಅವುಗಳಲ್ಲಿ ಅಡಕವಾಗಿರುವ ವಿಷಯವೈವಿಧ್ಯದಿಂದಾಗಿ ವಿದ್ಯೆಯ ನಾನಾ ಪ್ರಕಾರಗಳನ್ನು ಅಭ್ಯಾಸ ಮಾಡುವವರೆಲ್ಲರಿಗೂ ಉಪಯುಕ್ತಗ್ರಂಥಗಳಾಗಿ ಸಾರ್ವಕಾಲಿಕ ಮೌಲ್ಯಯುತ ಕೃತಿಗಳಾಗಿವೆ. ಕ್ರಿ.ಶ. ಆರನೆಯ ಶತಮಾನದ ಜ್ಯೋತಿಶ್ಶಾಸ್ತ್ರವಿಶಾರದ ವರಾಹಮಿಹಿರನ ಬೃಹತ್ಸಂಹಿತೆಯಂತೂ ಖಗೋಳಶಾಸ್ತ್ರೀಯ ಹಾಗೂ ಭೌಗೋಳೀಯ ವಿಶ್ವಕೋಶವಾಗಿದ್ದು ವಿಸ್ಮಯಜನಕ ವಿಷಯವೈವಿಧ್ಯವನ್ನೊಳಗೊಂಡಿದೆ.

ಕೋಶಗ್ರಂಥಗಳೆನಿಸಬಲ್ಲ ಇಂತಹ ಹಲವಾರು ಕೃತಿಗಳು ಸಂಸ್ಕೃತ ಸಾಹಿತ್ಯ ಸಾಗರದಲ್ಲಿನ ಅಪೂರ್ವರತ್ನಗಳಂತಿದ್ದು ಕೆಲವನ್ನು ಕೆಳಗೆ ಪರಿಚಯಿಸಲಾಗಿದೆ.

ಕ್ರಿ.ಶ. ಹತ್ತನೆಯ ಶತಮಾನದ ನಂತರದ ಕೃತಿಗಳಾದ 14ನೆಯ ಶತಕದ ಶಾರ್ಙ್ಗಧರನೆಂಬುವನ 'ಶಾರ್ಙ್ಗಧರ ಪದ್ಧತಿ'ಯು ರಾಜನೀತಿ, ಅಶ್ವಶಾಸ್ತ್ರ, ಗಜಶಾಸ್ತ್ರ, ಧನುರ್ವೇದ, ಸಂಗೀತಶಾಸ್ತ್ರ, ವೃಕ್ಷಾಯುರ್ವೇದ, ಪಶುಚಿಕಿತ್ಸಾ, ವಿಷಾಪಹರಣ, ಕೌಮಾರಭೃತ್ಯ, ಬೊಕ್ಕತಲೆಗೆ ಚಿಕಿತ್ಸೆ, ಅಕಾಲಮುಪ್ಪಿಗೆ ಚಿಕಿತ್ಸೆ, ಯೋಗಶಾಸ್ತ್ರ, ಮರಣಪೂರ್ವ ಚಿಹ್ನೆಗಳ ಜ್ಞಾನಕ್ಕೆ ಸಂಬಂಧಿಸಿದಂತೆ ಜ್ಞಾನವೈವಿಧ್ಯದ ಗಣಿಯಾಗಿದೆ.

ಕ್ರಿ.ಶ. 1126-1139ರವರೆಗೂ ಆಳಿದ ಕಲ್ಯಾಣಚಾಲುಕ್ಯವಂಶದವನಾದ ಭೂಲೋಕಮಲ್ಲ ಮುಮ್ಮಡಿ ಸೋಮೇಶ್ವರನ 'ಅಭಿಲಷಿತಾರ್ಥಚಿಂತಾಮಣಿ' ಅಥವಾ ಮಾನಸೋಲ್ಲಾಸ ಎಂಟುಸಾವಿರ ಪದ್ಯಗಳಿರುವ ವಿಶ್ವಕೋಶಗ್ರಂಥ. ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕದ ಕೊಡುಗೆಯಾಗಿರುವ ಈ ಕೃತಿಯನ್ನು 'ಜಗದಾಚಾರ್ಯ' ಪುಸ್ತಕ, ಅಸಮಾನವಾದ 'ಕಾಮಧೇನು' ಎಂಬುದಾಗಿ ಹೆಮ್ಮೆಯಿಂದ ಗ್ರಂಥಕಾರನೇ ಸ್ವತಃ ಹೇಳಿಕೊಂಡಿದ್ದಾನೆ. ಇದರಲ್ಲಿ ವಿವಿಧ ವಿಷಯಗಳಿಗೆ ಸಂಬಂಧಿಸಿದ 8000 ಪದ್ಯಗಳಿವೆ.

ಇದೇ ರೀತಿಯಾಗಿ 'ಆಕಾಶಭೈರವ'ವೆಂಬ ಕೃತಿಯ ಭಾಗವೆಂದು ಕೃತಿಕಾರನು ಹೇಳಿಕೊಂಡಿರುವ ಆದರೆ ಎಲ್ಲಿಯೂ ತನ್ನ ಹೆಸರನ್ನು ಸೂಚಿಸಿರದ ರಾಜನೀತಿಗೆ ಸಂಬಂಧಿಸಿದಂತೆ ವೈವಿಧ್ಯಮಯವಾದ ವಿಚಾರಗಳನ್ನೊಳಗೊಂಡ 'ಸಾಮ್ರಾಜ್ಯಲಕ್ಷ್ಮೀಪೀಠಿಕಾ' ಎಂಬ ಸುಮಾರು ಹದಿನಾಲ್ಕನೆಯ ಶತಮಾನದ ಕೃತಿಯಲ್ಲಿ 3854 ಅನುಷ್ಟುಪ್ ಛಂದಸ್ಸಿನ ಪದ್ಯಗಳಿವೆ. ಇದು ಪಾರ್ವತೀಪರಮೇಶ್ವರರ ಸಂವಾದರೂಪದಲ್ಲಿವೆ.

ಕೆಳದಿಸಂಸ್ಥಾನವನ್ನು ಕ್ರಿ.ಶ. 1678-1715ರವರೆಗೂ ಪಾಲಿಸಿದ ಹಿರಿಯ ಬಸವಭೂಪಾಲವಿರಚಿತವಾದ 'ಶಿವತತ್ತ್ವರತ್ನಾಕರ'ದಲ್ಲಿ ವಿವಿಧ ವಿಷಯಗಳಿಗೆ ಸಂಬಂಧಿಸಿದ 14747 ಹದಿನಾಲ್ಕುಸಾವಿರದ ಏಳುನೂರ ನಲವತ್ತೇಳು ಪದ್ಯಗಳನ್ನೊಳಗೊಂಡಿದೆ. ಈ ಕೃತಿಯೂ ಸಹ ಕರ್ನಾಟಕದ ಕೊಡುಗೆಯಾಗಿರುವ ಅದ್ಭುತ ವಿಶ್ವಕೋಶ ಕೃತಿ.

'ಹರಿವಿಲಾಸ'ವೆಂಬ ಇತರ ಆಕರಗಳನ್ನು ಅವಲಂಬಿಸಿರದ ಸ್ವತಂತ್ರವಾದ ವಿಶ್ವಕೋಶಗ್ರಂಥ ಕ್ರಿ.ಶ. 1737ರಲ್ಲಿ ಹಂಸಮಿಟ್ಟ ಎಂಬ ಗುಜರಾತ್ ಪ್ರಾಂತ್ಯದವನಿಂದ ರಚಿತವಾದುದು. ಗದ್ಯ-ಪದ್ಯಗಳೆರಡೂ ಬೆರೆತಂತಹ 52 ಅಧ್ಯಾಯಗಳಿರುವ ಈ ಕೃತಿಯು ಒಂದು ವಿಶ್ವಕೋಶ. ಸಾಮ್ರಾಟ್ ಅಕ್ಬರನ ಆಸ್ಥಾನದಲ್ಲಿ ಹಣಕಾಸಿನ ದಾಖಲೆಗಳನ್ನು ನಿಭಾಯಿಸುವ ಅಧಿಕಾರಿಯಾಗಿ ಕರ್ತವ್ಯದಲ್ಲಿದ್ದ ತೋದರಮಲ್ಲ ಎಂಬುವನಿಂದ ರಚಿತವಾದ 'ತೋದರಾನಂದಃ'ವು ಮುಖ್ಯವಾಗಿ ಧರ್ಮಶಾಸ್ತ್ರ, ಆಯುರ್ವೇದ, ಮಂತ್ರಶಾಸ್ತ್ರಕೃತಿಗಳನ್ನು ಅವಲಂಬಿಸಿರುವ ಕೃತಿಯಾಗಿದ್ದು ಕೋಶ ಗ್ರಂಥವೊಂದರಲ್ಲಿರಬೇಕಾದ ವಿಷಯವೈವಿಧ್ಯ ಈ ಕೃತಿಯಲ್ಲಿ ಗೋಚರಿಸುವುದಿಲ್ಲ.

ಹತ್ತೊಂಬತ್ತರ ಶತಕದಲ್ಲಿ ರಾಜಾ ರಾಧಾಕಾಂತದೇವ ಬಹಾದ್ದೂರ್ ವಿರಚಿತ 'ಶಬ್ದಕಲ್ಪದ್ರುಮ' ಪ್ರತಿಯೊಬ್ಬ ಸಂಸ್ಕೃತ ಅಧ್ಯಾಪಕ, ವಿದ್ಯಾರ್ಥಿಗಳ ನಿತ್ಯೋಪಯೋಗಿ ಗ್ರಂಥವಾಗಿದೆ. ಹಾಗೆಯೇ ಸಂಸ್ಕೃತಸಾಹಿತ್ಯಾಸಕ್ತರಿಗೆ

ಚಿರಪರಿಚಿತವಾದ ಮತ್ತೊಂದು ಕೃತಿ 'ವಾಚಸ್ಪತ್ಯಮ್'. ಈ ಕೃತಿಯು 'ತರ್ಕವಾಚಸ್ಪತಿ' ಎಂಬ ಬಿರುದಾಂಕಿತರಾದ 'ತಾರಾನಾಥ'ರೆಂಬುವರಿಂದ 1866ರಲ್ಲಿ ಪ್ರಾರಂಭಗೊಂಡು 1884ರಲ್ಲಿ ಮುಕ್ತಾಯವಾಯಿತು. ಇದು ಅವರ ಹದಿನೆಂಟು ವರ್ಷಗಳ ತಪಸ್ಸು. ಹಾಗೆಯೇ 'ಲಘುಶಬ್ದಾರ್ಥಸರ್ವಸ್ವಮ್' ಹಾಗೂ 'ಸಂಸ್ಕೃತವಾಙ್ಮಯವಿಶ್ವಕೋಶ' ಎಂಬ ಕೋಶಗ್ರಂಥಗಳು ಇನ್ನೂ ಅಪೂರ್ಣಸ್ಥಿತಿಯಲ್ಲಿದ್ದು ಮುಂದೆ ಪೂರ್ಣಗೊಳ್ಳಬಹುದೆಂಬ ನಿರೀಕ್ಷೆಯನ್ನು ಸಾಹಿತ್ಯಾಸಕ್ತರು ಹೊಂದಿದ್ದಾರೆ.

ಮೇಲಿನ ಈ ಎಲ್ಲ ಕೃತಿಗಳಲ್ಲಿ ಕಂಡುಬಾರದ ವಿಶೇಷತೆಯನ್ನು ಶ್ರೀತತ್ತ್ವನಿಧಿಯಲ್ಲಿ ಗಮನಿಸಬಹುದಾಗಿದೆ. ಪುರಾಣಾದಿಗಳಿಂದ ಪ್ರಾರಂಭಗೊಂಡು ಇಂದಿನವರೆಗೂ ಸಂಸ್ಕೃತದಲ್ಲಿ ರಚಿತವಾಗಿರುವ ವಿಶ್ವಕೋಶ ಪರಂಪರೆಯಲ್ಲಿಯೇ ಶ್ರೀತತ್ತ್ವನಿಧಿ ಅದ್ವಿತೀಯವೆನಿಸಿರುವುದಕ್ಕೆ ಮುಖ್ಯ ಕಾರಣ ಮುಮ್ಮಡಿಯವರು ಮಾಡಿರುವ ವಿನೂತನ ಪ್ರಯತ್ನವೆನಿಸಬಲ್ಲ ವರ್ಣಚಿತ್ರಗಳು. ಒಟ್ಟು ನವನಿಧಿಗಳಿರುವ ಶ್ರೀತತ್ತ್ವನಿಧಿಯಲ್ಲಿ ಒಂದೊಂದು ನಿಧಿಯೂ ಸಹ ವಿಷಯವೈವಿಧ್ಯತೆದ ದೃಷ್ಟಿಯಿಂದ ಹಲವಾರು ಸಾಹಿತ್ಯ ಕೃತಿಗಳ ರಚನೆಗೆ ಪ್ರೇರಣೆಯಾಗಬಲ್ಲ ಸಂಪುಟವಾಗಿದೆ. ಪ್ರಕೃತಿಯಲ್ಲಿರುವ ವಿವಿಧ ಶಕ್ತಿಗಳಿಗೆ ರೂಪಾಕೃತಿಗಳನ್ನು ಕಲ್ಪಿಸಿ, ದೈವತ್ವಕ್ಕೆ ಒಯ್ಯುವಂತಹ ಪ್ರಯತ್ನ ವೈದಿಕ ಸಂಹಿತೆಗಳಲ್ಲಿ ಆವಿರ್ಭವಿಸಿ, ಕ್ರಮೇಣ ಆಗಮ, ಪುರಾಣಾದಿ ಗ್ರಂಥಗಳಲ್ಲಿ ಅಭಿವೃದ್ಧಿಗೊಂಡು ಶ್ರೀತತ್ತ್ವನಿಧಿಯಂತಹ ಕೃತಿಯಲ್ಲಿ ಪರಾಕಾಷ್ಠೆಯನ್ನು ಮುಟ್ಟಿದೆಯೆನ್ನಬಹುದು. ಅಮೂರ್ತವಿಷಯಗಳಾದ ವೇದಸಾಹಿತ್ಯಾದಿ ಜ್ಞಾನಪ್ರಕಾರಗಳಿಗೂ ಸಹ ಅಭಿಮಾನಿ ದೇವತೆಗಳನ್ನು ಕಲ್ಪಿಸಿ ರೂಪಾಕೃತಿಗಳನ್ನು ನೀಡಿರುವುದೇ ಶ್ರೀತತ್ತ್ವನಿಧಿಯಲ್ಲಿನ ವಿಶೇಷತೆ.

**ಗ್ರಂಥಕಾರ ಮುಮ್ಮಡಿ ಕೃಷ್ಣರಾಜ ಒಡೆಯರ್ (ಕ್ರಿ.ಶ. 1794 - ಕ್ರಿ.ಶ. 1868) :**

ಹಳೆಯ ಮೈಸೂರು ಸಂಸ್ಥಾನದ ಸಾಂಸ್ಕೃತಿಕ ಇತಿಹಾಸದ ಆಗಸದಲ್ಲಿನ ಧ್ರುವತಾರೆ ಶ್ರೀತತ್ತ್ವನಿಧಿಯ ರಚನಾಕಾರರಾದ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರೆಂದರೆ ತಪ್ಪಾಗಲಾರದು. 'ಕವಿಜನಕಾಮಧೇನು' 'ಕನ್ನಡದ ಭೋಜ' ಎಂಬ ಪ್ರಶಂಸೆಗಳನ್ನು ಗಳಿಸಿಕೊಂಡಿದ್ದ ಮುಮ್ಮಡಿಯವರು ಕೊಡುಗೈ ದಾನಿಯೂ ಹೌದು, ಧಾರಾನಗರದ ಭೋಜರಾಜನಂತೆ ಸಾಹಿತ್ಯಪ್ರೇಮಿಯೂ ಹೌದು. ಮೈಸೂರನ್ನು ಆಳಿದ ಯದುವಂಶದವರಾದ ಒಡೆಯರ್ ಮನೆತನದ ಅರಸರುಗಳ ಪರಂಪರೆಯಲ್ಲಿ ಇವರು ಇಪ್ಪತ್ತೆರಡನೆಯವರು. ಆದಿಯದುರಾಯ ಒಡೆಯರ್‌ರವರ (ಕ್ರಿ.ಶ. 1399 ರಿಂದ 1423) ಆಳ್ವಿಕೆಯ ಕಾಲದಿಂದ ಒಂದು ಸ್ವತಂತ್ರ ರಾಜ್ಯವಾಗಿ ರೂಪುಗೊಂಡ ಹಳೆಯ ಮೈಸೂರು ಸಂಸ್ಥಾನ ಇದಕ್ಕೂ ಮೊದಲು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿಹೋಗಿತ್ತು. ಮೈಸೂರಿನ ಅರಸರುಗಳು ವಿಜಯನಗರದ ಚಕ್ರಾಧಿಪತಿಗಳ ಸಾಮಂತರಾಗಿದ್ದರು. ವಿಜಯನಗರಸಾಮ್ರಾಜ್ಯದ ಪತನಾನಂತರ ಮೈಸೂರು ಸಂಸ್ಥಾನವು ಪ್ರತ್ಯೇಕವಾಗಿ ಒಡೆಯರ್ ಮನೆತನವು ಸ್ವತಂತ್ರವಾಗಿ ಮೈಸೂರನ್ನು ಆಳತೊಡಗಿತು. 1399ರಲ್ಲಿ ಪಟ್ಟಕ್ಕೆ ಬಂದ ಆದಿಯದುರಾಯ ಒಡೆಯರ್‌ರವರಿಂದ ಪ್ರಾರಂಭಗೊಂಡು ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರ ಆಳ್ವಿಕೆಯವರೆಗೂ ಅಂದರೆ 1947ರವರೆಗೂ ಸುಮಾರು 548 ವರ್ಷಗಳ ಕಾಲ ಮೈಸೂರು ಸಂಸ್ಥಾನವನ್ನು ಆಳಿದ ಯದುವಂಶರಾಜ

ಪರಂಪರೆಯಲ್ಲಿಯೇ ದೀರ್ಘಾಯುಷಿಯಾಗಿ ಬಾಳಿದ ಹಾಗೂ ಅತ್ಯಂತ ಕಿರಿಯ ವಯಸ್ಸಿನಲ್ಲಿಯೇ ಸಿಂಹಾಸನವನ್ನು ಏರಿದಂತಹವರು ಶ್ರೀಮುಮ್ಮಡಿಕೃಷ್ಣರಾಜ ಒಡೆಯರ್‌ರವರು. ಇವರ ಜೀವಿತ ಕಾಲ 1794 ರಿಂದ 1868.

ಕ್ರಿ.ಶ. 1794ರ ಜುಲೈ ಇಪ್ಪತ್ತೈದರಂದು ತಮ್ಮ ತಾಯಿಯವರ ತವರೂರಾದ 'ಅರಿಕೋತ್ತರ' (ಇಂದಿನ ಚಾಮರಾಜನಗರ) ಎಂಬ ಸಣ್ಣ ಹಳ್ಳಿಯಲ್ಲಿ ಮುಮ್ಮಡಿಯವರು ಜನಿಸಿದರು. ಆ ದಿನಗಳಲ್ಲಿ ಮೈಸೂರಿನ ಈ ರಾಜಮನೆತನವು ತೀವ್ರವಾದ ಸಂಕಷ್ಟದಲ್ಲಿತ್ತು. ತಮ್ಮ 548 ವರ್ಷಗಳ ಆಳ್ವಿಕೆಯ ದೀರ್ಘಾವಧಿಯಲ್ಲಿ ಯಾವುದೇ ರಾಜವಂಶ ಏಳುಬೀಳುಗಳನ್ನು ಅನುಭವಿಸುವಂತೆ ಒಡೆಯರ್ ಮನೆತನವೂ ಸಹ ಸುಮಾರು ಮೂವತ್ತೆಂಟು ವರ್ಷಕಾಲ ಹೈದರಾಲಿ ಹಾಗೂ ಅವನ ಮಗ ಟಿಪ್ಪುಸುಲ್ತಾನರಿಂದಾಗಿ ರಾಜ್ಯವನ್ನು ಕಳೆದುಕೊಂಡು ಸಂಕಷ್ಟದ ದಿನಗಳನ್ನು ಎದುರಿಸಬೇಕಾಯಿತು. ಮುಮ್ಮಡಿಯವರು ಜನಿಸುವುದಕ್ಕೂ ಮೊದಲೇ ಮೈಸೂರಿನ ರಾಜವಂಶಸ್ಥರು ಹಲವಾರು ಆಘಾತಗಳಿಂದ ತತ್ತರಿಸಿ ಹೋಗಿದ್ದರು ಹಾಗೂ ವಿಶ್ವಾಸದ್ರೋಹಿ ಹೈದರಾಲಿಯ ಪಿತೂರಿಗೆ ಗುರಿಯಾಗಿ ದುರ್ದಶೆಯನ್ನು ಅನುಭವಿಸುತ್ತಿದ್ದರು. ಮುಮ್ಮಡಿಯವರ ತಂದೆ ಖಾಸಾ ಚಾಮರಾಜ ಒಡೆಯರ್, ತಾಯಿ ಕೆಂಪನಂಜಮ್ಮಣಿಯವರು. ಮುಮ್ಮಡಿಯವರಿಗೆ ಜನ್ಮ ನೀಡಿದ ಕೆಲವೇ ತಿಂಗಳುಗಳಲ್ಲಿ ಕೆಂಪನಂಜಮ್ಮಣ್ಣಿಯವರು ತೀರಿಕೊಂಡರು. ತಂದೆ ಖಾಸಾಚಾಮರಾಜ ಒಡೆಯರ್ ಮುಮ್ಮಡಿಯವರು ಎರಡು ವರ್ಷದ ಹಸುಳೆಯಾಗಿರುವಾಗಲೇ ಸಿಡುಬು ರೋಗಕ್ಕೆ ಬಲಿಯಾಗಿ ಮೃತರಾದರು. ಖಾಸಾ ಚಾಮರಾಜ ಒಡೆಯರ್‌ರವರನ್ನು ಮೈಸೂರು ಸಂಸ್ಥಾನವನ್ನು ಅಂದಿನ ದಿನಗಳಲ್ಲಿ ಆಳುತ್ತಿದ್ದ ಇಮ್ಮಡಿ ಕೃಷ್ಣರಾಜ ಒಡೆಯರ್‌ರವರಿಗೆ ದತ್ತು ನೀಡಲಾಗಿತ್ತು. ಇದೇ ಇಮ್ಮಡಿ ಕೃಷ್ಣರಾಜ ಒಡೆಯರ್‌ರವರೇ ಹೈದರಾಲಿಯ ಪಿತೂರಿಗೆ ಬಲಿಯಾಗಿ ತನ್ನ ದತ್ತು ಪುತ್ರ ಖಾಸಾಚಾಮರಾಜ ಒಡೆಯರ್‌ರವರಿಗಿಂತ ಮೊದಲೇ ತೀರಿಕೊಂಡಿದ್ದರು. ಇಮ್ಮಡಿ ಕೃಷ್ಣರಾಜ ಒಡೆಯರ್ ಪತ್ನಿಯೇ ಮೈಸೂರಿನ ಇತಿಹಾಸದಲ್ಲಿ ಚಾಣಾಕ್ಷಮತಿಯೆಂಬ ಖ್ಯಾತಿಗೆ ಪಾತ್ರರಾಗಿ ಉಜ್ವಲನಾಮಧೇಯರಾಗಿರುವ ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿಯವರು. ಅನಾಥರಾದ ಮುಮ್ಮಡಿಯವರನ್ನು ಅಜ್ಜಿ ಲಕ್ಷ್ಮಿ ಅಮ್ಮಣ್ಣಿಯವರೇ ಅತಿ ಎಚ್ಚರಿಕೆಯಿಂದ ಬೆಳೆಸತೊಡಗಿದರು. ಹೀಗೆ 548 ವರ್ಷದಷ್ಟು ಕಾಲದ ತನ್ನ ಆಳ್ವಿಕೆಯ ಅವಧಿಯಲ್ಲಿ ಸುಮಾರು ಮೂವತ್ತೆಂಟು ವರ್ಷಕಾಲ ಮೈಸೂರಿನ ರಾಜವಂಶವು ಕರಾಳದ ದಿನಗಳನ್ನು ಅನುಭವಿಸಲು ಕಾರಣ ಇಮ್ಮಡಿ ಕೃಷ್ಣರಾಜ ಒಡೆಯರ್‌ರವರ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ವೀರ ಯೋಧ ಹೈದರಾಲಿ. ಈತನ ಶೌರ್ಯ ಸಾಹಸಗಳನ್ನು ಮೆಚ್ಚಿಕೊಂಡಿದ್ದ ಇಮ್ಮಡಿ ಕೃಷ್ಣರಾಜ ಒಡೆಯರ್ ಈತನಿಗೆ ಪದೋನ್ನತಿಯನ್ನು ನೀಡಿ 'ದಳವಾಯಿ' (Army Commander) ಹುದ್ದೆಗೇರಿಸಿದರು. ಒಬ್ಬ ಸಾಮಾನ್ಯ ಸಿಪಾಯಿಯಾಗಿದ್ದ ಹೈದರಾಲಿಯನ್ನು ಅವನ ಮನಸ್ಸನ್ನು ಅರಿಯದೆ ಉನ್ನತ ಹುದ್ದೆಗೇರಿಸಿದ ಹಾಗೂ ಆಗಿನ್ನೂ ತರುಣರಾಗಿದ್ದ ಇಮ್ಮಡಿ ಕೃಷ್ಣರಾಜ ಒಡೆಯರ್‌ರವರನ್ನೇ ಹೈದರಾಲಿ ಪಿತೂರಿಯಿಂದ ಕೊಲ್ಲಿಸಿದನು. ಹಾವಿಗೆ ಹಾಲೆರೆದಂತಾಯಿತು. 1761ರಲ್ಲಿ ಹೀಗೆ ಮೈಸೂರು ಸಂಸ್ಥಾನವನ್ನು ಆಕ್ರಮಿಸಿಕೊಂಡ ಸ್ವಾಮಿದ್ರೋಹಿ ಹೈದರಾಲಿಯು ಒಡೆಯರ್ ವಂಶಸ್ಥರನ್ನು ಗೃಹಬಂಧನದಲ್ಲಿಟ್ಟನು. ಹೈದರಾಲಿಯ ನಂತರ ಅವನ ಮಗ ಟೀಪುಸುಲ್ತಾನ್ ಮೈಸೂರು ಸಂಸ್ಥಾನದ ಅಧಿಪತಿಯಾದನು. ಇವರೆಲ್ಲರಿಗೂ ಶ್ರೀರಂಗಪಟ್ಟಣವೇ ರಾಜಧಾನಿಯಾಗಿತ್ತು. ಟೀಪುಸುಲ್ತಾನನೂ ಸಹ ಒಡೆಯರ್ ಕುಟುಂಬಸ್ಥರ ಬಗ್ಗೆ

ಬಹಳ ಕಠಿಣ ನಿಲುವನ್ನು ತಳೆದಿದ್ದನು. ಒಡೆಯರ್ ಕುಟುಂಬಕ್ಕೆ ಅತ್ಯಂತ ಕನಿಷ್ಠ ಸೌಲಭ್ಯವನ್ನು ಒದಗಿಸಲಾಗಿತ್ತು. ಇವರಿಗೆ ಸಹಾಯ ಮಾಡುವವರನ್ನು ಟೀಪುಸುಲ್ತಾನನು ಕ್ರೂರವಾಗಿ ದಂಡಿಸುತ್ತಿದ್ದನು. ಇಂತಹ ಸಂಕಟದ ದಿನಗಳಲ್ಲಿಯೇ ಮುಮ್ಮಡಿಯವರ ಜನನವಾಗಿತ್ತು. ಮಗು ಜನಿಸಿದ ಕೆಲವೇ ತಿಂಗಳುಗಳಲ್ಲಿ ತಾಯಿ ಕೆಂಪನಂಜಮ್ಮಣ್ಣಿಯವರ ಮರಣ ಹಾಗೂ ಎರಡು ವರ್ಷದ ನಂತರ ತಂದೆ ಖಾಸಾಚಾಮರಾಜ ಒಡೆಯರ್ ನಿಧನವಾದರೂ, ಮೊಮ್ಮಗನನ್ನು ಧೈರ್ಯಶಾಲಿ ಅಜ್ಜಿ ಲಕ್ಷ್ಮಿಅಮ್ಮಣ್ಣಿಯವರು ಸಲಹುತ್ತಾ ಟೀಪುಸುಲ್ತಾನನನ್ನು ನಿವಾರಿಸಲು ಯುಕ್ತ ಸಂದರ್ಭಕ್ಕಾಗಿ ತಾಳ್ಮೆಯಿಂದ ನಿರೀಕ್ಷಿಸುತ್ತಿದ್ದರು. ಮೊಮ್ಮಗನಿಗೆ ಯೋಗ್ಯರೀತಿಯ ವಿದ್ಯಾಭ್ಯಾಸ ನೀಡಬೇಕೆಂಬ ತೀವ್ರ ಹಂಬಲ ಹೊಂದಿದ್ದ ಲಕ್ಷ್ಮಿ ಅಮ್ಮಣ್ಣಿ ಮಗುವಿಗೆ ಕನ್ನಡದೊಡನೆ ಸಂಸ್ಕೃತಭಾಷೆಯ ಅಭ್ಯಾಸವನ್ನೂ ಸಹ ಕೊಡಿಸಲಾರಂಭಿಸಿದರು. ಮನಸ್ಸಿನ ಏಕಾಗ್ರತೆಗೆ ವಿಶೇಷವಾಗಿ ನೆರವಾಗುವ ಸಂಗೀತಶಿಕ್ಷಣವನ್ನೂ ಸಹ ಪ್ರಾರಂಭಿಸಲಾಯಿತು. ಕ್ಷತ್ರಿಯೋಚಿತವಾದ ಕುದುರೆ ಸವಾರಿ, ಕತ್ತಿಯ ವರಸೆ, ಮಲ್ಲವಿದ್ಯೆ, ಕಠಿಣ ವ್ಯಾಯಾಮಾದಿಗಳೂ ಸಹ ಶೈಕ್ಷಣಿಕ ಅಂಗಗಳಾದವು.

ಹೈದರಾಲಿಯು ಬ್ರಿಟಿಷರೊಡನೆ ಬೆಳೆಸಿಕೊಂಡಿದ್ದ ವೈಮನಸ್ಯವು ಅವನ ಮಗನಾದ ಟೀಪುಸುಲ್ತಾನನ ಕಾಲಕ್ಕೂ ಸಹ ಮುಂದುವರೆದು ಬ್ರಿಟಿಷರು ಅವನಿಗೆ ಕಡು ವೈರಿಗಳಾದರು. ಇದೇ ಸಂದರ್ಭದಲ್ಲಿ ಲಕ್ಷ್ಮಿಅಮ್ಮಣ್ಣಿಯವರು ಹೈದರಾಲಿ ಹಾಗೂ ಆತನ ಪುತ್ರನಿಂದ ರಾಜವಂಶಕ್ಕಾದ ದ್ರೋಹವನ್ನು ಸ್ಪಷ್ಟಪಡಿಸಿ ಬ್ರಿಟಿಷರ ನೆರವನ್ನು ಕೋರಿ ಅತ್ಯಂತ ರಹಸ್ಯವಾಗಿ ಪತ್ರವ್ಯವಹಾರ ನಡೆಸಿದರು. ಹೀಗೆ ಬ್ರಿಟಿಷರ ನೆರವನ್ನು ಕೋರಿ ಬರೆದ ಪತ್ರ ಸಫಲವಾಯಿತು. 1799ರಲ್ಲಿ ಕೇರಳದ ತಿರುವನಂತಪುರದ ಅನಂತಪದ್ಮನಾಭಸ್ವಾಮಿ ದೇವಾಲಯದ ಅತುಳವಾದ ಐಶ್ವರ್ಯದಿಂದ ಆಕರ್ಷಿತನಾಗಿ ತಿರುವನಂತಪುರದತ್ತ ಆಕ್ರಮಣಕ್ಕಾಗಿ ಟೀಪುಸುಲ್ತಾನನು ಹೊರಟು ಈಗಿನ 'ಸುಲ್ತಾನ್ ಬತೇರಿ' ಎಂಬ ಸ್ಥಳವನ್ನು ತಲುಪುವಷ್ಟರಲ್ಲಿ ಇತ್ತ ಶ್ರೀರಂಗಪಟ್ಟಣಕ್ಕೆ ಬ್ರಿಟಿಷರು ಮುತ್ತಿಗೆ ಹಾಕಿದರು. ಈ ವಾರ್ತೆಯನ್ನು ಕೇಳಿ ಅನಂತಪದ್ಮನಾಭನಿಗೆ ಪ್ರಾರ್ಥನೆ ಸಲ್ಲಿಸುತ್ತಾ ತನ್ನನ್ನು ಪಾರು ಮಾಡಬೇಕೆಂದು ಬೇಡಿಕೊಳ್ಳುತ್ತಿದ್ದ ತಿರುವನಂತಪುರದ ಪ್ರಭು ಮಾರ್ತಾಂಡವರ್ಮ ಅತೀವ ಸಂತುಷ್ಟನಾದ. ಹೀಗೆ 1799ರಲ್ಲಿ ಬ್ರಿಟಿಷರಿಗೂ ಟೀಪುಸುಲ್ತಾನನಿಗೂ ನಡೆದ ಘೋರ ಯುದ್ಧದಲ್ಲಿ ಟೀಪುಸುಲ್ತಾನ್‌ನನು ತನ್ನ ಇತರ ಸಿಪಾಯಿಗಳ ನಡುವೆ ತನ್ನನ್ನು ಗುರುತಿಸಲಾಗದಂತೆ ಮುನ್ನೆಚ್ಚರಿಕೆ ವಹಿಸಿದ್ದರೂ ಸಹ 1799ರ ಮೇ ತಿಂಗಳ ನಾಲ್ಕನೆಯ ತಾರೀಖು ಟೀಪುವಿನ ವಧೆಯಾಯಿತು. ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿಯವರಿಗೆ ಬ್ರಿಟಿಷರು ಕೊಟ್ಟಿದ್ದ ಮಾತಿನ ಪ್ರಕಾರವಾಗಿ 1799ರ ಜೂನ್ 30ನೆಯ ತಾರೀಖಿನಲ್ಲಿ ಮೈಸೂರಿನ ಅರಮನೆಯ ಆವರಣದಲ್ಲಿನ ಲಕ್ಷ್ಮೀನಾರಾಯಣಸ್ವಾಮಿ ದೇವಸ್ಥಾನದ ಬಳಿ ವಿಶೇಷವಾಗಿ ನಿರ್ಮಿಸಲಾಗಿದ್ದ ಮಂಟಪದಲ್ಲಿ ಕೇವಲ ಐದು ವರ್ಷದ ಬಾಲಕರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರಿಗೆ ಪಟ್ಟಾಭಿಷೇಕದ ಸಾಂಪ್ರದಾಯಿಕ ವಿಧಿಗಳು ಶಾಸ್ತ್ರೋಕ್ತವಾಗಿ ನಡೆದವು. ಜಗತ್ತಿನ ಇತಿಹಾಸದಲ್ಲಿಯೇ ಅಪರೂಪವೆನಿಸುವ ಐದುವರ್ಷದ ಪುಟ್ಟ ರಾಜಕುವರನೊಬ್ಬ ಪಟ್ಟಾಭಿಷಕ್ತನಾಗುವ ಐತಿಹಾಸಿಕ ಘಟನೆಗೆ ಬ್ರಿಟಿಷ್ ಸರ್ಕಾರದ ಉನ್ನತ ಅಧಿಕಾರಿಗಳೂ ಸಹ ಸಾಕ್ಷಿಗಳಾದರು. ಎಳೆವಯಸ್ಸಿನ ರಾಜಪುತ್ರನನ್ನು ಬಾಲಕನೆಂದು ತಿರಸ್ಕರಿಸಲಾಗದು. ಇವನು ನರರೂಪದ ಮಹಾದೇವತೆಯೆಂದು ಮನುಸ್ಮೃತಿಯಲ್ಲಿ (ಅಧ್ಯಾಯ-7) ಹೇಳಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು.

**ಬಾಲೋऽಪಿ ನಾವಮಂತವ್ಯೋ ಮನುಷ್ಯ ಇತಿ ಭೂಮಿಪಃ |**
**ಮಹತೀ ದೇವತಾ ಹ್ಯೇಷಃ ನರರೂಪೇಣ ತಿಷ್ಠತಿ ||**

ಬ್ರಿಟನ್ನಿನ ವರಿಷ್ಠಾಧಿಕಾರಿಯೊಬ್ಬರು (Duke of Wellington) ಬಾಲಕ ಮುಮ್ಮಡಿಯವರನ್ನು ವೇದಿಕೆಗೆ ಕೈಹಿಡಿದು ಕರೆತಂದ ವಿಚಾರವನ್ನು ಹಲವಾರು ಗ್ರಂಥಗಳಲ್ಲಿ ದಾಖಲಿಸಲಾಗಿದೆ. ಟೀಪುಸುಲ್ತಾನನಿಗೆ ದಿವಾನರಾಗಿ ಸೇವೆ ಸಲ್ಲಿಸುತ್ತಿದ್ದ ಪೂರ್ಣಯ್ಯನವರನ್ನೇ ಪುನಃ ಮೈಸೂರಿನ ದಿವಾನರಾಗಿ ಆಡಳಿತದಲ್ಲಿ ನೆರವಾಗಲು ನಿಯೋಜಿಸಲಾಯಿತು. ಮುಮ್ಮಡಿಯವರಿಗೆ ಹದಿನಾರು ವರ್ಷ ತುಂಬುವವರೆಗೂ ಅಜ್ಜಿ ಲಕ್ಷ್ಮಿಅಮಣ್ಣಿಯವರೇ ಆಡಳಿತದ ಜವಾಬ್ದಾರಿಯನ್ನು ಹೊತ್ತುಕೊಂಡರು. ಮೂವತ್ತೆಂಟು ವರ್ಷಗಳ ಕಾಲ ಹೈದರಾಲಿ ಮತ್ತು ಅವನ ಮಗ ಟೀಪುವಿನ ವಶವಾಗಿದ್ದ ಮೈಸೂರು ರಾಜ್ಯ ಮತ್ತೆ ಯದುವಂಶದವರ ಅಧೀನಕ್ಕೆ ಬಂದಿತು. ಕೈತಪ್ಪಿ ಹೋಗಿದ್ದ ಮೈಸೂರು ಸಂಸ್ಥಾನವನ್ನು ಯುಕ್ತಿಯಿಂದ ಹಿಂದಕ್ಕೆ ಪಡೆಯುವಲ್ಲಿ ಲಕ್ಷ್ಮಿಅಮ್ಮಣ್ಣಿಯವರ ಪಾತ್ರವು ಬಹಳ ಮಹತ್ತರವಾದುದು. ಯದುವಂಶದ ಏಕಮಾತ್ರದ ಕುಡಿಯಾಗಿ ಉಳಿದುಕೊಂಡಿದ್ದ ಮುಮ್ಮಡಿಯವರನ್ನು ಕಣ್ಣಲ್ಲಿ ಕಣ್ಣಿಟ್ಟು ಬೆಳಸಿ, ಬಾಲ್ಯದಿಂದಲೂ ಕ್ಷತ್ರಿಯೋಚಿತವಾದ ಶಿಕ್ಷಣದ ಜೊತೆಗೆ, ಸಂಸ್ಕೃತ, ಹಿಂದಿ, ಮರಾಠಿ, ಪರ್ಷಿಯನ್ ತಕ್ಕಮಟ್ಟಿಗೆ ಇಂಗ್ಲಿಷ್ ಹೀಗೆ ಬಹುಭಾಷಾವಿಶಾರದರೂ, ಸಾಹಿತ್ಯ ಸಂಗೀತ ಕಲಾಪ್ರೇಮಿಯೂ ಜನಾನುರಾಗಿಯೂ ಆದ ಅರಸರಾಗಿ ರೂಪುಗೊಳ್ಳುವಂತೆ ಮಾಡಿದವರು ಲಕ್ಷ್ಮಿಅಮ್ಮಣ್ಣಿಯವರು. ಐದನೆಯ ವಯಸ್ಸಿನಿಂದಲೇ ವ್ಯಾಯಾಮ, ಕತ್ತಿಯವರಸೆ, ಕುದುರೆಯ ಸವಾರಿಯ ಜೊತೆಗೆ ತಂಜಾವೂರಿನಿಂದ ಆಹ್ವಾನಿತರಾಗಿದ್ದ ವೀಣಾ ವಿದ್ವಾನ್ ವೆಂಕಟಸುಬ್ಬಯ್ಯನವರಿಂದ ಸಂಗೀತ ಶಿಕ್ಷಣ ಪ್ರಾರಂಭವಾಯಿತು. ಹಾಗೆಯೇ ಪೆರಿಯಸ್ವಾಮಿ ತಿರುಮಲಾಚಾರ್‌ರವರಿಂದ ಸಂಸ್ಕೃತ ಶಿಕ್ಷಣವನ್ನೂ ನೀಡಲಾಯಿತು. ಎಳೆಯ ವಯಸ್ಸಿನಿಂದಲೇ ಸಂಸ್ಕೃತ ಶಿಕ್ಷಣ ಪ್ರಾರಂಭವಾದುದು ಮನಸ್ಸನ್ನು ಏಕಾಗ್ರತೆಗೆ ತರುವಲ್ಲಿ ತತ್ಫಲವಾಗಿ ಅತಿಯಾದ ಸಾಹಿತ್ಯಾಸಕ್ತಿ ಮೂಡಿಸುವಲ್ಲಿ ಸಫಲವಾಯಿತು. ಕನ್ನಡನಾಡಿನ ಸಾಹಿತ್ಯ ಮತ್ತು ಸಾಂಸ್ಕೃತಿಕ ಪರಂಪರೆ ಒಂದು ವಿಶೇಷವಾದ ಮೆರುಗನ್ನು ಪಡೆದುಕೊಳ್ಳಲು, ಇಂದಿಗೂ ಸಹ ಮೈಸೂರು ತನ್ನದೇ ಆದ ಸಾಂಸ್ಕೃತಿಕ ಶೋಭೆಯಿಂದ ವಿಶ್ವಮಾನ್ಯತೆ ಪಡೆಯುವಲ್ಲಿ ಮುಮ್ಮಡಿಯವರ ಪಾತ್ರ ಅವರು ಹಾಕಿದ ತಳಪಾಯ ಅತ್ಯಂತ ಮಹತ್ತರವಾದುದು.

**ಮುಮ್ಮಡಿ ಕೃಷ್ಣರಾಜ ಒಡೆಯರ ರಾಜಕೀಯ ಜೀವನ ಮತ್ತು ಸಾಧನೆಗಳು :**

ಮುಮ್ಮಡಿಯವರಿಗೆ ಹದಿನಾರು ವರ್ಷ ತುಂಬುವವರೆಗೂ ಅವರ ಅಜ್ಜಿ ಲಕ್ಷ್ಮಿಅಮ್ಮಣ್ಣಿಯವರೇ ಮೊಮ್ಮಗನ ಪರವಾಗಿ ಯಶಸ್ವಿಯಾಗಿ ಆಡಳಿತ ನಡೆಸಿದರು. ರಾಜಕೀಯ ನಿರ್ವಹಣೆಯಲ್ಲಿ ಅವರಿಗೆ ಬಲಭುಜವಾಗಿದ್ದವರು ಆಡಳಿತದಲ್ಲಿ ಪಳಗಿದ್ದ ಹಾಗೂ ರಾಜನೀತಿ ಶಾಸ್ತ್ರದಲ್ಲಿ ನಿಷ್ಣಾತರಾಗಿದ್ದ ದಿವಾನ್ ಪೂರ್ಣಯ್ಯನವರು. ಕ್ರಿ.ಶ. 1810ರಲ್ಲಿ ಮುಮ್ಮಡಿಯವರಿಗೆ ಹದಿನಾರು ವರ್ಷಗಳು ತುಂಬಿದವು. ಆಗ ಬ್ರಿಟಿಷ್ ಸರ್ಕಾರವು ಆಡಳಿತದ ಜವಾಬ್ದಾರಿಯನ್ನು ಪೂರ್ಣಯ್ಯನವರಿಂದ ಹಿಂಪಡೆದು ಮುಮ್ಮಡಿಯವರಿಗೆ ವಹಿಸಿತು. ಇದಾದ ಮರು ವರ್ಷದಲ್ಲಿಯೇ ಅರ್ಥಾತ್ 1811ರಲ್ಲಿ ದಿಟ್ಟ ಮಹಿಳೆಯೂ ಚಾಣಾಕ್ಷಮತಿಯೂ ಆಗಿದ್ದ, ಮೈಸೂರು ಸಂಸ್ಥಾನವನ್ನು ಮತ್ತೆ ಒಡೆಯರ್ ವಂಶಕ್ಕೆ ಲಭಿಸುವಂತಾದ

ಐತಿಹಾಸಿಕ ಘಟನೆಯ ರೂವಾರಿಯಾಗಿದ್ದ ಮಹಾಮಾತೆ ಲಕ್ಷ್ಮಿ ಅಮ್ಮಣ್ಣಿಯವರು ತಮ್ಮ ಅರವತ್ತೆಂಟನೆಯ ವಯಸ್ಸಿನಲ್ಲಿ ದಿವಂಗತರಾದರು. ಅನಂತರ ಕೆಲವೇ ತಿಂಗಳುಗಳಲ್ಲಿ ದಿವಾನ್ ಪೂರ್ಣಯ್ಯನವರೂ ಸಹ ವಿಧಿವಶರಾದರು. ಆಗಷ್ಟೇ ತಾರುಣ್ಯದಲ್ಲಿ ಕಾಲಿಟ್ಟಿದ್ದ, ರಾಜಕೀಯವಾಗಿ ಇನ್ನೂ ಅನನುಭವಿಯಾಗಿದ್ದ ಮುಮ್ಮಡಿಯವರನ್ನು ಈ ಘಟನೆಗಳು ಸಂದಿಗ್ಧ ಪರಿಸ್ಥಿತಿಗೆ ಸಿಲುಕುವಂತೆ ಮಾಡಿದವು. ಸಾಹಿತ್ಯ, ಸಂಗೀತಾದಿ ಕಲೆಗಳ ಅಭ್ಯಾಸದಲ್ಲಿಯೇ ಹೆಚ್ಚು ಸಮಯವನ್ನು ಕಳೆದಿದ್ದ ಅವರು ಲೋಕಜ್ಞಾನವರಿಯದ ಮುಗ್ಧರಾಗಿದ್ದರು. ಇದೇ ಸಂದರ್ಭದಲ್ಲಿ ಕಪಟಿಗಳಾದ ರಾಜ್ಯಾಡಳಿತ ಶಾಖೆಯಲ್ಲಿದ್ದ ಕೆಲವು ಉದ್ಯೋಗಿಗಳು ಸಮಸ್ಯೆಗಳನ್ನು ಸೃಷ್ಟಿಸಲಾರಂಭಿಸಿದರು. ಮುಮ್ಮಡಿಯವರು ಅನಗತ್ಯ ಖರ್ಚುಗಳಿಗಾಗಿ ರಾಜ್ಯದ ಧನಸಂಪತ್ತನ್ನು ದುರ್ಬಳಕೆ ಮಾಡುತ್ತಿದ್ದಾರೆಂಬ ವದಂತಿಗಳನ್ನು ಹಬ್ಬಿಸಿ ಅವರ ವಿರುದ್ಧವಾಗಿ ಬ್ರಿಟಿಷರ ಪರವಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಮೇಜರ್ ಜನರಲ್ ಎ.ಎಚ್.ಕೋಲ್‌ರವರಿಗೆ (A.H.Cole) ದೂರು ನೀಡಲಾಯಿತು. ಈ ಅಧಿಕಾರಿಯು ಇದರಿಂದ ತೀವ್ರವಾಗಿ ಅಸಮಾಧಾನಗೊಂಡು ಮದರಾಸಿನಲ್ಲಿದ್ದ ಬ್ರಿಟಿಷ್ ಗವರ್ನರ್ ಥಾಮಸ್ ಮುನ್ರೋ (Thomas Munro)ರವರಿಗೆ ಪತ್ರ ಬರೆದು, ಮುಮ್ಮಡಿಯವರಿಂದ ಆರ್ಥಿಕ ನಿರ್ವಹಣೆ ಸಮರ್ಪಕವಾಗಿ ಆಗುತ್ತಿಲ್ಲವೆಂದು ದೂರು ನೀಡಿದರು. ಇಷ್ಟು ಸಾಲದೆಂಬಂತೆ ದೇಶದಲ್ಲಿ ಕ್ಷಾಮ ತಲೆದೋರಿತು. ಬೆಂಕಿಗೆ ತುಪ್ಪ ಹೊಯ್ದಂತೆ ಕಾಲರಾ ಮೊದಲಾದ ಅಂಟುಜಾಡ್ಯಗಳೂ ಸಹ ತಾಂಡವವಾಡಿದವು. ಜನರು ಸಾಕಷ್ಟು ಸಂಕಷ್ಟಗಳನ್ನು ಅನುಭವಿಸಿದರು. ಇವೆಲ್ಲಕ್ಕೂ ಸಹ ಮುಮ್ಮಡಿಯವರನ್ನೇ ಹೊಣೆಯಾಗಿ ಪರಿಗಣಿಸಿ ಬ್ರಿಟಿಷರು ಅಧಿಕಾರವನ್ನು ಮುಮ್ಮಡಿಯವರಿಂದ ಕಸಿದುಕೊಂಡು, ಅವರನ್ನು ನೆಪಮಾತ್ರಕ್ಕೆ ರಾಜರನ್ನಾಗಿ ಮಾಡಿ, ಮೈಸೂರು ಸಂಸ್ಥಾನದ ಆಡಳಿತವನ್ನು ತಾವೇ ನೇರವಾಗಿ ನಡೆಸತೊಡಗಿದರು. ಮದರಾಸಿನಿಂದ ಮಾರ್ಕ್ ಕಬ್ಬನ್ (Mark Cubbon) ಎಂಬ ಬ್ರಿಟಿಷ್ ಅಧಿಕಾರಿಯನ್ನು ಮೈಸೂರು ರಾಜ್ಯಕ್ಕೆ ನಿಯೋಜಿಸಿ, ಮೈಸೂರು ರಾಜ್ಯದ ಆಡಳಿತವನ್ನು ಬ್ರಿಟಿಷರು ತಮ್ಮ ಅಧೀನದಲ್ಲಿಯೇ ಇಟ್ಟುಕೊಂಡರು. ಮುಮ್ಮಡಿಯವರ ಖರ್ಚುವೆಚ್ಚಕ್ಕಾಗಿ ವರ್ಷಕ್ಕೆ ಮೂರುವರೆ ಲಕ್ಷರೂಪಾಯಿಗಳನ್ನು, ಭೂಕಂದಾಯದ ಸಂಗ್ರಹದಿಂದ ಅಶ್ವಾರೋಹಿದಳದ ಖರ್ಚು, ಸಂಸ್ಥಾನದ ಸಿಬ್ಬಂದಿಗಳ ವೇತನದ ಖರ್ಚು, ಪಂಜುದಳದವರ ವೇತನ ಇತ್ಯಾದಿಗಳನ್ನು ನಿರ್ವಹಿಸಿ ಉಳಿದ ಹಣವನ್ನು ಅರಮನೆಯ ಖರ್ಚಿಗೆ ನೀಡುವ ವ್ಯವಸ್ಥೆ ಮಾಡಲಾಗಿತ್ತು. 1831 ರಿಂದ 1886ರವರೆಗೂ ಸಹ ಹೀಗೆ ರಾಜ್ಯವು ಬ್ರಿಟಿಷರ ಅಧೀನದಲ್ಲಿತ್ತು.

ಬ್ರಿಟಿಷರು ನೀಡುತ್ತಿದ್ದ ವಾರ್ಷಿಕ ಅನುದಾನದಲ್ಲಿಯೇ ಮುಮ್ಮಡಿಯವರು ಕುಟುಂಬ, ಪರಿವಾರದವರ ಅಗತ್ಯಗಳನ್ನು ನಿಭಾಯಿಸಿ ಉಳಿದ ಹಣವನ್ನು ದಾನಧರ್ಮಗಳಲ್ಲಿ ವಿನಿಯೋಗಿಸುತ್ತಿದ್ದರು. ಅವರ ವ್ಯಕ್ತಿತ್ವದಲ್ಲಿ ಹುದುಗಿದ್ದ ಶುದ್ಧ ಮನಸ್ಸಿನ ಕೊಡುಗೈನ ಕಾಮಧೇನುವನ್ನು ಪ್ರಚೋದಿಸಲು ಅನುದಾನದಲ್ಲಿದ್ದ ಉಳಿತಾಯದ ಹಣವೇ ಸಾಕಾಗುತ್ತಿತ್ತು. ಬ್ರಿಟಿಷರು ತಾವೇ ಆಡಳಿತವನ್ನು ನಡೆಸಲು ತೊಡಗಿ ಮುಮ್ಮಡಿಯವರಿಗೆ ಬಿಡುವು ದೊರಕಿಸಿಕೊಟ್ಟಿದ್ದು ಅವರ ವ್ಯಕ್ತಿತ್ವದಲ್ಲಿ ಸುಪ್ತವಾಗಿದ್ದ 'ಭೋಜರಾಜ'ನನ್ನು ಜಾಗ್ರತಗೊಳಿಸಲು ಅನುಕೂಲವು ದೊರೆತಂತಾಯಿತು. ಬಾಲ್ಯದಲ್ಲಿ ಕಲಿತಿದ್ದ ಕ್ಷತ್ರಿಯೋಚಿತವಾದ ವ್ಯಾಯಾಮ, ಕತ್ತಿವರಸೆ, ಮಲ್ಲವಿದ್ಯೆಗಳೊಡನೆ, ಎಡಬಿಡದೆ ಮುಂದುವರೆಸಿಕೊಂಡೇ ಬಂದಿದ್ದ

ಸಂಸ್ಕೃತ ಸಾಹಿತ್ಯ ಮತ್ತು ಕನ್ನಡ ಸಾಹಿತ್ಯಗಳಲ್ಲಿನ ಲೋಕೋತ್ತರವಾದ ಕೃತಿಗಳ ಅಧ್ಯಯನವು ವಿಶಿಷ್ಟ ರೀತಿಯಲ್ಲಿ ಮುಮ್ಮಡಿಯವರ ಮೇಲೆ ಗಾಢವಾದ ಪ್ರಭಾವವನ್ನು ಬೀರಲಾರಂಭಿಸಿದವು. ತಮ್ಮ ಆಸಕ್ತಿಗಳಿಗೆ ಪೂರಕವಾಗಬಲ್ಲ ವಾತಾವರಣವನ್ನು ಸೃಷ್ಟಿಸಿಕೊಂಡ ಮುಮ್ಮಡಿಯವರು ರಾಜ್ಯದ ನಾನಾಭಾಗಗಳಿಂದ ಕವಿಗಳನ್ನು, ಶಾಸ್ತ್ರವಿದರನ್ನು, ಸಂಗೀತ ಮತ್ತು ಚಿತ್ರಕಲಾವಿದರನ್ನು ಕರಕುಶಲವಸ್ತುವಿನ್ಯಾಸಕರನ್ನು ಆಸ್ಥಾನಕ್ಕೆ ಆಹ್ವಾನಿಸಿ ಅವರಿಗೆ ಪ್ರೇರಣೆ ಪೋಷಣೆಗಳನ್ನು ನೀಡತೊಡಗಿದರು. ತಮಿಳು, ತೆಲುಗು, ಮಹಾರಾಷ್ಟ್ರ ಮೊದಲಾದ ರಾಜ್ಯಗಳಿಂದಲೂ ಸಹ ಸಂಸ್ಕೃತ ವಿದ್ವಾಂಸರುಗಳು ಮೈಸೂರಿಗೆ ಆಗಮಿಸತೊಡಗಿದರು. ಮಹಾರಾಷ್ಟ್ರದಲ್ಲಿ ಪೇಶ್ವೆಗಳ ಸಾಮ್ರಾಜ್ಯವು ನಿರ್ನಾಮವಾದ ಮೇಲೆ ಅಲ್ಲಿನ ವೈದಿಕಮನೆತನಗಳು ಮೈಸೂರಿಗೆ ವಲಸೆ ಬಂದರು. ಹೀಗೆ ಬಂದ ಸಂಸ್ಕೃತವಿದ್ವಾಂಸರಲ್ಲಿ ಪ್ರಮುಖರಾದವರು (1) ಚತುಃಶಾಸ್ತ್ರವಿಶಾರದರಾದ ತ್ರ್ಯಂಬಕಶಾಸ್ತ್ರಿ (2) ವ್ಯಾಕರಣಶಾಸ್ತ್ರದಲ್ಲಿ ಪರಿಣತರಾದ ಕಾಶೀನಾಥಶಾಸ್ತ್ರಿ ಹಾಗೂ ವಿಶ್ವನಾಥಶಾಸ್ತ್ರಿ (3) ಮಂತ್ರಶಾಸ್ತ್ರದಲ್ಲಿ ನಿಷ್ಣಾತರಾದ ರಾಜೇಶ್ವರಶಾಸ್ತ್ರಿ (4) ತರ್ಕಶಾಸ್ತ್ರದಲ್ಲಿ ಗಾಢ ಪಾಂಡಿತ್ಯ ಗಳಿಸಿದ್ದ ಬಾಳಾಚಾರ್ಯ (5) ಅಲಂಕಾರಶಾಸ್ತ್ರದಲ್ಲಿ ಸಿದ್ಧಹಸ್ತರಾದ ತೆಂಗಳೆ ಸುದರ್ಶನಾಚಾರ್ಯ (6) ವೇದಾಂತದಲ್ಲಿ ಸಿದ್ಧಹಸ್ತರಾದ ಕುಣಿಗಲ್ ರಾಮಾಶಾಸ್ತ್ರಿ (7) ಜ್ಯೋತಿಷ್ಯದಲ್ಲಿ ಘನವಿದ್ವಾಂಸರಾಗಿದ್ದ ವಿಷ್ಣುಪಾದಾಚಾರ್ಯ (8) ದ್ವೈತವೇದಾಂತ ವಿಶಾರದರಾಗಿದ್ದ ಕಾಶೀತಿಮ್ಮಣ್ಣಾಚಾರ್ಯ (9) ವಿಶಿಷ್ಟಾದ್ವೈತಕೋವಿದರಾಗಿದ್ದ ಆನಂದಾಳ್ವರರು (10) ತರ್ಕಶಾಸ್ತ್ರ ಪಂಡಿತರುಗಳಾದ (11) ತಿರುಪತಿ ಶ್ರೀನಿವಾಸಾಚಾರ್ಯ (ತರ್ಕಶಾಸ್ತ್ರ) (12) ನಾಮಗಿರಿ ತಾತಾಚಾರ್ಯ (13) ವ್ಯಾಕರಣಶಾಸ್ತ್ರ ವಿದ್ವಾಂಸರುಗಳಾದ ಕಾಶೀಶೇಷಶಾಸ್ತ್ರಿ (14) ವ್ಯಾಸಕೃಷ್ಣಾಚಾರ್ಯ ಮತ್ತು ಕಾಶೀವಿಶ್ವನಾಥಶಾಸ್ತ್ರಿ ಹಾಗೂ ನರಸಿಂಹಶಾಸ್ತ್ರಿ ಇವರುಗಳು ಮುಮ್ಮಡಿಯವರ ಆಸ್ಥಾನದಲ್ಲಿ ಗುರುತಿಸಲಾಗಿದ್ದ ಸಂಸ್ಕೃತ ವಿದ್ವಾಂಸರುಗಳು. ಬಾಲ್ಯದಿಂದಲೇ ಸಂಸ್ಕೃತ ಭಾಷೆಯತ್ತ ಮುಮ್ಮಡಿಯವರು ಆಕರ್ಷಿತರಾಗಲು ಕಾರಣ ಅವರ ಸಂಸ್ಕೃತ ಗುರುಗಳಾದ ಪೆರಿಯ ಸ್ವಾಮಿ ತಿರುಮಲಾಚಾರ್ಯರು. ಹಲವಾರು ಸಂಸ್ಕೃತ ಕವಿಗಳೂ ಸಹ ರಾಜಾಶ್ರಯ ಪಡೆದಿದ್ದು ಅವರುಗಳಲ್ಲಿ ಪ್ರಸಿದ್ಧರಾದವರು ಅನವಟ್ಟಿ ಶ್ರೀನಿವಾಸಾಚಾರ್ಯ, ಶಾಂತರಾಜ ಪಂಡಿತ, ಕವಿವರದಾಚಾರ್ಯ, ಶ್ರೀನಿವಾಸಕವಿ, ಪೆರಿಯ ಕೃಷ್ಣಮಾಚಾರ್.

ಇವರುಗಳಲ್ಲಿ ಪೆರಿಯ ಕೃಷ್ಣಮಾಚಾರ್ಯರಿಂದ ಪರಕಾಲವಿಜಯಚಂಪೂ, ಕವಿ ವರದಾಚಾರ್ಯರಿಂದ ಗುರುರಾಜಚಂಪೂ, ಸುಬ್ರಹ್ಮಣ್ಯ ಎಂಬುವರಿಂದ ತಾರಾಶಶಾಂಕವೆಂಬ ನಾಟಕ, ಅನವಟ್ಟಿ ಶ್ರೀನಿವಾಸಾಚಾರ್ಯರಿಂದ 'ಅನಿರುದ್ಧವಿಜಯ'ವೆಂಬ ಸಂಸ್ಕೃತ ನಾಟಕ, ಶ್ರೀನಿವಾಸಕವಿ ಎಂಬುವರಿಂದ ಕೃಷ್ಣನೃಪಜಯೋತ್ಕರ್ಷ, ಶಾಂತರಾಜ ಪಂಡಿತರಿಂದ ಸರಸಿಜನ ಚಿಂತಾಮಣಿ ಮೊದಲಾದ ಸಂಸ್ಕೃತ ಕೃತಿಗಳು ರಚನೆಗೊಂಡವು. ಸ್ವತಃ ಸಂಗೀತಶಾಸ್ತ್ರಜ್ಞರೂ, ವೀಣಾವಾದನ ಪರಿಣತರೂ ಆಗಿದ್ದ ಮುಮ್ಮಡಿಯವರ ಆಸ್ಥಾನದಲ್ಲಿ ಪ್ರಸಿದ್ಧ ಸಂಗೀತ ವಿದ್ವಾಂಸರುಗಳಾದ ವೀಣಾ ವೆಂಕಟಸುಬ್ಬಯ್ಯ, ವೀಣಾ ಸಾಂಬಯ್ಯ, ವೀಣೆ ಅಣ್ಣಯ್ಯ, ಸದಾಶಿವರಾಯರು, ಅನಂತಸುಬ್ಬಯ್ಯ ಮತ್ತು ವೆಂಕಟಸುಬ್ಬಯ್ಯ ಮೊದಲಾದವರಲ್ಲದೆ, ಇನ್ನೂ ಅರವತ್ತೈದು ಜನ ಸಂಗೀತವಿದ್ವಾಂಸರುಗಳಿಗೆ ರಾಜಾಶ್ರಯ ದೊರೆತಿತ್ತು. ಚಿತ್ರಕಲಾವಿದರನ್ನು,

ಕರಕುಶಲವಸ್ತುಗಳ ತಯಾರಿಕೆಯಲ್ಲಿ ಪರಿಣತರಾದವರನ್ನು ಗುರುತಿಸಿ ಆಸ್ಥಾನಕ್ಕೆ ಆಹ್ವಾನಿಸಿ ಅವರುಗಳ ಪ್ರತಿಭೆಯ ಸದುಪಯೋಗವನ್ನು ನಾಡಿನ ಜನರೆಲ್ಲರಿಗೂ ಲಭಿಸುವಂತೆ ಮಾಡಿದವರು ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು. ಮುಂದೆ ಈ ಬಗ್ಗೆ ವಿಶೇಷವಾಗಿ ಪ್ರಸ್ತಾವಿಸಲಾಗಿದೆ.

ಬಾಲ್ಯದಿಂದಲೂ ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಸಾಹಿತ್ಯಕೃತಿಗಳನ್ನು ಗಾಢವಾಗಿ ಅಧ್ಯಯನ ಮಾಡಿದ್ದ ಮುಮ್ಮಡಿಯವರು ಹಿಂದೂಸ್ತಾನಿ, ಮರಾಠಿ ಭಾಷೆಗಳನ್ನೂ, ಪರ್ಷಿಯನ್ ಹಾಗೂ ತೆಲುಗು ಭಾಷೆಗಳನ್ನೂ ತಕ್ಕಮಟ್ಟಿಗೆ ಬಲ್ಲವರಾಗಿದ್ದರು. ಇಂಗ್ಲಿಷ್ ಭಾಷೆಯಲ್ಲಿ ವ್ಯವಹರಿಸುವಷ್ಟು ಜ್ಞಾನವನ್ನು ಗಳಿಸಿಕೊಂಡಿದ್ದರಲ್ಲದೆ ಪ್ರಪ್ರಥಮ ಬಾರಿಗೆ ಶೇಕ್ಸ್‌ಪಿಯರನ ದುರಂತನಾಟಕ 'ಒಥೆಲೋ' ಕೃತಿಯನ್ನು ಕನ್ನಡಕ್ಕೆ ಶೂರಸೇನಚರಿತವೆಂಬ ಹೆಸರಿನಲ್ಲಿ ಅನುವಾದಿಸುವ ಕಾರ್ಯಕ್ಕೆ ಪ್ರೋತ್ಸಾಹ ನೀಡಿದರು. ಬಹಳಷ್ಟು ಸಂಸ್ಕೃತ ಸಾಹಿತ್ಯ ಕೃತಿಗಳು ಮುಮ್ಮಡಿಯವರ ಕಾಲದಲ್ಲಿ ಕನ್ನಡ ಭಾಷೆಯಲ್ಲಿ ಶೋಭಿಸಿದವು.

**ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ರಚಿಸಿದ ಸಾಹಿತ್ಯ ಕೃತಿಗಳು :**

ಬ್ರಿಟಿಷರೇ ನೇರವಾಗಿ ಆಡಳಿತ ನಡೆಸಿದುದರಿಂದ ಮುಮ್ಮಡಿಯವರಿಗೆ ಸಾಹಿತ್ಯಕೃತಿಗಳ ರಚನೆಗೆ ಸದವಕಾಶ ದೊರೆತಂತಾಯಿತು. ಇವರ ಜೀವಿತಕಾಲದಲ್ಲಿ ರಚನೆಯಾದ ಸಾಹಿತ್ಯ ಕೃತಿಗಳ ಹಾಗೂ ಸಾಂಸ್ಕೃತಿಕ ಸಾಧನೆಗಳು, ಕನ್ನಡನಾಡಿಗೆ, ವಿಶೇಷವಾಗಿ ಮೈಸೂರು ಸಂಸ್ಥಾನದ ಜನರ ಹಿತಕ್ಕಾಗಿ ನಡೆದ ದಾನಧರ್ಮಗಳ ಬಗ್ಗೆ ಮುಂದಿನ ಪಂಕ್ತಿಗಳಲ್ಲಿ ನೀಡಲಾಗಿದೆ. ಎಪ್ಪತ್ತುವರ್ಷಗಳ ಸುದೀರ್ಘ ಆಳ್ವಿಕೆಯ ಅವಧಿಯಲ್ಲಿ ಸಾಹಿತ್ಯಕ್ಷೇತ್ರದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದಂತೆ ಸುಮಾರು ಐವತ್ತೆಂಟು ಸಾಹಿತ್ಯಕೃತಿಗಳು ಮುಮ್ಮಡಿಯವರಿಂದ ರಚನೆಯಾಗಿ ಸಾಹಿತ್ಯಕ್ಷೇತ್ರದಲ್ಲಿ ಅವರ ಹೆಸರನ್ನು ಶಾಶ್ವತಗೊಳಿಸಿವೆ. ರಸವಿದ್ಯೆಯನ್ನು ಬಲ್ಲವರು ಮುಪ್ಪು ಸಾವುಗಳನ್ನು ಮೀರಿ ನಿಲ್ಲುವಂತೆ, ರಸಭರಿತ ಶ್ರೇಷ್ಠ ಕೃತಿರಚನೆಯಲ್ಲಿ ಸಿದ್ಧಹಸ್ತರಾದ ಕವಿಗಳ ಕೀರ್ತಿಕಾಯಕ್ಕೆ ಜರಾಮರಣಗಳ ಭಯವಿಲ್ಲವಷ್ಟೆ.

ಜಯಂತಿ ತೇ ಸುಕೃತಿನೋ ರಸಸಿದ್ಧಾಃ ಕವೀಶ್ವರಾಃ |
ನಾಸ್ತಿ ತೇಷಾಂ ಯಶಃಕಾಯೇ ಜರಾಮರಣಜಂ ಭಯಮ್ ||

ಭರ್ತೃಹರಿಯ ಈ ಸೂಕ್ತಿಯು ಘೋಷಿಸುವಂತೆ ಮುಮ್ಮಡಿಯವರು ತಮ್ಮ ವೈವಿಧ್ಯಮಯ ಕೃತಿಗಳಿಂದ ಹಾಗೂ ಕವಿಗಳಿಗೆ, ವಿದ್ವಾಂಸರಿಗೆ, ಕಲಾವಿದರಿಗೆ ನೀಡಿದ ವಿಶೇಷ ಪ್ರೋತ್ಸಾಹಗಳಿಂದಲೂ, ಮೇಲಾಗಿ ಜನಪರವಾದ ಅಭಿವೃದ್ಧಿ ಕಾರ್ಯಗಳಿಂದಲೂ ಪರಮಾರವಂಶದ ಭೋಜರಾಜನಂತೆಯೇ ಸಾಂಸ್ಕೃತಿಕ ಜಗತ್ತಿನಲ್ಲಿ ಚಿರಂಜೀವಿಗಳಾಗಿದ್ದಾರೆ.

ಪರಮಾರವಂಶದ ಭೋಜರಾಜನು ಕ್ರಿ.ಶ. 1018 ರಿಂದ 1055ರವರೆಗೆ ಮಾಳವರಾಜ್ಯದ ಅಧಿಪತಿಯಾಗಿ, ಅತ್ಯಂತ ಜನಪ್ರಿಯನಾಗಿದ್ದು ಸ್ವತಃ ವೈವಿಧ್ಯಮಯವಾದ ಸಂಸ್ಕೃತ ಕೃತಿಗಳನ್ನು ರಚಿಸಿದುದಲ್ಲದೆ ಕವಿಗಳಿಗೆ ವಿದ್ವಾಂಸರಿಗೆ ಆಶ್ರಯದಾತನೂ ಆಗಿದ್ದನು. ಅವನ ರಾಜಧಾನಿಯಾದ ಧಾರಾನಗರವು ಸರಸ್ವತಿಯ 'ಆವಾಸಸ್ಥಾನ'ವೆಂಬ ಪ್ರಸಿದ್ಧಿಯನ್ನು ಪಡೆದಿತ್ತು. ಕಾವ್ಯ, ವೈದ್ಯಶಾಸ್ತ್ರ, ದರ್ಶನ, ವ್ಯಾಕರಣ, ಯೋಗ, ಧನುರ್ವಿದ್ಯೆ ಈ ಎಲ್ಲ ಸಾಹಿತ್ಯಪ್ರಕಾರಗಳಲ್ಲಿ

ಭೋಜರಾಜನು ಕೃತಿಗಳನ್ನು ರಚಿಸಿದ್ದಾನೆ. ಭೋಜವಿರಚಿತವಾದ (1) ಚಂಪೂರಾಮಾಯಣವು ಗದ್ಯಪದ್ಯಗಳೆರಡೂ ಬೆರೆತ ಶೈಲಿಯಲ್ಲಿ ವಾಲ್ಮೀಕಿರಾಮಾಯಣದ ಕಥೆಯನ್ನು ಆಧರಿಸಿ ರಚಿಸಿರುವ ಚಂಪೂಕಾವ್ಯ (2) ಸರಸ್ವತೀಕಂಠಾಭರಣವು ಕಾವ್ಯವಿಮರ್ಶೆಯ ಗ್ರಂಥ (3) ಶೃಂಗಾರಪ್ರಕಾಶವು ರಸಗಳ ಸರಣಿಯಲ್ಲಿ ಶೃಂಗಾರರಸದ ಶ್ರೇಷ್ಠತೆಯನ್ನು ಸಾಧಿಸುವ ಅಲಂಕಾರಗ್ರಂಥ (4) ಕವಿಕಂಠಾಭರಣವು ಕವಿಜನರಿಗೂ ಸಾಹಿತ್ಯದ ಇತರ ಲೇಖಕರಿಗೂ ಮಾರ್ಗದರ್ಶಕ ಗ್ರಂಥ (5) ರಾಜಮಾರ್ತಾಂಡವು ಪತಂಜಲಿಯ ಯೋಗಸೂತ್ರದ ಮೇಲಣ ವ್ಯಾಖ್ಯಾನ (6) ಸಮರಾಂಗಣಸೂತ್ರಧಾರವು ವಾಸ್ತುಶಿಲ್ಪಕ್ಕೆ ಸಂಬಂಧಿಸಿದ್ದು ನಗರನಿರ್ಮಾಣ, ಕೋಟೆಕೊತ್ತಲ, ದೇವಮಂದಿರಗಳ ನಿರ್ಮಾಣಕ್ರಮಗಳಿಗೆ ಸೀಮಿತವಾಗಿದೆ (7) ತತ್ತ್ವಪ್ರಕಾಶವು ಶೈವದರ್ಶನದ ಸಂಕ್ಷಿಪ್ತಸುಂದರ ನಿರೂಪಣೆ (8) ರಾಜಮೃಗಾಂಕವೆಂಬ ಕೃತಿಯು ಲೋಹಶಾಸ್ತ್ರಕ್ಕೆ ಸಂಬಂಧಿಸಿದ್ದು ಅದಿರುಗಳಿಂದ ಲೋಹವನ್ನು ತೆಗೆಯುವ ಕ್ರಮಗಳನ್ನೂ, ವಿವಿಧ ರೀತಿಯ ಔಷಧಗಳನ್ನು ಸಿದ್ಧಪಡಿಸುವ ವಿಧಾನಗಳನ್ನೊಳಗೊಂಡಿದೆ (9) ಯುಕ್ತಿಕಲ್ಪತರು - ಯುದ್ಧನೌಕೆಗಳ ನಿರ್ಮಾಣ, ಹಡಗು, ದೋಣಿಗಳ ವಿನ್ಯಾಸಗಳಿಗೆ ಸಂಬಂಧಿಸಿದೆ (10) ಧರ್ಮಶಾಸ್ತ್ರವೃತ್ತಿಯು ಕಾನೂನುವ್ಯವಸ್ಥೆಗೆ ಸಂಬಂಧಿಸಿದ ಅಧಿನಿಯಮಗಳ ನಿರೂಪಣೆ (11) ತತ್ತ್ವವೈಶಾರದಿಯು ಈಶ್ವರಕೃಷ್ಣನ 'ಸಾಂಖ್ಯಕಾರಿಕೆ'ಗೆ ವಿವರಣೆಯಾಗಿದೆ.

ಭೋಜರಾಜನು ತನ್ನ ಆಳ್ವಿಕೆಯ ಸಂದರ್ಭದಲ್ಲಿ ಈ ಮೊದಲು ಮಹಮದ್ ಘಜ್ನಿಯ ದಾಳಿಯಿಂದ ಶಿಥಿಲವಾಗಿದ್ದ ಜಗತ್ಪ್ರಸಿದ್ಧ ಸೋಮನಾಥ ದೇವಾಲಯವನ್ನು ದುರಸ್ತಿಗೊಳಿಸಿದನು. ಮಧ್ಯಪ್ರದೇಶದ ಭೂಪಾಲದ ಸಮೀಪ ಭೋಜಪುರವೆಂಬ ನಗರವನ್ನು ನಿರ್ಮಿಸಿ ಹಲವಾರು ಸುಂದರ ದೇವಸ್ಥಾನಗಳನ್ನು ನಿರ್ಮಾಣ ಮಾಡಿಸಿದನು. ಎಲ್ಲಕ್ಕಿಂತಲೂ ಮಿಗಿಲಾಗಿ ಭೂಪಾಲದ ಬಳಿ ಹರಿಯುತ್ತಿದ್ದ 'ಬೇತ್ವಾ' ನದಿಗೆ ಅಣೆಕಟ್ಟನ್ನು ಕಟ್ಟಿಸಿ 'ಭೋಜಸರೋವರ'ವೆಂಬ ಜಲಾಶಯವನ್ನು ನಿರ್ಮಾಣ ಮಾಡಿ ಸಾವಿರಾರು ಎಕರೆ ಭೂಮಿಗೆ ನೀರು ಲಭಿಸುವಂತೆ ಮಾಡಿ ಕೃಷಿ ಆಂದೋಳನವನ್ನೇ ಮಾಡಿದವನು ಭೋಜಚಕ್ರವರ್ತಿ. ಇಂದಿಗೂ ಸಹ ಸಂಸ್ಕೃತ ಸಾಹಿತ್ಯಾಸಕ್ತರಿಗೆ ಭೋಜರಾಜನ ಆದರ್ಶಗಳನ್ನು ಬಿಂಬಿಸುವ ಕಥೆಗಳೆಲ್ಲವೂ ಅಚ್ಚುಮೆಚ್ಚಿನವಾಗಿಯೇ ಉಳಿದಿವೆ. ಮುಮ್ಮಡಿಯವರೂ ಸಹ ಭೋಜನಂತೆಯೇ ವೈವಿಧ್ಯಮಯ ಸಾಹಿತ್ಯ ರಚನೆಗಳಿಂದ, ಸಂಗೀತ ಕೃತಿಗಳಿಂದ ಕಲಾಪ್ರೇಮದಿಂದ ಮೈಸೂರು ಸಂಸ್ಥಾನದ ಸಾಂಸ್ಕೃತಿಕ ಇತಿಹಾಸದಲ್ಲಿ ತಮ್ಮದೇ ಆದ ವಿಶೇಷ ಛಾಪು ಮೂಡಿಸಿದವರು. ಇವರು ರಚಿಸಿರುವ ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿನ ಕೃತಿಗಳು ಈ ಕೆಳಗಿನಂತಿವೆ -

**ಸಾಹಿತ್ಯಕ್ಷೇತ್ರಕ್ಕೆ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕೊಡುಗೆ :**

ಸಂಸ್ಕೃತ ಹಾಗೂ ಕನ್ನಡ ಭಾಷೆ ಸೇರಿದಂತೆ ಒಟ್ಟು ಐವತ್ತೆಂಟು ಕೃತಿಗಳನ್ನು ಮುಮ್ಮಡಿಯವರು ರಚಿಸಿದ್ದು ಅವು ಸ್ತೋತ್ರ, ಕಾವ್ಯರಚನೆ, ಶಾಸ್ತ್ರಾಧಾರಿತ ರಚನೆಗಳು, ವಿಶ್ವಕೋಶ ಮೊದಲಾದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿವೆ.

**(ಅ) ಸಂಸ್ಕೃತಭಾಷೆಯಲ್ಲಿ ರಚನೆಗೊಂಡಿರುವ ದೇವತಾಸ್ತೋತ್ರಗಳು :**

1. **ಮೃತ್ಯುಂಜಯಶತಕಮ್**
2. **ನಂಜುಂಡಶತಕಮ್**

3. ಗಣೇಶರತ್ನಮಾಲಾ
4. ದೇವತಾಧ್ಯಾನಮಾಲಿಕಾ
5. ಚಾಮುಂಡಾತ್ರಿಶತಿ
6. ಗಣಪತಿತ್ರಿಶತಿ
7. ಶ್ರೀಕಂಠೇಶ್ವರತ್ರಿಶತಿ
8. ಮಹಾವಿಷ್ಣುತ್ರಿಶತಿ
9. ವಿಷ್ಣುನಾಮಪಂಚಾಶತ್
10. ಸೂರ್ಯಚಂದ್ರಸ್ತೋತ್ರಮ್
11. ರಾಮಕೃಷ್ಣಸ್ತೋತ್ರಮ್
12. ಶಂಕರನಾರಾಯಣಸ್ತೋತ್ರಮ್
13. ಚಾಮುಂಡಾಮಂಗಳಮಾಲಿಕಾ
14. ಅರ್ಕಪುಷ್ಕರಿಣೀಮಾಹಾತ್ಮ್ಯಮ್
15. ಅಖಂಡಕಾವೇರೀಮಾಹಾತ್ಮ್ಯಮ್
16. ನವಗ್ರಹಪೂಜಾಮಂಜರಿ
17. ಮಹಾಸಂಕಲ್ಪಃ
18. ದೇವತಾನಾಮಕುಸುಮಮಂಜರೀ

(ಆ) ಕಾವ್ಯರಚನೆಗಳು (ಸಂಸ್ಕೃತದಲ್ಲಿ) :

19. ರಾಮಕಥಾಪುಷ್ಪಮಂಜರೀ
20. ಕೃಷ್ಣಕಥಾಪುಷ್ಪಮಂಜರೀ
21. ಸೂರ್ಯಚಂದ್ರವಂಶಾವತರಣಮ್
22. ಆರ್ಯರಾಮಾಯಣಮ್
23. ಸೂರ್ಯಚಂದ್ರವಂಶಾವಳೀ (ರಾಮಾಯಣ, ಮಹಾಭಾರತಗಳಿಂದ ಆಯ್ದ ನೂರು ಪ್ರಕರಣಗಳೂ ಯದುವಂಶದ ಮೂಲ ಪುರುಷರುಗಳಾದ ಯದುರಾಯ, ಕೃಷ್ಣರಾಯರುಗಳ ಶೌರ್ಯಪ್ರತಾಪಗಳ ವರ್ಣನೆಗಳಿವೆ.)

(ಇ) ಸಂಸ್ಕೃತಮೂಲವನ್ನು ಆಧರಿಸಿ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದ ಸಂಸ್ಕೃತಭಾಷೆಯಲ್ಲಿಯೇ ರಚಿತವಾದ ಗ್ರಂಥಗಳು :

24. ಶ್ರೀತತ್ತ್ವನಿಧಿ (ದೇವತಾವಿಷಯಕ ಸಚಿತ್ರ ವಿಶ್ವಕೋಶ)
25. ಗಣಿತಸಂಗ್ರಹ
26. ಶ್ರೀಚಕ್ರಸಂಗ್ರಹಮಂಜರಿ
27. ಸಂಖ್ಯಾರತ್ನಮಾಲಾ (ಒಂದರಿಂದ ಇಪ್ಪತ್ತರವರೆಗೂ ಜಗತ್ತಿನಲ್ಲಿ ಕಂಡುಬರುವ ವಿಷಯ ವೈವಿಧ್ಯ ಸೂಚಕ ವಿಷಯಕೋಶ)
28. ಸಂಖ್ಯಾರತ್ನಕೋಶ (ಲಘುವಿಷಯಕೋಶಗ್ರಂಥ)
29. ಸ್ವರಚೂಡಾಮಣಿ (ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥ)
30. ಗ್ರಹಣದರ್ಪಣಮ್
31. ಶಕಕಾಲನಿರ್ಣಯ
32. ಗ್ರಹದರ್ಪಣಮ್
33. ದಶವಿಭಾಗಪದಕಮ್
34. ಚತುರಂಗಸಾರಸರ್ವಸ್ವಮ್

35. ಸೌಗಂಧಿಕಾಪರಿಣಯ (ಸಂಸ್ಕೃತ) ಗದ್ಯಕಾವ್ಯ. ಇದು ಕನ್ನಡ ಮೂಲದಿಂದ ಸಂಸ್ಕೃತಭಾಷೆಗೆ ಅನುವಾದಗೊಂಡಿರುವುದಾಗಿ ತಿಳಿದು ಬಂದಿರುತ್ತದೆ. 'ಕೃಷ್ಣರಾಜಪ್ರಭಾವೋದಯ'ವೆಂಬ ಪದ್ಯಕಾವ್ಯಕ್ಕೆ ಶ್ರೀನಾಡಕೃಷ್ಣಶರ್ಮ ಎಂಬುವನು 'ಭಾವಬೋಧಕಲಿಕಾ' ಎಂಬ ವ್ಯಾಖ್ಯಾನವನ್ನು ಬರೆದಿರುವನು. ಈ ವ್ಯಾಖ್ಯಾನವನ್ನು ರಚಿಸುವ ಮೊದಲು ಶ್ರೀಮುಮ್ಮಡಿ ಕೃಷ್ಣರಾಜವಿರಚಿತ ಸೌಗಂಧಿಕಾಪರಿಣಯದ ಸಂಸ್ಕೃತಾನುವಾದವನ್ನೂ 'ಮದಾಲಸಾಪರಿಣಯ'ವೆಂಬ ನಾಟಕವನ್ನು ರಚಿಸಿರುವುದಾಗಿ 'ಭಾವಬೋಧಕಲಿಕಾದಿ' ಉಪಕ್ರಮದಲ್ಲಿ ಸೂಚಿತವಾಗಿದೆ.

**(ಈ) ಕನ್ನಡದಲ್ಲಿ ರಚಿತವಾದ ಕೃತಿಗಳು :**

36. ಸೌಗಂಧಿಕಾಪರಿಣಯ - ಭಾಮಿನೀಷಟ್ಪದಿಯಲ್ಲಿ

37. ವತ್ಸರಾಜಕಥಾ - ಕನ್ನಡ ರಚಿತವಾಗಿರುವ ಪದ್ಯಕಾವ್ಯ

38. ಕೃಷ್ಣಕಥಾಸಂಗ್ರಹ - ಭಾಗವತ ದಶಮಸ್ಕಂಧದಿಂದ ಆಯ್ದು ಕಥೆಗಳು

39. ಸಾರಸಂಗ್ರಹಭಾರತ - ಭರತಶಾಸ್ತ್ರ ಆಧಾರಿತ ಸಂಗೀತ-ನೃತ್ಯ-ಗ್ರಂಥ

40. ಪರಿಮಳ ಪಾರಿಜಾತ (ಸುಗಂಧದ್ರವ್ಯವಿಚಾರ)

41. ಕೃಷ್ಣರಾಜವಾಣೀವಿಲಾಸರತ್ನಾಕರ - ಕಾಳಿದಾಸನ ನಾಟಕತ್ರಯದ ಕನ್ನಡ ಅನುವಾದ

42. ಸಾರಸಂಗ್ರಹ ಶ್ರೀರಾಮಕಥಾಕಲ್ಪವೃಕ್ಷ (ವಾಲ್ಮೀಕಿ ರಾಮಾಯಣ, ಅದ್ಭುತರಾಮಾಯಣ, ಪುರಾಣಗಳಲ್ಲಿ ಬರುವ ಶ್ರೀರಾಮನ ಕಥೆಗಳು)

43. ಕೃಷ್ಣರಾಜವಾಣೀವಿಲಾಸಟೀಕಾ (ಭಾಗವತಕ್ಕೆ ಶ್ರೀಧರಾಚಾರ್ಯರು ರಚಿಸಿರುವ ವ್ಯಾಖ್ಯಾನದ ಕನ್ನಡ ಟೀಕೆ)

44. ಕೃಷ್ಣರಾಜವಾಣೀವಿಲಾಸಟೀಕಾ (ಮಹಾಭಾರತದ ಮೇಲಣ ಕನ್ನಡ ವ್ಯಾಖ್ಯಾನ)

45. ದೇವೀಮಾಹಾತ್ಮ್ಯ - ಮಾರ್ಕಂಡೇಯಪುರಾಣದ 'ಸಪ್ತಶತೀ' ಮೇಲಣ ಕನ್ನಡ ವ್ಯಾಖ್ಯಾನ

46. ಹರಿಶ್ಚಂದ್ರೋಪಾಖ್ಯಾನ - ಮಹಾಭಾರತ ವನಪರ್ವದಲ್ಲಿನ ಹರಿಶ್ಚಂದ್ರೋಪಾಖ್ಯಾನಕ್ಕೆ ಕನ್ನಡ ವ್ಯಾಖ್ಯಾನ

47. ಅಮರುಶತಕ - ರತಿರಹಸ್ಯ

48. ಕಕ್ಕೋಕಶಾಸ್ತ್ರಟೀಕೆ

49. ಶಂಕರಸಂಹಿತಾ - ಸ್ಕಾಂದಪುರಾಣ, ಸ್ಕಾಂದಪುರಾಣದಲ್ಲಿನ ಶಂಕರಸಂಹಿತೆಗೆ ಕನ್ನಡ ವ್ಯಾಖ್ಯಾನ

50. ಆಧ್ಯಾತ್ಮರಾಮಾಯಣ - ಕನ್ನಡ ವ್ಯಾಖ್ಯಾನ

51. ಪಂಚತಂತ್ರಕಥೆಗಳು

52. ಉಮಾ-ಮಹೇಶ್ವರಸಂವಾದ - ಬ್ರಹ್ಮಾಂಡಪುರಾಣದಲ್ಲಿನ 'ಶಂಕರಸಂಹಿತಾ' ಭಾಗಕ್ಕೆ ಕನ್ನಡ ವ್ಯಾಖ್ಯಾನ

53. ಅಧ್ಯಾತ್ಮರಾಮಾಯಣ - ಕನ್ನಡ ವಿವರಣೆ

54. ಭಕ್ತಿವಿಲಾಸದರ್ಪಣ

55. ಭಾಮಾಕಲಾಪ - 'ಯಕ್ಷಗಾನ' - ದಕ್ಷಿಣಕನ್ನಡದಲ್ಲಿ ಪ್ರಚಲಿತವಿರುವ ನೃತ್ಯರೂಪಕ

56. ವಂಶಾವತರಣವೈಭವಗದ್ಯ

(ಉ) ಕೋಶಗ್ರಂಥಗಳು :

57. ಚಾಮುಂಡಾನಿಘಂಟು

58. ಮಹಾಕೋಶಸುಧಾಕರ

ಮುಮ್ಮಡಿಯವರ ಸಂಸ್ಕೃತ ಸಾಹಿತ್ಯಕೃತಿಗಳೆಲ್ಲವೂ ಉದ್ದೇಶಪೂರ್ವಕವಾಗಿಯೇ ಕನ್ನಡ ಲಿಪಿಯಲ್ಲಿ ಬರೆಯಲ್ಪಟ್ಟಿವೆ. ಕಲ್ಲಚ್ಚು ಮುದ್ರಣಾ ಕೌಶಲ್ಯವು ಆಗಷ್ಟೇ ರೂಢಿಗೆ ಬಂದಿದ್ದು ಮೈಸೂರಿನ ಅರಮನೆಯ ಆವರಣದಲ್ಲಿಯೇ ಇಂತಹ ಒಂದು ಮುದ್ರಣಾಲಯವನ್ನು ಮುಮ್ಮಡಿಯವರು ಸ್ಥಾಪನೆ ಮಾಡಿಸಿದ್ದರು. ಅವರ ಕೃತಿಗಳಲ್ಲಿನ ಹಾಗೂ ಅವರ ಪ್ರೋತ್ಸಾಹದಿಂದ ರಚನೆಗೊಂಡ ಕವಿಗಳ, ವಿದ್ವಾಂಸರ ಕೃತಿಗಳನ್ನೂ ಸಹ ಇದೇ ಕಲ್ಲಚ್ಚು ಮುದ್ರಣಾಲಯದಲ್ಲಿ ಮುದ್ರಿಸಲಾಗುತ್ತಿತ್ತು.

**ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ನೆರವೇರಿಸಿದ ದಾನ-ಧರ್ಮಕಾರ್ಯಗಳು :**

ಪ್ರಜೆಗಳ ಸುಖವೇ ರಾಜನಾದವನ ಸುಖ. ಪ್ರಜೆಗಳ ಹಿತವೇ ರಾಜನ ಹಿತ. ಹೀಗೆಂಬುದಾಗಿ ಕೌಟಿಲ್ಯನು ತನ್ನ ಅರ್ಥಶಾಸ್ತ್ರದ ಪ್ರಥಮ ಅಧಿಕರಣದಲ್ಲಿಯೇ ಪ್ರಭುವಾದವನ ಜೀವನ ಧ್ಯೇಯವನ್ನು ಎತ್ತಿ ಹಿಡಿಯುತ್ತಾ ನಿರೂಪಿಸಿದ್ದಾನೆ -

ಪ್ರಜಾಸುಖೇ ಸುಖಂ ರಾಜ್ಞಃ ಪ್ರಜಾನಾಂ ಚ ಹಿತೇ ಹಿತಮ್ |
ನಾತ್ಮಪ್ರಿಯಂ ಹಿತಂ ರಾಜ್ಞಃ ಪ್ರಜಾನಾಂ ತು ಪ್ರಿಯಂ ಹಿತಮ್ ||

ಬ್ರಿಟಿಷರು ನೀಡುತ್ತಿದ್ದ ವಾರ್ಷಿಕ ಅನುದಾನದಲ್ಲಿ ಅರಮನೆಯ ಖರ್ಚನ್ನು ನಿಭಾಯಿಸಿ ಉಳಿದ ಹಣವನ್ನು ಮುಮ್ಮಡಿಯವರು ದಾನಧರ್ಮಕಾರ್ಯಗಳಲ್ಲೂ, ಸಾಹಿತ್ಯ ಸಂಪತ್ತಿನ ಅಭಿವೃದ್ಧಿಗಾಗಿಯೂ, ಸಂಗೀತ, ಚಿತ್ರಕಲೆಗಳನ್ನು ಪ್ರೋತ್ಸಾಹಿಸಿ ಬೆಳಸುವುದಕ್ಕಾಗಿಯೂ ವಿನಿಯೋಗಿಸುತ್ತಿದ್ದರು. ಮೈಸೂರು ಸಂಸ್ಥಾನದ ಸಾಂಸ್ಕೃತಿಕಕ್ಷೇತ್ರದಲ್ಲಿ ಮಹಾ ಆಂದೋಳನವೇ ಮುಮ್ಮಡಿಯವರ ಕಾಲದಲ್ಲಿ ಘಟಿಸಿದ್ದು ಮುಂದಿನ ಪಂಕ್ತಿಗಳಲ್ಲಿ ಈ ಎಲ್ಲದರ ವಿಸ್ತೃತ ವಿವರಣೆ ನೀಡಲಾಗಿದೆ.

**ಒಂಭತ್ತು ಬಗೆಯ ದಾನ-ಧರ್ಮಗಳು ಲೋಕೋಪಕಾರಗಳು :**

ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ತಮ್ಮ ಬದುಕಿನುದ್ದಕ್ಕೂ ಮಾಡಿದ ದಾನಗಳನ್ನು 'ನವರತ್ನ'ಗಳೆಂದು

ಮೈಸೂರಿನ ಅಂಬಾವಿಲಾಸ ಅರಮನೆಯ ಹಿಂಭಾಗದಲ್ಲಿರುವ ಪ್ರಸನ್ನಕೃಷ್ಣಸ್ವಾಮಿ ದೇವಸ್ಥಾನದ ಶಿಲಾಶಾಸನವೊಂದು ದಾಖಲಿಸಿದೆ. ಕನ್ನಡ ಲಿಪಿಯಲ್ಲಿರುವ ಈ ಶಾಸನದಲ್ಲಿ ಶ್ರೀತತ್ತ್ವನಿಧಿಯ ಪ್ರಥಮ ಸಂಪುಟ ಶಕ್ತಿನಿಧಿಯ ಮಂಗಳಶ್ಲೋಕವನ್ನೇ ಶಾಸನದ ಮಂಗಳಶ್ಲೋಕವಾಗಿ ಉಲ್ಲೇಖಿಸಲಾಗಿದೆ.

1. **ಭೂಷಾರತ್ನ :** ಕೆರೆಯ ನೀರನು ಕೆರೆಗೆ ಚೆಲ್ಲುವಂತೆ ಹರಿಹರರ ಕರುಣೆಯಿಂದ ದೊರೆತ ಸಂಪತ್ತನ್ನು ಮೈಸೂರಿನ ಸುತ್ತಮುತ್ತಲ ಪ್ರಮುಖ ದೇವಸ್ಥಾನಗಳಿಗೆ ನಿತ್ಯ ಹಾಗೂ ವಿಶೇಷ ಸಂದರ್ಭಗಳಲ್ಲಿ ದೇವರನ್ನು ಅಲಂಕರಿಸಲು ಆಭರಣಗಳನ್ನು ಅಲಂಕಾರಸಾಮಗ್ರಿಗಳನ್ನು ಕೊಡುಗೆಯಾಗಿ ನಂಜನಗೂಡಿನ ನಂಜುಂಡೇಶ್ವರ, ಮೇಲುಕೋಟೆಯ ಚೆಲುವನಾರಾಯಣಸ್ವಾಮಿ, ಚಾಮುಂಡಿಬೆಟ್ಟದಲ್ಲಿನ ಶ್ರೀಚಾಮುಂಡೇಶ್ವರೀ ದೇವಿಯರಿಗೆ ರತ್ನಖಚಿತ ಕಿರೀಟ (ಮುಡಿ)ಗಳನ್ನು ಮಾಡಿಸಿ ನೀಡಿದ್ದರು. ಇಂದಿಗೂ ಸಹ ಇವು ಮುಮ್ಮಡಿಯವರ ದಾನವನ್ನು ಸಾರಿ ಹೇಳುತ್ತಿವೆ.

2. **ದೇಶರತ್ನ :** ಹಲವಾರು ಹೊಸ ಹೊಸ ಊರುಗಳನ್ನು ನಿರ್ಮಾಣ ಮಾಡಿದರು. ಆಯಾ ಜನಾಂಗಕ್ಕನುಗುಣವಾಗಿ ಕೇರಿಗಳು ನಿರ್ಮಾಣಗೊಂಡವು. ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್ ತಾವು ಜನಿಸಿದ ಸ್ಥಳ ಹಾಗೂ ತಮ್ಮ ತಾಯಿಯವರ ತವರೂರಾದ 'ಅರಿಕುಠಾರ' ಎಂಬ ಸಣ್ಣ ಹಳ್ಳಿಗೆ ಇತರ ಭಾಗಗಳನ್ನು ಸೇರಿಸಿ 'ಚಾಮರಾಜನಗರ' ಎಂಬುದಾಗಿ ತಮ್ಮ ತಂದೆ ಖಾಸಾ ಚಾಮರಾಜ ಒಡೆಯರ್‌ರವರ ನೆನಪಿನಲ್ಲಿ ಹೆಸರನ್ನು ನೀಡಿ ಅಭಿವೃದ್ಧಿಪಡಿಸಿದರು.

3. **ಸೇವಾರತ್ನ :** ಮೈಸೂರು ಸಂಸ್ಥಾನದ ಪ್ರಮುಖ ಸ್ಥಳಗಳಲ್ಲಿ ದೇವಸ್ಥಾನಗಳನ್ನೂ, ಅನ್ನಸತ್ರಗಳನ್ನೂ ಕಟ್ಟಿಸಿದರು. ಶಿಥಿಲಾವಸ್ಥೆಯಲ್ಲಿದ್ದ ಪುರಾತನ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದರು. ಅವುಗಳಲ್ಲಿ ಮುಖ್ಯವಾದವು ತಲಕಾಡಿನ ವೈದ್ಯನಾಥೇಶ್ವರ, ಮುಡುಕುತೊರೆಯ ಮಲ್ಲಿಕಾರ್ಜುನಸ್ವಾಮಿ, ಬಿಳಿಗಿರಿಬೆಟ್ಟದ ಮೇಲಣ ರಂಗನಾಥಸ್ವಾಮಿ, ಸೋಸಲೆಯ ಹೊನ್ನಾದೇವಿ, ಮೂಗೂರಿನ ತಿಬ್ಬಾದೇವಿ ಇವೆಲ್ಲವೂ ಇಂದು ನೆಚ್ಚಿನ ಯಾತ್ರಾಸ್ಥಳಗಳಾಗಿರುವುದು ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರದ್ಧೆ ಭಕ್ತಿಗಳ ಪರಿಣಾಮ. ದೇವರ ಸೇವೆಗಾಗಿ ಇಂದಿಗೂ ಸಹ ಜನಸಾಮಾನ್ಯರು ಅಧಿಕಸಂಖ್ಯೆಯಲ್ಲಿ ಈ ಸ್ಥಳಗಳಿಗೆ ಹೋಗುತ್ತಾರೆ.

4. **ದಾನರತ್ನ :** ಮೈಸೂರಿನ ಸುತ್ತಮುತ್ತ ವಿದ್ವಾಂಸರುಗಳಿಗೆ ಬಡವರಿಗೆ ವೃತ್ತಿಸೌಕರ್ಯವನ್ನು ಕಲ್ಪಿಸಿ ಅಗ್ರಹಾರಗಳನ್ನು ಸ್ಥಾಪಿಸಿ ಯೋಗ್ಯರಾದ ಪ್ರತಿಭಾನ್ವಿತ ವ್ಯಕ್ತಿಗಳಿಗೆ ಭೂದಾನ, ಗ್ರಾಮದಾನಗಳನ್ನು ಸಮರ್ಪಣೆ ಮಾಡಿದರು. ನಂಜನಗೂಡು ತಾಲ್ಲೂಕಿನ ಕಳಲೆಯಲ್ಲಿ ಕೃಷ್ಣರಾಜೇಂದ್ರಪುರ ಅಗ್ರಹಾರ, ಯಡತೊರೆ ಅಥವಾ ಕೃಷ್ಣರಾಜನಗರದ ಬಳಿ ದೇವೀರಾಂಬಾ ಅಗ್ರಹಾರ, ಮಳವಳ್ಳಿಯ ಬಳಿ ದೇವಲಾಂಬಾ ಅಗ್ರಹಾರ, ಹೊಳೆನರಸೀಪುರದ ಬಳಿ ದೇವರಾಜಾಂಬಾ ಅಗ್ರಹಾರ, ಮೈಸೂರಿನಲ್ಲಿ ಕೆಂಪುನಂಜಾಂಬಾ ಅಗ್ರಹಾರ, ದೇವೀರಮ್ಮಣ್ಣಿ ಅಗ್ರಹಾರ, ದೇವಾಂಬಾ ಅಗ್ರಹಾರ, ಚೆಲುವಾಂಬಾ ಅಗ್ರಹಾರ, ಕೃಷ್ಣವಿಲಾಸ ಅಗ್ರಹಾರ, ರಮಾವಿಲಾಸ ಅಗ್ರಹಾರ, ಸೀತಾವಿಲಾಸ ಅಗ್ರಹಾರ, ಮೊದಲಾದವು ಸ್ಥಾಪನೆಗೊಂಡವು. ಈ ಅಗ್ರಹಾರಗಳಲ್ಲಿ ನಾನಾವಿಧದ ಶಾಸ್ತ್ರಸಂಪನ್ನರಿಗೆ ಅವರ ಯೋಗ್ಯತಾನುಸಾರ ವೃತ್ತಿಗಳನ್ನೂ ಅದಕ್ಕೆ ತಕ್ಕ ವೇತನಾದಿಗಳನ್ನು ನಿಗದಿಪಡಿಸಿ ಅವರುಗಳಿಂದ ರಾಜ್ಯಕ್ಕೆ ನಾನಾವಿಧದ ಸೇವೆಗಳು ಲಭಿಸುವಂತೆ ಏರ್ಪಾಡು ಮಾಡಿದರು.

5. **ಪ್ರತಿಷ್ಠಾರತ್ನ :** ಮೈಸೂರಿನ ಚಾಮುಂಡಿಬೆಟ್ಟದಲ್ಲಿನ ದೇವಸ್ಥಾನಕ್ಕೆ ಗೋಪುರವನ್ನು ಇಷ್ಟದೇವರಾದ ನಂಜನಗೂಡಿನ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನಕ್ಕೆ ಹಾಗೂ ಚಾಮರಾಜನಗರದ ಚಾಮರಾಜಸ್ವಾಮಿ ದೇವಸ್ಥಾನಕ್ಕೆ ಗೋಪುರವನ್ನು, ಮೈಸೂರಿನ ಲಕ್ಷ್ಮೀನಾರಾಯಣ ಸ್ವಾಮಿ ದೇವಸ್ಥಾನಕ್ಕೆ ಗೋಪುರಗಳನ್ನು ಪ್ರತಿಷ್ಠೆ ಮಾಡಿಸಿದರು. ಇವುಗಳ ಜೊತೆಗೆ ತಿರುಮಕೂಡಲಿನಲ್ಲಿ ಚನ್ನಬಸವೇಶ್ವರ, ಮೈಸೂರಿನಲ್ಲಿ ಶ್ವೇತವರಾಹಸ್ವಾಮಿ, ತ್ರಿಣೇಶ್ವರ, ಪ್ರಸನ್ನಕೃಷ್ಣಸ್ವಾಮಿ, ಶ್ರೀರಂಗಪಟ್ಟಣದಲ್ಲಿ ಲಕ್ಷ್ಮೀನರಸಿಂಹ ದೇವರುಗಳ ವಿಗ್ರಹಗಳನ್ನು ಪ್ರತಿಷ್ಠಾಪನೆ ಮಾಡಿಸಿದರು.

6. **ಉಪಕಾರರತ್ನ :** ಪ್ರಜೆಗಳ ಅನುಕೂಲಕ್ಕಾಗಿ ನದಿಗಳ ಮೇಲೆ ಸೇತುವೆ, ಸ್ನಾನಘಟ್ಟಗಳು, ಸೋಪಾನಗಳು, ರಸ್ತೆಗಳಲ್ಲಿ ಅಲ್ಲಲ್ಲಿ ಸಾಲುಮರಗಳು, ಉದ್ಯಾನವನಗಳು, ಅನ್ನಸತ್ರಗಳು, ಧರ್ಮಶಾಲೆ, ಕೆರೆಕೊಳಗಳನ್ನು ನಿರ್ಮಾಣ ಮಾಡಿಸಿದರು. ಕಾವೇರಿ, ಲೋಕಪಾವನಿ, ಅರ್ಕಾವತಿ ನದಿಗಳಿಗೆ ಸೇತುವೆ, ಕೃಷ್ಣರಾಜಕಟ್ಟೆ, ಲಕ್ಷ್ಮಣತೀರ್ಥಕಟ್ಟೆ, ಕಪಿಲಾನದಿ ಕಟ್ಟೆಗಳು, ಪಶ್ಚಿಮವಾಹಿನಿಯಲ್ಲಿ ಸೋಪಾನ ಮತ್ತು ಸಂಧ್ಯಾಮಂಟಪ ಹಾಗೂ ಧರ್ಮಶಾಲೆಗಳು, ಮೈಸೂರಿನಲ್ಲಿ ಕಾರಂಜಿಕೆರೆ, ಬೆಂಗಳೂರಿನ ದೊಡ್ಡಕೆರೆ, ಚಿಕ್ಕಬಳ್ಳಾಪುರದ ಬಳಿ ಪನಸಬಾವಿಯೆಂಬ ಕೆರೆ ಮೊದಲಾದವು ಮುಮ್ಮಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ನಿರ್ಮಾಣಗೊಂಡಂತಹವು.

7. **ಧರ್ಮರತ್ನ :** ತೀರ್ಥಕ್ಷೇತ್ರಗಳಲ್ಲಿ ಯಾತ್ರಿಕರ ಸಲುವಾಗಿ ಉಚಿತವಾಗಿ ಅನ್ನಸಂತರ್ಪಣೆಯ ವ್ಯವಸ್ಥೆಯನ್ನು ಮಾಡಿದರು. ಕಾಶಿ ಮತ್ತು ತಿರುಪತಿಗಳಲ್ಲಿ ಇಂದಿಗೂ ಸಹ ಇದು ಮುಂದುವರೆದುಕೊಂಡು ಬಂದಿದೆ.

8. **ಕೀರ್ತಿರತ್ನ :** ತಮ್ಮ ಯಶಸ್ಸು ಬಹುಕಾಲ ಉಳಿಯಲೆಂಬ ಉದ್ದೇಶದಿಂದ ಕೃಷ್ಣರಾಜವರಹವೆಂಬ ಚಿನ್ನದ ರೂಪಾಯಿ, ಬಹದ್ದೂರೀ ವರಹವೆಂಬ ಚಿನ್ನದ ನಾಣ್ಯವನ್ನು ತುರುಚಿಕಾಸೆಂಬ ಬೆಳ್ಳಿಯ ನಾಣ್ಯವನ್ನು ಟಂಕಿಸಿದರು.

9. **ಸಾರಸ್ವತರತ್ನ :** ಧಾರ್ಮಿಕ ವಿಚಾರಗಳನ್ನು ಕುರಿತಂತೆ ಸ್ವತಃ ಅನೇಕ ಗ್ರಂಥಗಳನ್ನು ರಚಿಸಿ, ಅರಮನೆಯ ಆವರಣದಲ್ಲಿಯ ಮುದ್ರಣಶಾಲೆಯಲ್ಲಿಯೇ ಕಲ್ಲಚ್ಚು ಪ್ರತಿಗಳನ್ನು ಮಾಡಿಸಿ ಆಸಕ್ತರಿಗೆ ವಿತರಣೆ ಮಾಡಿದರು. ಇಂತಹ ಕೃತಿಗಳಲ್ಲಿ ಶ್ರೀತತ್ತ್ವನಿಧಿಯು ಪ್ರಮುಖವಾದುದು. ಮುಮ್ಮಡಿಯವರ 'ವಂಶಾವತರಣವೈಭವ-ಗದ್ಯ'ದಲ್ಲಿ "ಶ್ರೀತತ್ತ್ವನಿಧ್ಯಾದ್ಯನೇಕಗ್ರಂಥನಿರ್ಮಾಣಪ್ರಕಾಶಿತಸಕಲಶಾಸ್ತ್ರಾರ್ಥಪಾಂಡಿತ್ಯವೈಭವಃ" ಎಂಬ ನಿರೂಪಣೆಯಿದೆ.

**ಮೈಸೂರಿನ ಸಾಂಸ್ಕೃತಿಕ ಪರಂಪರೆಗೆ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕೊಡುಗೆ :**

ಇಂದು ಮೈಸೂರು ತನ್ನದೇ ಆದ ಸಾಂಸ್ಕೃತಿಕ ಮಹತ್ತ್ವವನ್ನು ಗಳಿಸಿಕೊಳ್ಳುವಲ್ಲಿ ಮುಮ್ಮಡಿಯವರ ಪಾತ್ರವು ಬಹಳ ದೊಡ್ಡದು. ಸುಮಾರು ಎಪ್ಪತ್ತೈದು ವರ್ಷಗಳಷ್ಟು ದೀರ್ಘಕಾಲದ ಅವರ ಆಳ್ವಿಕೆಯೂ ಜಗತ್ತಿನಲ್ಲಿಯೇ ಒಂದು ಅಪರೂಪದ ಘಟನೆಯೆಂದೇ ಹೇಳಬೇಕಾಗುತ್ತದೆ. ಮೈಸೂರಿನ ಒಡೆಯರ್ ಮನೆತನದಲ್ಲಿಯೇ ದೀರ್ಘಾವಧಿಯ ರಾಜರಾಗಿದ್ದವರು ಇವರೊಬ್ಬರೇ. ಸ್ವತಃ ಸಾಹಿತ್ಯ ಸಂಗೀತಾದಿ ಕಲೆಗಳಲ್ಲಿ ಗಾಢಾಸಕ್ತಿಯನ್ನು ಹೊಂದಿದ್ದ ಮುಮ್ಮಡಿಯವರ ಕಾಲವು ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಮಹತ್ತ್ವದ ಅವಧಿ. ಕನ್ನಡ ಸಾಹಿತ್ಯಲೋಕದಲ್ಲಂತೂ ಇವರ ಅವಧಿಯು

ಅರುಣೋದಯದ ಕಾಲ. ಸಂಸ್ಕೃತ ಸಾಹಿತ್ಯ ಸರಸ್ವತಿಯು ಕನ್ನಡಭಾಷೆಯಲ್ಲಿ ಅವತರಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದಂತಹ ಪರ್ವ ಸಮಯ. ಕನ್ನಡದ ನೆಲವನ್ನು ವೈಭವದಿಂದ ಆಳಿದ ಚಾಲುಕ್ಯ ಚಕ್ರವರ್ತಿಯಾದ ಇಮ್ಮಡಿಯ ಪುಲಿಕೇಶಿ, ರಾಷ್ಟ್ರಕೂಟರ ನೃಪತುಂಗ, ಹೊಯ್ಸಳೇಶ್ವರ ವಿಷ್ಣುವರ್ಧನ, ವಿಜಯನಗರದ ಕೃಷ್ಣದೇವರಾಯ ಇವರುಗಳಂತೆ ರಣರಂಗದಲ್ಲಿ ಪರಾಕ್ರಮವನ್ನು ಮೆರೆದು ಸಮರವೀರರಾಗಿ ಮುಮ್ಮಡಿಯವರು ಶೋಭಿಸದಿದ್ದರೂ ಸಾಂಸ್ಕೃತಿಕವಾಗಿ ಈ ಎಲ್ಲ ಚಕ್ರವರ್ತಿಗಳಿಗೆ ಸಮಾನವಾಗಿ ನಿಲ್ಲಬಲ್ಲರು. ಅಜ್ಜಿ ಲಕ್ಷ್ಮೀಅಮ್ಮಣ್ಣಿಯವರು ಇವರಿಗೆ ಬಾಲ್ಯದಿಂದಲೇ ಇತ್ತ ಸಂಸ್ಕಾರ, ಕೊಡಿಸುತ್ತಾ ಬಂದಂತಹ ಸಂಗೀತ ಸಾಹಿತ್ಯ ಶಿಕ್ಷಣಗಳು ಇವರ ವ್ಯಕ್ತಿತ್ವದಲ್ಲಿನ ಕಾರಯತ್ರೀ-ಭಾವಯತ್ರೀ ಪ್ರತಿಭೆಗಳೆರಡೂ ಪುಟಿದೇಳುವಂತೆ ಮಾಡಿದವು. ತಮ್ಮ ಜೀವನದುದ್ದಕ್ಕೂ ಇವರು ನೆರವೇರಿಸಿದ ಜನಪರವಾದ ಕಾರ್ಯಗಳ ಬಗ್ಗೆಯೂ ಸಾಂಸ್ಕೃತಿಕ ಸಾಧನೆಗಳ ಬಗ್ಗೆಯೂ ಸಂಕ್ಷಿಪ್ತವಾಗಿಯಾದರೂ ಮುಂದೆ ಕೆಲವು ವಿಷಯಗಳನ್ನು ನೀಡಲಾಗಿದೆ.

**ಕನ್ನಡ ಸಾಹಿತ್ಯಲೋಕದಲ್ಲಿ ವಿನೂತನ ಆಯಾಮದ ಸೃಷ್ಟಿ :**

ಸಾಹಿತ್ಯ ವಿಮರ್ಶಕರುಗಳಿಂದ ಮುಮ್ಮಡಿಯವರ ಕಾಲಾವಧಿಯನ್ನು ಹೊಸಗನ್ನಡ ಸಾಹಿತ್ಯದ ಅರುಣೋದಯವೆಂದು ಗುರುತಿಸಲಾಗಿದ್ದು, ಬಹಳಷ್ಟು ಸಂಸ್ಕೃತ ಮೂಲದ ಶ್ರೇಷ್ಠ ಕೃತಿಗಳು ಕನ್ನಡಕ್ಕೆ ಅನುವಾದಗೊಂಡು ಕನ್ನಡ ಸಾಹಿತ್ಯಕ್ಕೆ ಸೇರ್ಪಡೆಯಾದವು. ಭಾರತದ ಮಣ್ಣಿನಲ್ಲಿ ಅತಿ ಪ್ರಾಚೀನ ಕಾಲದಲ್ಲಿಯೇ ಸಂಸ್ಕೃತಭಾಷೆಯಲ್ಲಿ ರಚಿತವಾಗಿರುವ ಶ್ರೇಷ್ಠ ಕೃತಿಗಳಲ್ಲಿ ಹುದುಗಿರುವ ಜ್ಞಾನಸಂಪತ್ತು ಜನಸಾಮಾನ್ಯರೆಲ್ಲರಿಗೂ ಲಭಿಸಲೆಂಬ ಸದುದ್ದೇಶದಿಂದ ಮುಮ್ಮಡಿಯವರು ಸಂಸ್ಕೃತ ವಿದ್ವಾಂಸರಿಗೂ ಕನ್ನಡ ಪಂಡಿತರಿಗೂ ಪ್ರೇರಣೆ ಪೋಷಣೆಗಳನ್ನು ನೀಡಿ ಆಸ್ಥಾನದಲ್ಲಿ ವೇತನಾದಿಗಳನ್ನು ನಿಗದಿಪಡಿಸಿ ನೇಮಿಸಿಕೊಂಡು ಸಂಸ್ಕೃತ ಭಾಷೆಯಲ್ಲಿದ್ದ ಲೋಕೋತ್ತರವೆನಿಸುವಂತಹ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿಸಿದರು. ಕನ್ನಡ ಸಾಹಿತ್ಯದ ಅಂದಿನ ದಿನಗಳ ಉದ್ದಾಮ ಪಂಡಿತರೆನಿಸಿದ್ದ ದೇವಚಂದ್ರ, ವೆಂಕಟರಾಮಶಾಸ್ತ್ರಿ, ಬಸವಪ್ಪಶಾಸ್ತ್ರಿ, ಅಳಿಯ ಲಿಂಗರಾಜ, ಶ್ರೀನಿವಾಸಾಚಾರ್ಯ, ಕೆಂಪುನಾರಾಯಣ, ತಿಮ್ಮಯ್ಯ ಕವಿ, ದೇವಲಾಪುರ ನಂಜುಂಡಕವಿ, ಶಾಂತರಾಜ ಪಂಡಿತ ಮುಂತಾದವರು ಮುಮ್ಮಡಿಯವರ ಆಸ್ಥಾನಪಂಡಿತರಾಗಿದ್ದರು. ಇವರುಗಳ ಪಾಂಡಿತ್ಯದ ನೆರವಿನಿಂದ ಸಂಸ್ಕೃತ ಸಾಹಿತ್ಯ ಸರಸ್ವತಿಯು ಕನ್ನಡಭಾಷೆಯಲ್ಲೂ ಸಹ ಶೋಭಿಸಿದಳು.

ದೇವಚಂದ್ರನು ರಚಿಸಿದ ರಾಜಾವಳೀ ಕಥೆಯೂ ಈತನ ಇತರ ಕೃತಿಗಳಾದ ವಚನಕಾದಂಬರೀ, ಚಂಪೂಕಾವ್ಯವಾದ ರಾಮಕಥಾವತಾರವೂ ಮುಮ್ಮಡಿಯವರ ಪ್ರೋತ್ಸಾಹದಿಂದ ರಚನೆಗೊಂಡಂತಹವು. ಕೆಂಪುನಾರಾಯಣನು ಕನ್ನಡದಲ್ಲಿ ಮುದ್ರಾಮಂಜೂಷವೆಂಬುದನ್ನು ಗದ್ಯಕಥನರೂಪದಲ್ಲಿ ರಚಿಸಿದನು. ಇದು ಸಂಸ್ಕೃತದಲ್ಲಿ ವಿಶಾಖದತ್ತನು ರಚಿಸಿರುವ 'ಮುದ್ರಾರಾಕ್ಷಸ' ನಾಟಕವನ್ನು ಆಧರಿಸಿ ರಚಿತವಾಗಿದೆ. ಮುಮ್ಮಡಿಯವರ ಕಾಲಕ್ಕೆ ಅತ್ಯಂತ ಜನಪ್ರಿಯ ವಿದ್ವಾಂಸರಾಗಿದ್ದವರು ಬಸವಪ್ಪಶಾಸ್ತ್ರಿಗಳು. ಪ್ರಪ್ರಥಮಬಾರಿಗೆ ಸಂಸ್ಕೃತ ಸಾಹಿತ್ಯದ ಪ್ರಸಿದ್ಧ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿರುವ ಇವರು ಕಾಳಿದಾಸನ ಮೂರು ನಾಟಕಗಳನ್ನೂ ಸಹ ಕನ್ನಡಕ್ಕೆ ಭಾಷಾಂತರಿಸಿ 'ಕನ್ನಡ ನಾಟಕ

ಪಿತಾಮಹ'ನೆಂದೂ 'ಅಭಿನವ ಕಾಳಿದಾಸ'ನೆಂದೂ ಸಹ ರಾಜಾಸ್ಥಾನದಲ್ಲಿ ಮುಮ್ಮಡಿಯವರಿಂದ ಬಿರುದುಗಳನ್ನು ಪಡೆದುಕೊಂಡಿದ್ದರು. ಕಾಳಿದಾಸನ ಮಾಲವಿಕಾಗ್ನಿಮಿತ್ರಮ್, ವಿಕ್ರಮೋರ್ವಶೀಯಮ್, ಅಭಿಜ್ಞಾನಶಾಕುಂತಲಮ್‌ಗಳನ್ನು ಅನುವಾದಿಸಿರುವುದರ ಜೊತೆಗೆ ಹರ್ಷಚಕ್ರವರ್ತಿಯ ರತ್ನಾವಳೀ, ಕ್ಷೇಮೇಶ್ವರನ ಚಂಡಕೌಶಿಕ, ಭವಭೂತಿಯ ಉತ್ತರರಾಮಚರಿತೆಗಳು ಕನ್ನಡ ಭಾಷೆಗೆ ಬಸವಪ್ಪಶಾಸ್ತ್ರಿಗಳು ಅನುವಾದಿಸಿರುವರು. ಪ್ರಸಿದ್ಧ ಆಂಗ್ಲಕವಿ ವಿಲಿಯಮ್ ಶೇಕ್ಸ್‌ಪಿಯರನ ಒಥೆಲೋ (Othello) ದುರಂತ ನಾಟಕವು 'ಶೂರಸೇನಚರಿತೆ' ಎಂಬ ಹೆಸರಿನಲ್ಲಿ ಇವರಿಂದಲೇ ಕನ್ನಡಕ್ಕೆ ಅನುವಾದಗೊಂಡಿತು. ಸಂಸ್ಕೃತದ ನೈಷಧೀಯಚರಿತೆಯನ್ನು ಆಧರಿಸಿ 'ದಮಯಂತೀಕಥಾ' ಎಂಬ ಕನ್ನಡಚಂಪೂವನ್ನು, ಸಾವಿತ್ರೀಚರಿತ ಎಂಬ (ಭಾಮಿನೀಷಟ್ಪದಿ) ಪದ್ಯಕಾವ್ಯವನ್ನು ಬಸವಪ್ಪಶಾಸ್ತ್ರಿಗಳು ರಚಿಸಿರುವರು.

ಇನ್ನು ಅಳಿಯ ಲಿಂಗರಾಜನು ಮುಮ್ಮಡಿಯವರ ಇಬ್ಬರು ಪುತ್ರಿಯರನ್ನು ವಿವಾಹವಾಗಿದ್ದು ಮಾವನ ಗಾಢವಾದ ಪ್ರಭಾವಕ್ಕೆ ಒಳಗಾಗಿದ್ದ ಸಾಹಿತ್ಯಪ್ರೇಮಿ. ಈತನು ರಚಿಸಿರುವ 'ನರಪತಿಚರಿತಮ್' ಎಂಬುದು ಅಲಂಕಾರ ಲಕ್ಷಣದ ಗ್ರಂಥ. ಇಲ್ಲಿ ಬರುವ ಲಕ್ಷಣಗಳಿಗೆ ಉದಾಹರಣೆಗಳೆಲ್ಲವೂ ಮುಮ್ಮಡಿಕೃಷ್ಣರಾಜ ಒಡೆಯರ ಸ್ತುತಿಪರವಾಗಿವೆ. ಲಿಂಗರಾಜರು ಕನ್ನಡದಲ್ಲಿ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದು ಅವುಗಳಲ್ಲಿ 'ಪ್ರಭಾವತೀ ಪರಿಣಯ'ವೆಂಬುದು ಮಹಾಕಾವ್ಯವಾಗಿದೆ. ಇವರು ವಿಶೇಷವಾಗಿ ಸಂಗೀತಪ್ರಿಯರೂ, ಯಕ್ಷಗಾನದಲ್ಲಿ ವಿಶೇಷ ಅಭಿರುಚಿಯುಳ್ಳವರೂ ಆಗಿದ್ದರು. ರಾಮಾಯಣ, ಮಹಾಭಾರತ, ಭಾಗವತದಿಂದ ಆಯ್ದಂತಹ ಸುಮಾರು ಮೂವತ್ತಾರು ಯಕ್ಷಗಾನ ಪ್ರಸಂಗಗಳನ್ನು ಲಿಂಗರಾಜರು ರಚಿಸಿದ್ದು ಮನ್ಮಥಮೋಡಿ, ಮದಾಲಸಾಪರಿಣಯ, ನಲಕೂಬರವಿಲಾಸ, ಚಂದ್ರಾವಳೀಕಥೆ ಇವುಗಳೂ ಸಹ ಸೇರಿವೆ.

ಸಂಸ್ಕೃತ ಮೂಲಗಳನ್ನು ಆಧರಿಸಿ ಸ್ವತಃ ಮುಮ್ಮಡಿಯವರೇ ರಚಿಸಿದ ಹಲವಾರು ಕನ್ನಡ ಕೃತಿಗಳ ಬಗ್ಗೆ ಈ ಹಿಂದೆಯೇ ಪ್ರಸ್ತಾಪಿಸಲಾಗಿದ್ದು, ಪ್ರಾಚೀನಕಾಲದ ದೇವಭಾಷೆ ಸಂಸ್ಕೃತದಲ್ಲಿನ ಜ್ಞಾನಸಂಪತ್ತು ಜನಸಾಮಾನ್ಯರಿಗೆ ದೇಶಭಾಷೆ ಕನ್ನಡದಲ್ಲಿ ಲಭಿಸಲೆಂಬ ಘನವಾದ ಉದ್ದೇಶ ಮುಮ್ಮಡಿಯವರದಾಗಿತ್ತು. ಮುಮ್ಮಡಿಯವರ ಕಾಲವು ಸಾಹಿತ್ಯ ಸಂಸ್ಕೃತಿಗಳ ದೃಷ್ಟಿಯಿಂದ ಭೋಜರಾಜನ ಆಳ್ವಿಕೆಯ ಕಾಲವನ್ನು ಜನರ ನೆನಪಿಗೆ ತರುವಂತಾಗಿ ಕನ್ನಡದ 'ಭೋಜ'ನೆಂಬ ಹೆಗ್ಗಳಿಕೆಗೆ ಇವರು ಪಾತ್ರರಾಗಿದ್ದರು. ಇಂದಿಗೂ ಮೈಸೂರು ಸಾಂಸ್ಕೃತಿಕ ನಗರಿಯಾಗಿಯೇ ಉಳಿದಿರಲು ಮುಮ್ಮಡಿಯವರು ಪ್ರಧಾನ ಕಾರಣರು.

**ಸಂಗೀತಶಾಸ್ತ್ರಕ್ಕೆ ಪ್ರೋತ್ಸಾಹ :**

ಮುಮ್ಮಡಿಯವರು ತಮ್ಮ ಐದನೆಯ ವಯಸ್ಸಿನಿಂದಲೇ ತಂಜಾವೂರಿನಿಂದಾಗಮಿಸಿದ್ದ ವೀಣಾ ವೆಂಕಟ ಸುಬ್ಬಯ್ಯನವರಿಂದ ಶಾಸ್ತ್ರೀಯ ಸಂಗೀತವನ್ನು ಕಲಿತು ಉತ್ತಮ ಮಟ್ಟದ ವೀಣಾವಾದಕರಾಗಿದ್ದವರು. ಇವರಲ್ಲಿದ್ದ ಸಂಗೀತಪ್ರೇಮ ನಾಡಿನ ಮೂಲೆಗಳಿಂದ ಪ್ರಸಿದ್ಧ ಸಂಗೀತವಿದ್ವಾಂಸರನ್ನು ಮೈಸೂರಿನತ್ತ ಆಕರ್ಷಿಸಿತ್ತು. ಇವರೆಲ್ಲರಿಗೂ ರಾಜಾಶ್ರಯ ನೀಡಿ ಅವರಲ್ಲಿದ್ದ ಪ್ರತಿಭೆಗೆ ವಿಶೇಷ ಪ್ರೋತ್ಸಾಹ ನೀಡಿ ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದಂತೆ ವಿನೂತನ

ರಚನೆಗಳಿಗೂ, ಗ್ರಂಥಗಳ ಪ್ರಕಟಣೆಗೂ ಒತ್ತು ನೀಡಿ ಸಂಗೀತಕಲೆಯನ್ನು ಅಭಿವೃದ್ಧಿ ಪಡಿಸಿದವರು ಮುಮ್ಮಡಿಯವರು. ಸ್ವತಃ ವೀಣಾವಾದನ ಚತುರರಾಗಿದ್ದ ಮುಮ್ಮಡಿಯವರ 'ಸ್ವರಚೂಡಾಮಣಿ' ಎಂಬ ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದ ಸಚಿತ್ರ ಕೃತಿಯಲ್ಲಿ ರಾಗಗಳಿಗೆ ರೂಪಾಕೃತಿಗಳನ್ನು ನೀಡಿ ವರ್ಣಚಿತ್ರಗಳನ್ನು ಬರೆಸಿದ್ದಾರೆ. ಆಸ್ಥಾನ ಸಂಗೀತ ವಿದ್ವಾಂಸರುಗಳಾದ ವೀಣೆ ವೆಂಕಟಸುಬ್ಬಯ್ಯ, ವೀಣೆ ಅಣ್ಣಯ್ಯ, ಲಾಲಗುಡಿ ರಾಮಯ್ಯರ್, ಸಂಗೀತ ಜೀಯರ್, ವೀಣೆ ಅಪ್ಪಯ್ಯ, ವೀಣೆ ಸಾಂಬಯ್ಯ, ಘಟಂ ವಾದ್ಯದ ರಂಗರಾಯ, ಸಂಗೀತಗಾರ ಮಂಗಾಪತಯ್ಯ ಇವರುಗಳ ಸಂಗೀತ ಕಛೇರಿಗಳು ಮೈಸೂರಿನಲ್ಲಿ ವಿಶೇಷವಾದ ವಾತಾವರಣವನ್ನೇ ಅಂದಿನ ದಿನಗಳಲ್ಲಿ ಸೃಷ್ಟಿಸಿದ್ದವು. ಇವರುಗಳ ವ್ಯಕ್ತಿಗತ ಭಾವಚಿತ್ರಗಳು (ವರ್ಣಚಿತ್ರಗಳು) ಇಂದಿಗೂ ಸಹ ಜಗನ್ಮೋಹನ ಬಂಗಲೆಯಲ್ಲಿ ಸಂರಕ್ಷಿತವಾಗಿದ್ದು ಅಂದಿನ ವೈಭವವನ್ನು ಸಾರಿ ಹೇಳುತ್ತಿವೆ.

**ಕರಕುಶಲ ವಿದ್ಯೆಗಳ ಅಭಿವೃದ್ಧಿ :**

ಮುಮ್ಮಡಿಯವರು ಗ್ರಾಮಾಂತರ ಪ್ರದೇಶಗಳಲ್ಲಿನ ಕರಕುಶಲ ವಿದ್ಯೆಯಲ್ಲಿ ಪಳಗಿದವರನ್ನು ಗುರುತಿಸಿ ಪ್ರೋತ್ಸಾಹಿಸಿ ಅವರುಗಳಿಂದ ಕಲಾತ್ಮಕ ವಸ್ತುಗಳ ನಿರ್ಮಾಣಕ್ಕೆ ಬೇಕಾದ ಸಾಮಗ್ರಿಗಳನ್ನು ಸರಕಾರದ ವತಿಯಿಂದ ಒದಗಿಸಿ ಗುಡಿ ಕೈಗಾರಿಕೆಗಳಿಗೆ ಮೈಸೂರು ರಾಜ್ಯದಲ್ಲಿ ಭದ್ರ ಬುನಾದಿ ಹಾಕಿಕೊಟ್ಟರು. ಗಂಧ, ಬೀಟೆ ಮರಗಳಿಂದ ವಿನ್ಯಾಸಗೊಳಿಸ-ಬಹುದಾದ ಸುಂದರ ಕಲಾಕೃತಿಗಳು, ವಿವಿಧ ಬಣ್ಣದ ಮರದ ಕ್ರೀಡಾ ಸಾಮಗ್ರಿಗಳು, ಕೇರಂ, ಚದುರಂಗವೇ ಮೊದಲಾದ ಆಟದ ಹಲಗೆಗಳು, ಪಗಡೆಯ ದಾಳಗಳು, ಆಟದ ಕಾಯಿಗಳು ಇವುಗಳನ್ನು ಸಿದ್ಧಪಡಿಸುವ ಗುಡಿ ಕೈಗಾರಿಕೆಗಳು ಹಾಗೂ ಸಿದ್ಧಗೊಂಡ ವಸ್ತುಗಳ ವ್ಯಾಪಾರ ವಹಿವಾಟುಗಳಿಗೆ ಮೈಸೂರು ಕೇಂದ್ರವಾಗಿ ಪರಿಣಮಿಸಿ ಮುಂದೆ ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲಕ್ಕೆ ವಿಶೇಷವಾಗಿ ಮತ್ತೂ ಅಭಿವೃದ್ಧಿಗೊಂಡವು. ತತ್ರಾಪಿ ಶ್ರೀಗಂಧದ ಕಲಾತ್ಮಕ ವಸ್ತುಗಳಿಗೆ, ಪ್ರಸಿದ್ಧವಾದ ರೇಶಿಮೆ (ಮೈಸೂರು ಸಿಲ್ಕ್) ಉದ್ಯಮಕ್ಕೆ ಮೈಸೂರು ಇಂದಿಗೂ ಸಹ ಜಗತ್ಪ್ರಸಿದ್ಧವಾಗಿಯೇ ಉಳಿದುಕೊಂಡು ಬಂದಿದೆ. 'ಗಂಜೀಫಾ' ಆಟವು ಮೊಗಲರ ಕಾಲದಲ್ಲಿ ಬಹುಜನಪ್ರಿಯವಾಗಿದ್ದ ಕಾರ್ಡುಗಳ ಆಟ. ಇದನ್ನು ಅಭಿವೃದ್ಧಿಪಡಿಸಿ ನಾನಾಬಗೆಯ ಶ್ರೀಮಂತರಿಗೆ ಮತ್ತು ಜನಸಾಮಾನ್ಯರಿಗಾಗಿಯೇ ವಿವಿಧ ನಮೂನೆಯ ಗಂಜೀಫಾ ಕಾರ್ಡುಗಳನ್ನು ಚಿತ್ರಕಲಾವಿದರ ನೆರವಿನಿಂದ ಸಿದ್ಧಪಡಿಸಿ ಜನಪ್ರಿಯ ಆಟವನ್ನಾಗಿ ಮಾಡಿದವರು ಮುಮ್ಮಡಿಯವರು.

**ಚಿತ್ರಕಲೆಯ ಅಭಿವೃದ್ಧಿ :**

ಸಾಹಿತ್ಯ ಸಂಗೀತಗಳಂತೆಯೇ ಚಿತ್ರಕಲೆಗೂ ಕೂಡ ವಿಶೇಷವಾದ ಪ್ರೋತ್ಸಾಹವನ್ನು ಮುಮ್ಮಡಿಯವರು ನೀಡಿರುವುದಕ್ಕೆ ಇಂದಿಗೂ ಸಹ ಮೈಸೂರಿಗೆ ಆಗಮಿಸುವ ಪ್ರವಾಸಿಗರನ್ನು ಆಕರ್ಷಿಸುತ್ತಿರುವ ಜಗನ್ಮೋಹನ ಪ್ಯಾಲೇಸ್, ಬೆಂಗಳೂರಿನಲ್ಲಿ ಮುಮ್ಮಡಿಯವರಿಂದಲೇ ಸ್ಥಾಪನೆಗೊಂಡು ಇಂದಿಗೂ ಗಮನ ಸೆಳೆಯುತ್ತಿರುವ ವೆಂಕಟಪ್ಪ ಆರ್ಟ್ ಗ್ಯಾಲರಿಗಳೇ ಸಾಕ್ಷಿಗಳಾಗಿವೆ. ಇತಿಹಾಸ ಸಂಶೋಧಕರಿಗೂ ಸಹ ಇವುಗಳಿಂದ ಅಗತ್ಯ ಮಾಹಿತಿ ಲಭಿಸುತ್ತಿದೆ.

ಮುಮ್ಮಡಿಯವರು ತಾವೇ ರಚಿಸಿದ ಕೃತಿಗಳಿಗೂ ತಮ್ಮ ಅವಧಿಯಲ್ಲಿ ರಚನೆಯಾದ ಆಸ್ಥಾನ ವಿದ್ವಾಂಸರುಗಳ, ಕವಿಗಳ ಕೃತಿಗಳಿಗೂ ಸಹ ಬರವಣಿಗೆಗಳಿಗೆ ಅನ್ವಯಿಸುವಂತೆ ರೇಖಾಚಿತ್ರಗಳನ್ನೂ ವರ್ಣಚಿತ್ರಗಳನ್ನೂ ಬರೆಸಿದರು. ಆಸ್ಥಾನದಲ್ಲಿ ಅಂದಿನ ಪ್ರಸಿದ್ಧ ಸೂಕ್ಷ್ಮ ಚಿತ್ರಕಾರರುಗಳಿಗೆ ಆಶ್ರಯವನ್ನು ನೀಡಿ ಪ್ರಾಚೀನ ಸಾಂಪ್ರದಾಯಿಕ ಶೈಲಿ ಹಾಗೂ ಮೊಗಲರ ಕಾಲದಲ್ಲಿ ಪ್ರಚಲಿತವಾಗಿದ್ದ ಚಿತ್ರಶೈಲಿಗಳೆರಡೂ ಬೆರೆತ ವಿನೂತನ ಮೈಸೂರು ಶೈಲಿಯ ವರ್ಣಚಿತ್ರಗಳ ಸೃಷ್ಟಿಗೆ ಕಾರಣರಾದರು. 1861ರಲ್ಲಿ ಮೈಸೂರಿನಲ್ಲಿ ಸ್ಥಾಪನೆಯಾದ 'ಜಗನ್ಮೋಹನ ಚಿತ್ರಕಲಾ ಅರಮನೆ'ಯಲ್ಲಿ ಮೈಸೂರು ರಾಜಮನೆತನದ ಸಂತಾನವೃಕ್ಷ, ರಾಜಕುಟುಂಬಸ್ಥರ, ಬಂಧುಗಳ ವರ್ಣಚಿತ್ರಗಳನ್ನು ಸಂರಕ್ಷಿಸಿ ಇಡಲಾಗಿದೆ. ಮುಮ್ಮಡಿಯವರು ಆಸ್ಥಾನದ ಚಿತ್ರಕಾರರಿಂದ ಬರೆಸಿದ ವ್ಯಕ್ತಿಚಿತ್ರಗಳೇ ಒಂದು ಸಾವಿರಕ್ಕೂ ಮೀರಿದ ಸಂಖ್ಯೆಯಲ್ಲಿದ್ದು ರಾಜಕೀಯಕ್ಕೆ ಸಂಬಂಧಪಟ್ಟ ಉನ್ನತ ಅಧಿಕಾರಿಗಳು, ಸಂಗೀತಗಾರರು, ಪಂಡಿತರುಗಳು, ದರಬಾರು ಭಕ್ಷಿಗಳು, ಚಿತ್ರಕಾರರು, ಜಟ್ಟಿಗಳೂ ಸಹ ಭಾವಚಿತ್ರಗಳ ಸಂಗ್ರಹದಲ್ಲಿದ್ದಾರೆ. ಮುಮ್ಮಡಿಯವರಿಗೆ ಬಾಲ್ಯದಲ್ಲಿಯೇ ಸಂಗೀತಶಿಕ್ಷಣವನ್ನು ಆರಂಭಿಸಿದ ವೀಣೆ ವೆಂಕಟಸುಬ್ಬಯ್ಯನವರ ವರ್ಣಚಿತ್ರ, ಇತರ ಸಂಗೀತವಿದ್ವಾಂಸರಾದ ಲಾಲಗುಡಿ ರಾಮಯ್ಯರ್, ಸಂಗೀತ ಜೀಯರ್, ವೀಣೆ ಅಣ್ಣಯ್ಯ, ವೀಣೆ ಅನಂತಸುಬ್ಬಯ್ಯ, ವೀಣೆ ಅಪ್ಪಯ್ಯ, ಸಂಗೀತಗಾರ ಮಂಗಾಪತಯ್ಯ, ಘಟದ ರಂಗರಾಯ ಮೊದಲಾದವರ ವರ್ಣಚಿತ್ರಗಳಿವೆ. ಚಿತ್ರಗಾರ ಮೇಸ್ತ್ರಿ ಲಕ್ಷ್ಮಯ್ಯ ಹಾಗೂ ಇತರ ಪ್ರಸಿದ್ಧ ಚಿತ್ರಕಾರರುಗಳಾದ ನಾರಣಪ್ಪ, ವೆಂಕಟಪ್ಪ ಚಿನ್ನಕೃಷ್ಣ ಮುಂತಾದವರ ಚಿತ್ರಗಳೂ, ಹರಿಕಥಾಪರಿಣತರುಗಳಾದ ಸುರಪುರದ ಶೇಷದಾಸರು, ಭೀಮದಾಸರು, ಲಕ್ಷ್ಮಿಪಂಡಿತರು ಹಾಗೂ ಅವರ ಮಗ ಸೂರಿಪಂಡಿತರು, ಜಟ್ಟಿಗಳಾದ ಉಸ್ತಾದ್ ವೆಂಕಾಜಟ್ಟಿ, ತುಕಾಡೀದಾರ ರಾಮಾಜಟ್ಟಿ, ಅಪ್ಪೂ ಜಟ್ಟಿ, ಖಡ್ಗವೀರ ಲಕ್ಷ್ಮಣನಾಯಕ, ಸೈನ್ಯದ ತುಕಡಿಗಳ ಮುಖ್ಯಸ್ಥರಾದ ಜನರಲ್ ಶಂಕರದಾಸ್, ದಫೇದಾರ್ ವೆಂಕಟರಮಣಯ್ಯ, ಜಮಾದಾರರಾದ ಮುದ್ದುಕೃಷ್ಣಸಿಂಗ್ ಹೀಗೆ ಸಾವಿರಕ್ಕೂ ಮೀರಿದ ವ್ಯಕ್ತಿಚಿತ್ರಗಳು ಇಂದಿಗೂ ಸಹ ಜಗನ್ಮೋಹನ ಪ್ಯಾಲೇಸಿನಲ್ಲಿ ಸಂರಕ್ಷಿಸಲ್ಪಡುತ್ತಿವೆ. ಇಲ್ಲಿ ಮುಕ್ತಪ್ರವೇಶವಿದೆ.

1865ರಲ್ಲಿ ಮುಮ್ಮಡಿಯವರಿಂದ ಬೆಂಗಳೂರಿನಲ್ಲಿ ಸ್ಥಾಪನೆಗೊಂಡ 'ವೆಂಕಟಪ್ಪ ಆರ್ಟ್ ಗ್ಯಾಲರಿ'ಯು ಇತಿಹಾಸವನ್ನು ಅಧ್ಯಯನ ಮಾಡುವವರಿಗೆ ಇಂದಿಗೂ ಸಹ ತನ್ನತ್ತ ಸೆಳೆಯುತ್ತಿರುವ ಪ್ರಸಿದ್ಧ ಚಿತ್ರಕಲಾ ಸಂಗ್ರಹಾಲಯವೆನಿಸಿದೆ. ಸುಮಾರು ಆರು ನೂರಕ್ಕೂ ಮೀರಿದ ಚಿತ್ರಕಲಾ ಕೃತಿಗಳು ಇಲ್ಲಿವೆ. ಇಲ್ಲಿಯೂ ಸಹ ಆಸಕ್ತರಿಗೆ ಮುಕ್ತ ಪ್ರವೇಶವಿದೆ.

**ರಾಜಧಾನಿಯ ಸ್ಥಳಾಂತರ :**

ಆಡಳಿತಾತ್ಮಕವಾಗಿ ಮುಮ್ಮಡಿಯವರು ಕೈಗೊಂಡ ಒಂದು ಮಹತ್ತ್ವದ ನಿರ್ಧಾರವೆಂದರೆ ಮೈಸೂರು ಸಂಸ್ಥಾನದ ರಾಜಧಾನಿಯನ್ನು ಶ್ರೀರಂಗಪಟ್ಟಣದಿಂದ ಮೈಸೂರು ನಗರಕ್ಕೆ ಬದಲಾಯಿಸಿದುದು. ಇವರ ಆಳ್ವಿಕೆಗೂ ಮೊದಲು ಮೈಸೂರು ಸಂಸ್ಥಾನವನ್ನು ಆಕ್ರಮಿಸಿಕೊಂಡಿದ್ದ ಹೈದರಾಲಿಗೂ ಆತನ ಪುತ್ರ ಟೀಪುಸುಲ್ತಾನನಿಗೂ ಶ್ರೀರಂಗಪಟ್ಟಣವೇ ರಾಜಧಾನಿಯಾಗಿದ್ದು, ಅಂದಿನ ದಿನಗಳಲ್ಲಿ ಮೈಸೂರು ಸಂಪೂರ್ಣವಾಗಿ ಉಪೇಕ್ಷೆಗೆ ಗುರಿಯಾಗಿದ್ದ ಹಾಳೂರಾಗಿ ಉಳಿದು

ಹೋಗಿತ್ತು. ಮುಮ್ಮಡಿಯವರು ತಮ್ಮ ಆಳ್ವಿಕೆಯ ಅವಧಿಯಲ್ಲಿ ಮೈಸೂರು ರಾಜ್ಯಕ್ಕೆ ರಾಜಧಾನಿಯನ್ನು, ಪ್ರಮುಖ ಆಡಳಿತ ಕಛೇರಿಗಳನ್ನು ವರ್ಗಾಯಿಸಿ ಮೈಸೂರಿನ ಅಭಿವೃದ್ಧಿಗೆ, ಸಾಂಸ್ಕೃತಿಕ ನಗರಿಯಾಗಿ ಮೈಸೂರು ಬದಲಾಗಲು ಅಡಿಪಾಯ ಹಾಕಿದರು. ಮುಂದೆ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಕಾಲಕ್ಕೆ ಮೈಸೂರು ಮಾದರಿ ಮೈಸೂರಾಗಿ, ನಾಲ್ವಡಿ ಕೃಷ್ಣರಾಜ ಒಡೆಯರ್‌ರವರು ರಾಜರ್ಷಿಯೆಂಬ ಜಗತ್ಪ್ರಸಿದ್ಧಿಯನ್ನು ಪಡೆಯಲು ಅನುವು ದೊರೆತಂತಾಯಿತು.

**ಜನಸಾಮಾನ್ಯರಿಗೆ ವಿದ್ಯಾಭ್ಯಾಸ :**

ಕನ್ನಡ, ಸಂಸ್ಕೃತ ಭಾಷೆಗಳು ಮುಮ್ಮಡಿಯವರಿಗೆ ಪ್ರಿಯವಾಗಿದ್ದರೂ ಇಂಗ್ಲಿಷ್ ಭಾಷೆಯ ಮಹತ್ತ್ವವನ್ನು ಅರಿತಿದ್ದ ಅವರು ಪ್ರಪ್ರಥಮವಾಗಿ 'ಮಹಾರಾಜಾ ಇಂಗ್ಲಿಷ್ ಸ್ಕೂಲ್' ಎಂಬ ಆಂಗ್ಲಶಾಲೆಯೊಂದನ್ನು 1833ರಲ್ಲಿ ಮೈಸೂರು ನಗರದಲ್ಲಿ ಪ್ರಾರಂಭಿಸಿದರು. ಪ್ರಥಮ ಹಂತದಲ್ಲಿ ಇದು 'ರಾಜಾ ಫ್ರೀ ಸ್ಕೂಲ್' ಎಂಬ ಪ್ರಾಥಮಿಕ ಶಾಲೆ. ಇದೇ ಕಿರುತೊರೆಯು ಕಾಲಕ್ರಮೇಣ ಮಹಾರಾಜಾ ಇಂಗ್ಲಿಷ್ ಸ್ಕೂಲ್ ಆಗಿ ಬದಲಾವಣೆ ಹೊಂದಿ, ಇಂಟರ್‌ಮೀಡಿಯಟ್ ಕಾಲೇಜ್ ಆಫ್ ಆರ್ಟ್ ಆಗಿ ಮುಮ್ಮಡಿಯವರ ಮೊಮ್ಮಗ ಚಾಮರಾಜ ಒಡೆಯರ್ ಸುಪುತ್ರರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲಕ್ಕೆ 'ಮೈಸೂರು ವಿಶ್ವವಿದ್ಯಾಲಯ'ವೆಂಬ ಇಂದಿನ ಮಹಾನದಿಯಾಗಿ ಜ್ಞಾನಗಂಗೆಯಾಗಿ ಹರಿಯುತ್ತಿದೆ. ಇದಕ್ಕೆ ಮೊದಲು ಮೈಸೂರು ರಾಜ್ಯದಲ್ಲಿ ಸ್ಥಾಪನೆಯಾಗಿದ್ದ ಬೆರಳೆಣಿಕೆಯಷ್ಟು ಕಾಲೇಜುಗಳು ಮದರಾಸು ವಿಶ್ವವಿದ್ಯಾನಿಲಯದ ಹಿಡಿತದಲ್ಲಿದ್ದವು. ಶಾರದಾವಿಲಾಸ ಆಂಗ್ಲ-ಸಂಸ್ಕೃತ ಪಾಠಶಾಲೆಯನ್ನು ಮೈಸೂರಿನ ಲ್ಯಾನ್ಸ್‌ಡೌನ್ ಕಟ್ಟಡದಲ್ಲಿ 1861ರಲ್ಲಿ ಮುಮ್ಮಡಿಯವರು ಪ್ರಾರಂಭಿಸಿ, ಭಕ್ಷಿ ನರಸಪ್ಪ ಎಂಬುವವರನ್ನು ಮೇಲ್ವಿಚಾರಕರನ್ನಾಗಿ ಮಾಡಿ ಸರ್ಕಾರದ ವತಿಯಿಂದ ನಡೆಸಲಾರಂಭಿಸಿದರು. ಮುಂದೆ ಇದೇ ಶಾಲೆಯು ಮೈಸೂರಿನ ಕೃಷ್ಣಮೂರ್ತಿಪುರಂ ಬಡಾವಣೆಗೆ ಸ್ಥಳಾಂತರಗೊಂಡು 'ಶಾರದಾವಿಲಾಸ ಕಾಲೇಜು' ಆಗಿ ಅಭಿವೃದ್ಧಿಗೊಂಡು, ಇಂದಿಗೂ ಸಹ ಕಾನೂನು ಹಾಗೂ ವಿಜ್ಞಾನ, ಕಲಾನಿಕಾಯಗಳೊಡನೆ ಪ್ರಸಿದ್ಧ ವಿದ್ಯಾಸಂಸ್ಥೆಯಾಗಿದೆ. ಹಾಗೆಯೇ ಶ್ರೀಮನ್ಮಹಾರಾಜ ಸಂಸ್ಕೃತ ಪಾಠಶಾಲೆಯೂ ಸಹ ಮುಮ್ಮಡಿಯವರಿಂದ ಪ್ರಾರಂಭಗೊಂಡು ನಂತರ ಅವರ ಉತ್ತರಾಧಿಕಾರಿಯಾಗಿ ಮೈಸೂರು ಸಿಂಹಾಸನವನ್ನೇರಿದ ಹತ್ತನೆಯ ಚಾಮರಾಜ ಒಡೆಯರ್‌ರವರಿಂದ ಅಭಿವೃದ್ಧಿಗೊಂಡಿತು.

**ಮುದ್ರಣಯಂತ್ರದ ಸ್ಥಾಪನೆ :**

ವಿದ್ಯಾಭಿಮಾನಿಯೂ, ಜ್ಞಾನಪ್ರಸಾರಾಸಕ್ತರೂ ಆಗಿದ್ದ ಮುಮ್ಮಡಿಯವರು ಮುದ್ರಣ ಯಂತ್ರವೊಂದನ್ನು ಪ್ರಪ್ರಥಮವಾಗಿ ತಮ್ಮ ಅರಮನೆಯ ಆವರಣದಲ್ಲಿಯೇ ಸ್ಥಾಪಿಸಿ ಹಲವಾರು ಗ್ರಂಥಗಳನ್ನು ಮುದ್ರಿಸಿ ಪ್ರಕಟಿಸಿದರು. ಅಲ್ಲದೆ ಹಲವಾರು ಧಾರ್ಮಿಕ ಗ್ರಂಥಗಳನ್ನು ಮುದ್ರಿಸಿ ಪ್ರಕಟಿಸಿ ಜಿಜ್ಞಾಸುಗಳಿಗೆ ದಾನವಾಗಿ ನೀಡಿದರು. ವಿದೇಶೀಯರಿಗಿಂತಲೂ ಮೊದಲೇ ಬಣ್ಣದ ಮುದ್ರಣವನ್ನು ಇಲ್ಲಿ ಪ್ರಾರಂಭಿಸಿದುದು ಕರ್ಣಾಟಕಕ್ಕೆ ಹೆಮ್ಮೆಯ ವಿಚಾರ. ಶ್ರೀಮನ್ಮಹಾರಾಜರವರ ವಂಶಾವಳಿಯ ಎರಡನೆಯ ಭಾಗದಲ್ಲಿ ಒಂದೆಡೆ "ಸನ್ 1841-42ನೇ ಇಸವಿಯಲ್ಲಿ ಸರ್ಕಾರಿ ಕೆಲಸಗಳಿಗೆ ಸೌಕರ್ಯವುಂಟಾಗುವಂತೆ ಬೆಂಗಳೂರಿನಲ್ಲಿ ಒಂದು ಅಚ್ಚು ಕಾರ್ಖಾನೆಯು ಸ್ಥಾಪಿತವಾಯಿತು." ಎಂದೂ,

ಮತ್ತೊಂದೆಡೆ ಮಹಾರಾಜರು ಬರೆದಿರುವ ಗ್ರಂಥಗಳನ್ನು ಭಗವದ್ಗೀತೆ ಮೊದಲಾದ ಅನೇಕ ಪ್ರಾಚೀನ ಗ್ರಂಥಗಳನ್ನೂ ಆಯಾ ದೇವತಾಚಿತ್ರಗಳಿಂದ ಒಡಗೂಡಿರುವಂತೆ 'ಅಂಬಾವಿಲಾಸ ಮುದ್ರಾಕ್ಷರಶಾಲಾ' ಶಿಲಾಯಂತ್ರದಲ್ಲಿ ಅಚ್ಚು ಹಾಕಿಸಿ ಸಂಮುಖದ ವಿದ್ವಾಂಸರು ದೇಶಾಂತರಗಳಲ್ಲಿರುವ ವಿದ್ವಾಂಸರು ಅಧಿಕಾರಸ್ಥರು ಮುಂತಾದವರನೇಕರಿಗೆ ಉಚಿತವಾಗಿ ಕೊಟ್ಟು ಸಂತೋಷಪಡಿಸಿದರು" ಎಂಬುದಾಗಿ ಬರೆಯಲಾಗಿದೆ. 'ನವರತ್ನಶಾಸನ'ದಲ್ಲಿನ ಸಾರಸ್ವತರತ್ನದಲ್ಲಿ ಈ ಬಗ್ಗೆ ಸ್ಪಷ್ಟಪಡಿಸಿರುವುದನ್ನು ಗಮನಿಸಬಹುದಾಗಿದೆ. ಮುಮ್ಮಡಿಯವರು ರಚಿಸಿದ ದೇವತಾಸ್ತೋತ್ರಗಳು, ಚಾಮುಂಡಾ ಲಘುನಿಘಂಟು, ಗ್ರಹಣದರ್ಪಣ, ಸಂಖ್ಯಾರತ್ನಕೋಶ ಹಾಗೂ ಇದೇ ಕೃತಿಯ ಮರಾಠಿ ಅವತರಣಿಕೆ, ಚತುರಂಗ ಸಾರಸರ್ವಸ್ವ, ರಾಮಕಥಾಪುಷ್ಪಮಂಜರಿ, ಕೃಷ್ಣಕಥಾಪುಷ್ಪಮಂಜರಿ, ಸೌಗಂಧಿಕಾಪರಿಣಯ (ಗದ್ಯ) ಇವುಗಳೆಲ್ಲವೂ ಅಲ್ಲಲ್ಲಿ ನಡುವೆ ರೇಖಾಚಿತ್ರಗಳ ಸಹಿತ, ಅಲ್ಲಲ್ಲಿ ವರ್ಣಚಿತ್ರಗಳ ಸಹಿತ, ಅಂಬಾವಿಲಾಸ ಅರಮನೆಯ ಆವರಣದಲ್ಲಿ ಸ್ಥಾಪಿತವಾಗಿದ್ದ ಅಚ್ಚುಕೂಟದಲ್ಲಿ ಮುದ್ರಣಗೊಂಡಿರುವುದು ಹಲವು ದಾಖಲೆಗಳ ಆಧಾರದಿಂದ ದೃಢಪಟ್ಟಿದೆ.

**ಯಕ್ಷಗಾನ ಕಲಾವಿದರಿಗೆ ಪ್ರೋತ್ಸಾಹ :**

ಸಂಗೀತರೂಪಕವೆನಿಸಬಹುದಾದ ಅಥವಾ ನೃತ್ಯ ನಾಟಕವೆನ್ನಬಹುದಾದ ಯಕ್ಷಗಾನ ಕಲೆಯು ವಿಶೇಷವಾಗಿ ದಕ್ಷಿಣಕನ್ನಡ ಪ್ರಾಂತ್ಯದಲ್ಲಿ ಹುಟ್ಟಿಕೊಂಡು ಇಂದಿನ ದಿನಗಳಲ್ಲಿ ಇಡೀ ಕರ್ಣಾಟಕದಲ್ಲಿ ಜನಪ್ರಿಯವಾಗಿದೆ. ಮುಮ್ಮಡಿಯವರ ಅಳಿಯಂದಿರಾದ ಲಿಂಗರಾಜರಿಗೂ ಸಹ ಇದು ಮೆಚ್ಚಿನ ಕಲೆಯಾಗಿದ್ದು ಅವರೂ ಸಹ ಮೂವತ್ತಾರು ಯಕ್ಷಗಾನ ಪ್ರಸಂಗಗಳನ್ನು ಬರೆದಿರುವ ಬಗ್ಗೆ ಈ ಹಿಂದೆಯೇ ತಿಳಿಸಲಾಗಿದೆ. ಮುಮ್ಮಡಿಯವರು ಈ ಕಲೆಯನ್ನು ಪ್ರೋತ್ಸಾಹಿಸಿ ಅರಮನೆಯಲ್ಲಿ ಯಕ್ಷಗಾನ ಪ್ರಸಂಗಗಳನ್ನು ಏರ್ಪಡಿಸುತ್ತಿದ್ದರಲ್ಲದೆ ಪಾರ್ತಿಸುಬ್ಬನೆಂಬ ಯಕ್ಷಗಾನ ಕಲಾವಿದನನ್ನು ಆಹ್ವಾನಿಸಿ ಆಸ್ಥಾನದಲ್ಲಿ ನೇಮಿಸಿಕೊಂಡಿದ್ದರು. ಯಕ್ಷಗಾನ ಕಲಾವಿದರಿಗಾಗಿಯೇ ಈತನ ಹೆಸರಿನಲ್ಲಿ ಪುರಸ್ಕಾರವನ್ನು ಸರ್ಕಾರದ ವತಿಯಿಂದ ಮಂಜೂರು ಮಾಡಿದ್ದು ಇಂದಿಗೂ ಸಹ ಇದು ಮುಂದುವರೆದುಕೊಂಡು ಬಂದಿದೆ.

ಸಾಹಿತ್ಯಕ್ಷೇತ್ರದಲ್ಲಿ ಹಾಗೂ ಸಾಂಸ್ಕೃತಿಕ ವಲಯಕ್ಕೆ ಸಂಬಂಧಿಸಿದಂತೆ ಮುಮ್ಮಡಿಯವರ ಸಾಧನೆಗಳ ಬಗ್ಗೆ ಈಗಾಗಲೇ ಹಲವಾರು ಗ್ರಂಥಗಳು ರಚನೆಗೊಂಡಿವೆ. 'ಬ್ರಹ್ಮನಿಧಿ' ಸಂಪುಟವು ಹೊರಬರುತ್ತಿರುವಂತಹ ಈ ವಿಶೇಷ ಸಂದರ್ಭದಲ್ಲಿ ಸಂಕ್ಷಿಪ್ತ ಮಾಹಿತಿಯನ್ನಷ್ಟೇ ಇಲ್ಲಿ ನೀಡಲಾಗಿದೆ.

**ಬ್ರಹ್ಮನಿಧಿಯ ಸಾರಾಂಶ :**

**ಹಿಂದೂಧಾರ್ಮಿಕ ಜಗತ್ತಿನ ಪ್ರಸಿದ್ಧ ದೇವತೆಗಳ, ಋಷಿಗಳ ಹಾಗೂ ಸಾಂಸ್ಕೃತಿಕ, ಸಾಹಿತ್ಯ ಕೃತಿಗಳ ಅತಿ ಸಂಕ್ಷಿಪ್ತ ಮಾಹಿತಿಯನ್ನು ಏಕತ್ರ ಅಲ್ಪಾವಧಿಯಲ್ಲಿಯೇ ವರ್ಣಚಿತ್ರಸಹಿತ ಪರಿಚಯಿಸುವ ಗ್ರಂಥ 'ಬ್ರಹ್ಮನಿಧಿ'. ಮುಮ್ಮಡಿಯವರು ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ಪುರುಷಾರ್ಥ ಚತುಷ್ಟಯಗಳಲ್ಲಿ ಯಾವುದನ್ನೂ ಕಡೆಗಣಿಸದೆ ಪ್ರಾಸಂಗಿಕವಾಗಿ ಈ ನಾಲ್ಕೂ ಪುರುಷಾರ್ಥಗಳಿಗೂ ಸಹ ಸಂಬಂಧಿಸಿದ ಸಮಗ್ರ ಸಾಹಿತ್ಯಪ್ರಕಾರಗಳನ್ನು, ಸಂಬಂಧಿಸಿದ ಅಧಿದೇವತೆಗಳ ಸಹಿತ ಮೂಲ ಆಕರಗ್ರಂಥಗಳ ಶ್ಲೋಕಸಹಿತವಾಗಿ ಬ್ರಹ್ಮನಿಧಿಯಲ್ಲಿ ಸಹೃದಯರ ಮುಂದಿಟ್ಟಿದ್ದಾರೆ. ಜಿಜ್ಞಾಸುಗಳನ್ನು ಗ್ರಂಥದ ಅಂತ್ಯದವರೆಗೂ ಸೆಳೆದೊಯ್ಯುವ ವಿಶೇಷ ಆಕರ್ಷಣೆ ಈ ಕೃತಿಯಲ್ಲಿದೆ.**

ಜಗತ್ತಿನ ಸೃಷ್ಟಿಗೆ ಕಾರಣನಾದ ಬ್ರಹ್ಮ ಮತ್ತು ಅವನ ಪರಿವಾರ, ಜ್ಞಾನಾಧಿದೇವತೆ ಸರಸ್ವತಿ ಹಾಗೂ ಜ್ಞಾನದ ವಿವಿಧ ಶಾಖೆಗಳ ಅಧೀಕ್ಷಕರುಗಳು ಅಥವಾ ಅಭಿಮಾನಿ ದೇವತೆಗಳ ಸಚಿತ್ರ ನಿರೂಪಣೆಗಳೊಂದಿಗೆ, ಸಾಗರದ ತಳದಿಂದ ಮುತ್ತು ಹವಳಗಳನ್ನು ಪ್ರಯಾಸದಿಂದ ಸಂಗ್ರಹಿಸುವಂತೆ ಸಾಹಿತ್ಯಕ್ಷೇತ್ರದ ಅಪರೂಪವೆನಿಸುವ ವಿಷಯಗಳನ್ನು ಆಧಾರ ಸಹಿತವಾಗಿಯೇ ಮೂಲ ಗ್ರಂಥಗಳಿಂದ ಉಲ್ಲೇಖಿಸಲಾದ ಶ್ಲೋಕಗಳೊಡನೆ ಬ್ರಹ್ಮನಿಧಿಯಲ್ಲಿ ಕಾಣಬಹುದಾಗಿದೆ.

ಹಿಂದೂಧಾರ್ಮಿಕ ಜಗತ್ತಿನಲ್ಲಿ 'ಬ್ರಹ್ಮ' ಶಬ್ದಕ್ಕೆ ಸಂದರ್ಭೋಚಿತವಾಗಿ ಬೇರೆ ಬೇರೆಯ ಅರ್ಥಗಳಿವೆ. ನಾಮಪದ ಪುಲ್ಲಿಂಗ ಏಕವಚನ 'ಬ್ರಹ್ಮನ್' ಎಂದರೆ ಜಗತ್ತಿನ ಸೃಷ್ಟಿಕರ್ತಾ ಚತುರ್ಮುಖ ಬ್ರಹ್ಮ. ಇವನಿಗೆ ಪಿತಾಮಹ, ಪರಮೇಷ್ಠಿ, ಹಿರಣ್ಯಗರ್ಭ ಎಂಬ ಹೆಸರುಗಳೂ ಸಹ ಇವೆ. ಹಿಂದೂಧಾರ್ಮಿಕ ಜಗತ್ತಿನಲ್ಲಿ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣರಾದ ತ್ರಿಮೂರ್ತಿಗಳಲ್ಲಿ ಬ್ರಹ್ಮನೇ ಪ್ರಥಮನು. ಬ್ರಹ್ಮನ್ ಎಂಬುದು ವ್ಯಕ್ತಿಯೊಬ್ಬನ ಹೆಸರೂ ಆಗಬಹುದು. ಬ್ರಹ್ಮನ್ ಎಂದರೆ ವಿಪ್ರ ಅರ್ಥಾತ್ ಬ್ರಾಹ್ಮಣನೂ ಹೌದು, ಯಜ್ಞನಿರ್ವಹಣೆಯ ಸಂದರ್ಭದಲ್ಲಿ ಅಥರ್ವವೇದ ಮಂತ್ರಗಳನ್ನು ಪಠಿಸುವ ಋತ್ವಿಕ್ಕಿಗೂ 'ಬ್ರಹ್ಮನ್' ಎಂದು ಹೇಳಲಾಗುತ್ತದೆ. ನಾಮಪದ ನಪುಂಸಕ ಏಕವಚನದಲ್ಲಿ 'ಬೃಹಿ (ವೃದ್ಧೌ)' (ವೃದ್ಧಿಹೊಂದು)ಗೆ 'ಮನಿನ್' ಪ್ರತ್ಯಯ ಸೇರಿ ವರ್ಧಿಸು, ವಿಕಸಿಸು, ದೊಡ್ಡದಾಗು, ಸಂಪೂರ್ಣ. ಅತ್ಯಂತ ಮಿಗಿಲಾದ ಎಂಬ ಅರ್ಥಗಳನ್ನು ನೀಡುವ 'ಬ್ರಹ್ಮ' ಎಂದರೆ ಪರಮತತ್ತ್ವ. ಸಕಲ ಚರಾಚರಗಳನ್ನು ವ್ಯಾಪಿಸಿರುವ ಮಹಾತತ್ತ್ವ. ದಾರ್ಶನಿಕ ಜಗತ್ತಿನಲ್ಲಿ ಬ್ರಹ್ಮವೆಂದರೆ ಯಾವುದರಿಂದ ಚರಾಚರ ಜಗತ್ತು ವಿಕಾಸಗೊಂಡು ಪುನಃ ಯಾವುದರಲ್ಲಿ ಲಯವಾಗುತ್ತದೋ ಅದೇ ಬ್ರಹ್ಮ. ಅದ್ವೈತವೇದಾಂತದ ದೃಷ್ಟಿಯಲ್ಲಿ ಅವಿದ್ಯಾವಿಶಿಷ್ಟ ಜಗತ್ಕಾರಣನಾದ ಈಶ್ವರನೇ 'ಸಗುಣಬ್ರಹ್ಮ'. ದ್ವೈತದರ್ಶನದ ಪ್ರಕಾರ ವಿಷ್ಣುವೇ ಪರಬ್ರಹ್ಮ. ವಿಶಿಷ್ಟಾದ್ವೈತದ ಪ್ರಕಾರ ಲಕ್ಷ್ಮೀನಾರಾಯಣನೇ ಪರಬ್ರಹ್ಮ.

ಶ್ರೀತತ್ತ್ವನಿಧಿಯ ನಾಲ್ಕನೆಯ ಸಂಪುಟವಾದ ಬ್ರಹ್ಮನಿಧಿಯು ಜಗತ್ತಿನ ಸೃಷ್ಟಿಗೆ ಕಾರಣನಾದ ಚತುರ್ಮುಖ ಬ್ರಹ್ಮನಿಗೂ, ಸೃಷ್ಟಿಕಾರ್ಯದಲ್ಲಿ ಅವನೊಡನೆ ಭಾಗವಹಿಸುವ ಅವನ ಪರಿವಾರದ ಇತರ ಸದಸ್ಯರಿಗೂ, ಹಾಗೆಯೇ ಜ್ಞಾನದ ಅಧಿದೇವತೆ ಸರಸ್ವತಿ ಹಾಗೂ ಜ್ಞಾನದ ವಿವಿಧ ಪ್ರಕಾರಗಳ ಅಭಿಮಾನಿದೇವತೆಗಳಿಗೂ ಮೀಸಲಾಗಿದೆ. ಮೂಲ ಹಸ್ತಪ್ರತಿಯಲ್ಲಿನ 130 ರಿಂದ 188ನೆಯ ಪತ್ರದವರೆಗೂ ಬ್ರಹ್ಮನಿಧಿಯ ಪಠ್ಯಭಾಗವಿದ್ದು, ಸುಮಾರು 408 ವರ್ಣಚಿತ್ರಗಳಿದ್ದು ಅವುಗಳಲ್ಲಿ ಒಟ್ಟು 480 ದೇವತೆಗಳ ಸುಂದರ ರೂಪಾಕೃತಿಗಳನ್ನು ಚಿತ್ರಿಸಲಾಗಿದೆ.

ಚತುರ್ಮುಖಬ್ರಹ್ಮನ ಮೂರ್ತಿಯು ಸೃಷ್ಟಿ ಮತ್ತು ಜ್ಞಾನ ಎರಡನ್ನು ಸಹ ಸೂಚಿಸುವಂತಿದ್ದು ತನ್ನ ಕಾರ್ಯಕ್ಷೇತ್ರಕ್ಕೆ ಅನುಗುಣವಾಗಿ ಬ್ರಹ್ಮನು ಆದ್ಯಬ್ರಹ್ಮ, ಲೋಕಪಾಲಬ್ರಹ್ಮ, ಪ್ರಜಾಪತಿಬ್ರಹ್ಮ, ವಿಧಿಬ್ರಹ್ಮ ಮತ್ತು ವಿಶ್ವಕರ್ಮಬ್ರಹ್ಮನಾಗಿ ವಿರಾಜಿಸಿದ್ದಾನೆ. ಪ್ರಜಾಪತಿಬ್ರಹ್ಮನನ್ನು ಮಾತ್ರ ಒಂದೇ ಮುಖವಿರುವಂತೆ ಚಿತ್ರಿಸಬೇಕೆಂಬುದಾಗಿ ಶೈವಾಗಮದ ಆಧಾರದ ಮೇಲೆ ಮುಮ್ಮಡಿಯವರು ಸೂಚಿಸಿದ್ದಾರೆ. ಪ್ರಜಾಪತಿಬ್ರಹ್ಮನನ್ನು ಹೊರತುಪಡಿಸಿ ಉಳಿದವರೆಲ್ಲರೂ ಸಹ ಚತುರ್ವದನರಾಗಿರುವಂತೆ ಶಿಲ್ಪಗಳಲ್ಲಿ, ಚಿತ್ರಗಳಲ್ಲಿ ವಿನ್ಯಾಸಗೊಳಿಸಬೇಕು.

ಬ್ರಹ್ಮನ ನಾಲ್ಕು ಶಿರಸ್ಸುಗಳು ಕ್ರಮವಾಗಿ ನಾಲ್ಕು ದಿಕ್ಕುಗಳನ್ನು ಪ್ರತಿನಿಧಿಸುತ್ತವೆ. ಹಾಗೆಯೇ ನಾಲ್ಕು ಯುಗಗಳಾದ ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗಗಳು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿ ನಾಲ್ಕು ವರ್ಣಗಳು,

ನಾಲ್ಕು ವೇದಗಳಾದ ಋಕ್, ಯಜುಸ್, ಸಾಮ, ಅಥರ್ವವೇದಗಳು ಪ್ರತೀಕಗಳಾಗಿವೆ. ಅವನ ನಾಲ್ಕು ಕೈಗಳಲ್ಲಿಯೂ ಕ್ರಮವಾಗಿ ಕಾಲಸೂಚಕವಾದ ಅಕ್ಷಮಾಲೆ, ಯಜ್ಞಯಾಗಾದಿಗಳ ಸೂಚಕವಾದ ಸ್ರುವ ಅರ್ಥಾತ್ ಸೌಟು, ಸೃಷ್ಟಿಯ ಆದಿರೂಪವಾದ ಜಲವನ್ನು ಸೂಚಿಸುವ ಕಮಂಡಲು, ಧಾರ್ಮಿಕ ಹಾಗೂ ಲೌಕಿಕಜ್ಞಾನವನ್ನು ಸೂಚಿಸುವ ಪುಸ್ತಕ ಇವುಗಳಿರಬೇಕು. ಸಾಮಾನ್ಯವಾಗಿ ಬ್ರಹ್ಮನನ್ನು ಕಮಲಾಸನದಲ್ಲಿ ಕುಳಿತಿರುವಂತೆ ಚಿತ್ರಿಸಲಾಗುತ್ತದೆ. ಕೆಲವೊಮ್ಮೆ ಏಳು ಶ್ವೇತಹಂಸಗಳು ಎಳೆಯುತ್ತಿರುವ ರಥಾರೂಢನಾಗಿಯೂ ಇರಬಹುದು. ಹಿಂದೂಧಾರ್ಮಿಕ ಜಗತ್ತಿನಲ್ಲಿ ಶ್ವೇತಹಂಸವು ಜ್ಞಾನದ ಸಂಕೇತ.

ವೇದವೆಂದರೆ (ವಿದ್ ಜ್ಞಾನೇ) ಜ್ಞಾನ. ವೇದಗಳು ಸಮಸ್ತ ಜಗತ್ತಿನಲ್ಲಿಯೇ ಅತ್ಯಂತ ಪ್ರಾಚೀನ ಹಾಗೂ ಲಭ್ಯವಿರುವ ಸಾಹಿತ್ಯಿಕ ದಾಖಲೆಗಳಾಗಿವೆ. ನಾಲ್ಕು ವೇದಗಳು ಹಾಗೂ ಉಪವೇದಗಳಾದ ಆಯುರ್ವೇದ, ಗಾಂಧರ್ವವೇದ, ಧನುರ್ವೇದಾದಿ ಉಪವೇದಗಳೂ, ಆರು ವೇದಾಂಗಗಳು, ಉಪನಿಷತ್ತುಗಳ ಅಭಿಮಾನಿ ದೇವತೆಗಳೆಲ್ಲರೂ ತಮ್ಮದೇ ಆದ ನಿರ್ದಿಷ್ಟರೂಪಾಕೃತಿಗಳಿಂದಲೂ, ವಸ್ತ್ರಾಭರಣಗಳ ಸಹಿತವಾಗಿಯೂ ಚಿತ್ರಿತರಾಗಿದ್ದಾರೆ. ಕೆಲವರು ಯೋಗ್ಯಪತ್ನಿಯರೊಡಗೂಡಿಯೂ ಇರುವಂತೆ ವರ್ಣಿಸಲಾಗಿದೆ. ಅರವತ್ತನಾಲ್ಕು ಕಲೆಗಳ ನಿರೂಪಣೆಗೂ ಬ್ರಹ್ಮನಿಧಿಯಲ್ಲಿ ಅವಕಾಶವಿದ್ದು ಭೌಗೋಳಿಕ ಅಂಶಗಳಾದ ಸಪ್ತ ಮಹಾಸಾಗರಗಳು, ಪರ್ವತಗಳು, ಪ್ರಮುಖನದಿಗಳನ್ನು ಅಭಿಮಾನಿ ದೇವತೆಗಳ ಸಹಿತ ವಿವರಿಸಲಾಗಿದೆ. ಅಷ್ಟದಿಕ್ಕುಗಳು ಅಷ್ಟದಿಕ್ಪಾಲಕರುಗಳು ಹಾಗೂ ಒಂದೊಂದು ದಿಕ್ಕಿನಲ್ಲಿಯೂ ಭೂಮಿಯನ್ನು ರಕ್ಷಿಸುತ್ತಿರುವ ದಿಗ್ಗಜಗಳ ಹಾಗೂ ದಿಙ್ನಾಗಗಳ ಸಚಿತ್ರ ನಿರೂಪಣೆಯು ಹೃದಯಂಗಮವಾಗಿದೆ.

ಪುರಾಣಗಳಲ್ಲಿರುವಂತೆ ಅಷ್ಟದಿಕ್ಪಾಲಕರುಗಳು ಕ್ರಮವಾಗಿ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ ಇವರುಗಳು. ಇವರು ವಾಹನಾರೂಢರಾಗಿರುವಂತೆ ಚಿತ್ರಿಸಲಾಗಿದೆ. ಇವರಿಂದ ರಕ್ಷಿತವಾಗಿರುವ ಎಂಟು ದಿಕ್ಕುಗಳನ್ನೂ ಸಹ ಎಂಟು ಆನೆಗಳು ಹೊತ್ತಿವೆ. ಬ್ರಹ್ಮನಿಧಿಯಲ್ಲಿ ದಿಕ್ಪಾಲಕರುಗಳ ಹಾಗೂ ಅವರಿಗೆ ಸಂಬಂಧಿಸಿದ ದಿಗ್ಗಜಗಳ ಹಾಗೂ ಅವುಗಳ ಪತ್ನಿಯರುಗಳ ನಾಮೋಲ್ಲೇಖಗಳೂ ಓದುಗರ ಕುತೂಹಲವನ್ನು ಕೆರಳಿಸುವಂತಿವೆ. ಚಿತ್ರಸಂಖ್ಯೆ 139B-140ರವರೆಗೂ ದಿಕ್ಪಾಲಕರುಗಳ ಹಾಗೂ ದಿಗ್ಗಜಗಳ ಅತ್ಯಾಕರ್ಷಕ ಚಿತ್ರಗಳೂ, ದಿಙ್ನಾಗಗಳ ಬೆರಗುಗೊಳಿಸುವ ಚಿತ್ರಗಳೂ ಸಹ ಇದ್ದು ಚಿತ್ರಕಲಾವಿದರ ಕಲಾಕೌಶಲ್ಯವನ್ನು ಸಾರಿ ಹೇಳುತ್ತಿವೆ. ಆಯಾ ದಿಕ್ಕುಗಳಿಗೆ ಸಂಬಂಧಿಸಿದಂತೆ ಅಂಗನೆಯರೂ ಸಹ ಇದ್ದಾರೆ. ಇವರುಗಳನ್ನೂ ಸಹ ವಾಹನಾರೂಢರಾಗಿರುವಂತೆ ಚಿತ್ರಿಸಲಾದರೂ ಸಹ ಈಶಾನ್ಯ ದಿಗಂಗನೆಯನ್ನು ಕೋಲನ್ನು ಊರಿಕೊಂಡು ನಡೆಯುತ್ತಿರುವಂತೆ ಚಿತ್ರಿಸಲಾಗಿದೆ. ಉತ್ತರ ಹಾಗೂ ಈಶಾನ್ಯ ದಿಗಂಗನೆಯರು ವೃದ್ಧೆಯರು.

ಪೂರ್ವದಿಕ್ಕಿನ ಅಧಿಪತಿ ಇಂದ್ರ, ದಿಗ್ಗಜ ಐರಾವತ, ಅದರ ಪತ್ನಿ ಅಭ್ರಮು. ಆಗ್ನೇಯದಿಕ್ಕಿನ ಅಧಿಪತಿ ಅಗ್ನಿ, ದಿಗ್ಗಜ ಪುಂಡರೀಕ, ಅದರ ಪತ್ನಿ ಕಪಿಲಾ. ದಕ್ಷಿಣದಿಕ್ಕಿನ ಅಧಿಪತಿ ಯಮ, ದಿಗ್ಗಜ ವಾಮನ, ಅದರ ಪತ್ನಿ ಪಿಂಗಳಾ. ನೈರ್ಋತ್ಯದಿಕ್ಕಿನ ಅಧಿಪತಿ ನಿರ್ಋತಿ, ದಿಗ್ಗಜ ಕುಮುದ, ಅದರ ಪತ್ನಿ ಅನುಪಮಾ. ಪಶ್ಚಿಮದಿಕ್ಕಿನ ಅಧಿಪತಿ ವರುಣ,

ದಿಗ್ಗಜ ಅಂಜನ, ಅದರ ಪತ್ನಿ ತಾಮ್ರಪರ್ಣೀ. ವಾಯುವ್ಯದಿಕ್ಕಿನ ಅಧಿಪತಿ ವಾಯು, ದಿಗ್ಗಜ ಪುಷ್ಪದಂತ, ಅದರ ಪತ್ನಿ ಸುದಂತೀ. ಉತ್ತರದಿಕ್ಕಿನ ಅಧಿಪತಿ ಕುಬೇರ, ದಿಗ್ಗಜ ಸಾರ್ವಭೌಮ, ಅದರ ಪತ್ನಿ ಅಂಜನಾ. ಈಶಾನ್ಯದಿಕ್ಕಿನ ಅಧಿಪತಿ ಈಶಾನ, ದಿಗ್ಗಜ ಸುಪ್ರತೀಕ, ಅದರ ಪತ್ನಿ ಅಂಜನಾವತಿ.

ಹೀಗೆ ಅಷ್ಟದಿಕ್ಕುಗಳಲ್ಲದೆ ಸರ್ಪಕುಲಗಳ ಅತ್ಯಂತ ಪೂರ್ವಜರೆಂದು ಖ್ಯಾತರೂ ಸಹ ಆಗಿರುವ ಎಂಟು ದಿಙ್ನಾಗಗಳು ಅಥವಾ ಮಹಾಸರ್ಪಗಳು ಕ್ರಮವಾಗಿ ಅನಂತ, ವಾಸುಕಿ, ತಕ್ಷಕ, ಕರ್ಕೋಟ, ಪದ್ಮಕ, ಮಹಾಪದ್ಮ, ಶಂಖಪಾಲ, ಕುಲಿಕ ಇವರುಗಳು.

ಹಿಂದೂಧಾರ್ಮಿಕ ಲೋಕದಲ್ಲಿ ಗುರುತಿಸಲಾಗಿರುವ ಒಂಭತ್ತು ಜನ ಚಿರಂಜೀವಿಗಳಾದ ಅಶ್ವತ್ಥಾಮ, ಮಹಾಬಲಿ, ವ್ಯಾಸ, ಹನುಮಾನ್, ವಿಭೀಷಣ, ಕೃಪ, ಪರಶುರಾಮ, ಮಾರ್ಕಂಡೇಯ, ಪ್ರಹ್ಲಾದ ಇವರುಗಳ ಉಲ್ಲೇಖವಿದ್ದು ಇವರಲ್ಲಿ ಕೆಲವರು ವಿವಾಹಿತರಾಗಿಯೂ, ಕೆಲವರು ಅವಿವಾಹಿತರಾಗಿಯೂ ಇದ್ದು, ವಿವಾಹಿತರ ಪತ್ನಿಯರುಗಳ ಹೆಸರನ್ನೂ ಸಹ ಸೂಚಿಸಲಾಗಿದೆ. ಬಲಿಯ ಪತ್ನಿ ವಿಂಧ್ಯಾವಳಿಯಾದರೆ, ವಿಭೀಷಣನ ಪತ್ನಿ ಸರಮಾ.

ಮತ್ತೊಂದು ಗಮನಾರ್ಹ ಅಂಶವೆಂದರೆ ವೇದಗಳಿಗೂ ಸಹ ರೂಪಾಕೃತಿಗಳನ್ನು ಪತ್ನಿಯರನ್ನು ಸ್ಕಂದಪುರಾಣದಲ್ಲಿನ ಲಕ್ಷ್ಮೀನಾರಾಯಣರ ಸಂವಾದದ ರೀತ್ಯಾ ನೀಡಲಾಗಿದ್ದು, ಅಪರೂಪದ ಇಂತಹ ವಿಚಾರಗಳನ್ನು ಸಂಗ್ರಹಿಸಿರುವುದು ಮುಮ್ಮಡಿಯವರಲ್ಲಿರುವ ಸಂಶೋಧಕ ಮನೋಧರ್ಮವನ್ನು ಬಿಂಬಿಸುತ್ತದೆ. ಋಗ್ವೇದಪುರುಷನ ಪತ್ನಿ ಸಾಮಧೇನಿ, ಯಜುರ್ವೇದಪುರುಷನ ಪತ್ನಿ ಸೃಗಾದೇವಿ, ಸಾಮವೇದಪುರುಷನ ಪತ್ನಿ ಕುಹೂದೇವಿ, ಅಥರ್ವವೇದಪುರುಷನ ಪತ್ನಿ ಸಮಿದ್ದೇವಿ.

ಉಪವೇದಗಳಲ್ಲಿ ಒಂದಾದ ಆಯುರ್ವೇದಕ್ಕೆ ಸಂಬಂಧಿಸಿದಂತೆ ನೃಸಿಂಹಪ್ರಸಾದ, ಭಾಗವತ, ಧನ್ವಂತರಿಯ ವೈದ್ಯಶಾಸ್ತ್ರಗ್ರಂಥಗಳನ್ನವಲಂಬಿಸಿ ಅತ್ಯಂತ ಉಪಯುಕ್ತವಾದ ಮಾಹಿತಿ ಬ್ರಹ್ಮನಿಧಿಯಲ್ಲಿ ಲಭಿಸುತ್ತದೆ. ವೈದ್ಯಶಾಸ್ತ್ರದಲ್ಲಿ ಗುರುತಿಸಲಾಗಿರುವ ಹಲವು ರೋಗಗಳು, ವಿವಿಧ ಚಿಕಿತ್ಸೆಗಳಿಗೆ ಸಂಬಂಧಿಸಿದಂತೆ ತೈಲ, ಮಾತ್ರೆಗಳು, ಅಂಜನ, ಚೂರ್ಣಗಳು, ಹಾಗೆಯೇ ಶ್ರೇಷ್ಠವೈದ್ಯನ ಲಕ್ಷಣಗಳು, ಅಯೋಗ್ಯವೈದ್ಯನ ಲಕ್ಷಣಗಳನ್ನು ಇಲ್ಲಿ ನಿರೂಪಿಸಲಾಗಿದೆ. ಆಯುರ್ವೇದದ ಅಧಿದೇವತೆ ಧನ್ವಂತರಿಯ ವರ್ಣಚಿತ್ರ ಸಹಿತವಾಗಿ ಆಯುರ್ವೇದದ ಸಂಕ್ಷಿಪ್ತ, ಆದರೆ ಆಸಕ್ತಿಯನ್ನು ತೀವ್ರಗೊಳಿಸುವಂತಹ ವಿಷಯಗಳನ್ನಿಲ್ಲಿ ಕಾಣಬಹುದಾಗಿದೆ.

ನೀತಿಪ್ರಕಾಶಿಕೆಯೆಂಬ ಗ್ರಂಥವನ್ನಾಧರಿಸಿ ಧನುರ್ವೇದಕ್ಕೆ ಸಂಬಂಧಿಸಿದ ರೋಚಕ ವಿಷಯಗಳನ್ನು ಬ್ರಹ್ಮನಿಧಿಯಲ್ಲಿ ಹೇಳಲಾಗಿದ್ದು ನಾನಾ ರೀತಿಯ ಶಸ್ತ್ರಗಳ ಹಾಗೂ ಮಂತ್ರಪೂರ್ವಕವಾಗಿಯೇ ಪ್ರಯೋಗಿಸಲಾಗುವ ಅಸ್ತ್ರಗಳ ವಿಶೇಷ ಮಾಹಿತಿಯನ್ನು ನೀಡಲಾಗಿದೆ. ಮಾನವವೀರರುಗಳ ಆಯುಧಗಳೂ, ದೇವತೆಗಳು ಬಳಸುವ ವಿಶೇಷ ಆಯುಧಗಳ ಸ್ವರೂಪಾಕೃತಿಗಳ ನಿರೂಪಣೆಯಿದೆ. ಆಯುಧಗಳನ್ನು ನಾಲ್ಕು ಬಗೆಯಾಗಿ ವಿಂಗಡಿಸಲಾಗಿದ್ದು ದೂರದಿಂದ ಬಿಡುವ ಬಾಣಗಳನ್ನು - 1. ಮುಕ್ತ ಆಯುಧಗಳೆಂದೂ, 2. ಖಡ್ಗಾದಿಗಳನ್ನು ಕೈಯಲ್ಲಿ ಹಿಡಿದುಕೊಂಡೇ ಹೊಡೆಯುವುದರಿಂದ

ಅಮುಕ್ತ ಆಯುಧಗಳೆಂದೂ, 3. ಅಸ್ತ್ರಗಳನ್ನು ಪ್ರಯೋಗ ಮಾಡಿ ಪುನಃ ಹಿಂದಕ್ಕೆ ತೆಗೆದುಕೊಳ್ಳಬಹುದಾದ್ದರಿಂದ ಮುಕ್ತಾಮುಕ್ತ ಆಯುಧಗಳೆಂದೂ, 4. ಮಂತ್ರಪೂರ್ವಕವಾಗಿ ಪ್ರಯೋಗ ಮಾಡುವ ಅಸ್ತ್ರಗಳು ಮಂತ್ರಮುಕ್ತ ಆಯುಧಗಳೆಂದೂ ವಿಂಗಡಿಸಲಾಗಿದೆ. ಈ ನಾಲ್ಕು ವಿಧಗಳಲ್ಲಿಯೂ ಪುನಃ ಹನ್ನೆರಡು ವಿಧದ ಮುಕ್ತ ಅಸ್ತ್ರಗಳನ್ನು, ಇಪ್ಪತ್ತು ಬಗೆಯ ಅಮುಕ್ತ ಅರ್ಥಾತ್ ಕೈಯಲ್ಲಿ ಹಿಡಿದುಕೊಂಡೇ ಹೊಡೆಯುವ ಆಯುಧಗಳನ್ನು ಹೀಗೆ ಮೂವತ್ತೆರಡು ಬಗೆಯ ಮುಕ್ತ ಹಾಗೂ ಅಮುಕ್ತ ಶಸ್ತ್ರಗಳನ್ನು ಚಿತ್ರಸಹಿತವಾಗಿ 149A-149Bಗಳಲ್ಲಿ ವಿವರಿಸಲಾಗಿದೆ. ಪ್ರಯೋಗಿಸಿದ ನಂತರ ಮತ್ತೆ ಹಿಂದಕ್ಕೆ ತೆಗೆದುಕೊಳ್ಳಬಹುದಾದ ನಲವತ್ತನಾಲ್ಕು ಬಗೆಯ ಆಯುಧಗಳ ಸುದೀರ್ಘಪಟ್ಟಿಯನ್ನೇ ಬ್ರಹ್ಮನಿಧಿಯು ನೀಡಿದ್ದು, ಚಿತ್ರಸಹಿತವಾಗಿರುವ ಆಯುಧ ವೈವಿಧ್ಯಗಳಿಗೆ ಸಂಬಂಧಿಸಿದಂತೆ ತಮ್ಮ ಕುತೂಹಲವನ್ನು ಸಹೃದಯರು ಬ್ರಹ್ಮನಿಧಿ ಗ್ರಂಥವನ್ನು ಅವಲೋಕಿಸಿಯೇ ಪರಿಹರಿಸಿಕೊಳ್ಳಬೇಕೆಂದು ಸೂಚಿಸಲಾಗಿದೆ.

ಇನ್ನು ಮಂತ್ರಮುಕ್ತ ಅಸ್ತ್ರಗಳಾದ ವಿಷ್ಣುಚಕ್ರ, ವಜ್ರಾಸ್ತ್ರ, ಬ್ರಹ್ಮಾಸ್ತ್ರ, ಕಾಲಪಾಶಾಸ್ತ್ರ, ನಾರಾಯಣಾಸ್ತ್ರ, ಪಾಶುಪತಾಸ್ತ್ರಗಳು ಯಾವುದೇ ಬೇರೆಯ ಅಸ್ತ್ರಗಳಿಂದಲೂ ನಾಶವಾಗಲಾರವು. ಪ್ರಾಚೀನಕಾಲದ 130 ಬಗೆಯ ಶಸ್ತ್ರಾಸ್ತ್ರಗಳ ಬಗ್ಗೆ ಸಚಿತ್ರ ವಿವರಣೆಯ ಜೊತೆಗೆ ದೇವತೆಗಳು ಕೈಯಲ್ಲಿ ಧರಿಸಿರುವ ಆಯುಧಗಳನ್ನು, ಇತರ ವಿಶೇಷ ವಸ್ತುಗಳ ಮಾಹಿತಿಯನ್ನೂ ಮುಮ್ಮಡಿಯವರು ತಾವೇ ರಚಿಸಿರುವ ಚಾಮುಂಡಿಕಾಲಘುನಿಘಂಟುವಿನಿಂದ ಉಲ್ಲೇಖಿಸುತ್ತಾರೆ. ದೇವತೆಗಳ ಕೈಗಳಲ್ಲಿರುವ ವಾದ್ಯಗಳು, ವಿಧವಿಧವಾದ ಹೂಗಳು, ವಿವಿಧ ಹಣ್ಣುಗಳು, ವೈವಿಧ್ಯಮಯವಾದ ಆಯುಧಗಳು, ಕೆಲವರ ಕೈಗಳಲ್ಲಿನ ಮುದ್ರೆಗಳು ಹೀಗೆ ಸ್ವಾರಸ್ಯಕರವಾದ ನೂರಮೂವತ್ತು ವಿಷಯಗಳ ಪ್ರತಿಪಾದನೆಯನ್ನು ಕಾಣಬಹುದಾಗಿದೆ.

ಆರು ವೇದಾಂಗಗಳಾದ ಶಿಕ್ಷಾಶಾಸ್ತ್ರ, ಕಲ್ಪಶಾಸ್ತ್ರ, ವ್ಯಾಕರಣಶಾಸ್ತ್ರ, ನಿರುಕ್ತ, ಛಂದಸ್, ಜ್ಯೋತಿಷಶಾಸ್ತ್ರಗಳನ್ನು ನೃಸಿಂಹಪ್ರಾಸಾದ, ಶೈವಾಗಮ, ಹೇಮಾದ್ರಿಖಂಡ, ಮಯೂಖ, ಪಾಂಚರಾತ್ರ, ಕಾರಣಾಗಮ, ವ್ರತಕಲ್ಪ ಮೊದಲಾದ ಆಕರಗಳಿಂದ ಮೂಲ ಶ್ಲೋಕಗಳನ್ನು ಉಲ್ಲೇಖಿಸಿ ಅಭಿಮಾನಿದೇವತೆಗಳ ಸಹಿತ ವರ್ಣಿಸಲಾಗಿದೆ. ಮೀಮಾಂಸಾ, ನ್ಯಾಯ, ಧರ್ಮಶಾಸ್ತ್ರ, ಪುರಾಣಗಳು ತಮ್ಮ ಅಭಿಮಾನಿದೇವತೆಗಳೊಡನೆ (ಚಿತ್ರ 150A) ವರ್ಣಿತರಾಗಿದ್ದಾರೆ. ಇವುಗಳಲ್ಲದೆ ಸಾಹಿತ್ಯಕ್ಷೇತ್ರದಲ್ಲಿ ಸುಪ್ರಸಿದ್ಧವಾಗಿರುವ ಹಾಗೂ ರಾಜಪುತ್ರರುಗಳು ಕಲಿಯಲೇ ಬೇಕಾದ 64 ಕಲೆಗಳನ್ನು ಅಭಿಮಾನಿದೇವತಾ ಸಹಿತವಾಗಿ ವರ್ಣಿಸಲಾಗಿದೆ.

ರಾಜರಲ್ಲಿರಬೇಕಾದ ತ್ರಿವಿಧಶಕ್ತಿಗಳಾದ ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹಶಕ್ತಿಗಳ ಅಭಿಮಾನಿ ದೇವತೆಗಳಿಗೆ ಸ್ತ್ರೀರೂಪಾಕೃತಿಗಳನ್ನು ಕಲ್ಪಿಸಿ ವರ್ಣಿಸಿರುವುದು ಬ್ರಹ್ಮನಿಧಿಯ ಮತ್ತೊಂದು ವಿಶೇಷವಾಗಿದೆ. ಪ್ರಭುಶಕ್ತಿ ದೇವತೆಯು ಪಾದರಿಹೂವಿನ ಬಣ್ಣದವಳಾಗಿದ್ದು ಶ್ವೇತಾಶ್ವರೂಢೆಯಾಗಿದ್ದಾಳೆ. ಕನಕಕಾಂತಿಯ ಮಂತ್ರಶಕ್ತಿ ಅಧಿದೇವತೆಯು ಮದ್ದಾನೆಯನ್ನೇರಿದ್ದಾಳೆ. ಉತ್ಸಾಹಶಕ್ತಿಯು ಸಿಂಧೂರವದನೆ, ಸುವರ್ಣದ ಮೈಕಾಂತಿಯ ಇವಳ ವಾಹನ ನರ್ತಿಸುವ ನವಿಲು. ರಾಜಕೀಯದಲ್ಲಿನ ಚತುರೋಪಾಯಗಳಾದ ಸಾಮ-ದಾನ-ಭೇದ-ದಂಡಗಳಲ್ಲಿ ಮೊದಲ ಎರಡು ಉಪಾಯಗಳಾದ

'ಸಾಮ' ಹಾಗೂ 'ದಾನ'ಗಳಿಗೆ ಸ್ತ್ರೀದೇವತೆಗಳು ಅಭಿಮಾನಿದೇವತೆಗಳು. ಆದರೆ ಭೇದ ಹಾಗೂ ದಂಡಗಳಿಗೆ ಪುರುಷದೇವತೆಗಳು ಅಭಿಮಾನಿಗಳು. ಮುಮ್ಮಡಿಯವರ ಈ ವರ್ಣನೆಗಳಿಗೆ ಕಾರಣಾಗಮ ಆಧಾರ.

ಅಷ್ಟಭೋಗನೀತಿಶಾಸ್ತ್ರದ ಪ್ರಕಾರ ಮಂತ್ರಶಾಸ್ತ್ರ, ಕಾವ್ಯಸ್ವರೂಪ, ಕಾಮಶಾಸ್ತ್ರ, ಶಕುನಶಾಸ್ತ್ರ, ಅಲಂಕಾರಶಾಸ್ತ್ರ, ಇಂದ್ರಜಾಲವೇ ಮೊದಲಾದ ವಿದ್ಯಾಪ್ರಕಾರಗಳ ಸ್ವರೂಪಾದಿಗಳನ್ನು ಸಂಬಂಧಿಸಿದ ಅಭಿಮಾನಿದೇವತೆಗಳೊಡನೆ ಪ್ರತಿಪಾದಿಸಲಾಗಿದೆ. ಅಲ್ಲದೆ ಭಾರತದಲ್ಲಿನ 108 ಬ್ರಹ್ಮಕ್ಷೇತ್ರಗಳ ಪಟ್ಟಿಯನ್ನು ಸಹ ನೀಡಲಾಗಿದೆ.

ಗಾಂಧರ್ವವೇದವೆನಿಸಿರುವ ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದಂತೆ 'ಬ್ರಹ್ಮನಿಧಿ'ಯಲ್ಲಿ ಉಪಯುಕ್ತ ಮಾಹಿತಿ ಇದ್ದು ತಮ್ಮ ಬಾಲ್ಯದಿಂದಲೂ ಸಂಗೀತಶಾಸ್ತ್ರದಲ್ಲಿ ಗಾಢವಾದ ಆಸಕ್ತಿಯನ್ನು ಹೊಂದಿದ್ದ ಮುಮ್ಮಡಿಯವರು ತಾವೇ ವಿರಚಿಸಿದ 'ಸ್ವರಚೂಡಾಮಣಿ' ಗ್ರಂಥದ ಆಧಾರದ ಮೇಲೆ ಸ್ವರಗಳ, ರಾಗಾದಿಗಳ, ತಾಳಗಳ ಸ್ವರೂಪವನ್ನು ವರ್ಣಚಿತ್ರಸಹಿತವಾಗಿ ವರ್ಣಿಸಿದ್ದಾರೆ. ಸ-ರಿ-ಗ-ಮ-ಪ-ಧ-ನಿ ಎಂಬ ಷಡ್ಜಾದಿ ಸಪ್ತಸ್ವರಗಳಲ್ಲಿಗೆಲ್ಲಾ ಪುರುಷ ಅಭಿಮಾನಿ ದೇವತೆಗಳು. ಸುಮಾರು ಮೂವತ್ತೆರಡು ರಾಗಗಳ ಸ್ವರೂಪವನ್ನು ಅಭಿಮಾನಿದೇವತೆಗಳ ರೂಪಾಕೃತಿಗಳ ಸಹಿತ ವರ್ಣಿಸಲಾಗಿದ್ದು ರಾಗಗಳಲ್ಲಿ ಸ್ತ್ರೀರಾಗಗಳೆಂದೂ, ಪುರುಷರಾಗಗಳೆಂದೂ ವಿಭಜಿಸಲಾಗಿದೆ. ಅಲ್ಲದೆ ಯಾವ ರಾಗಗಳು ಶೃಂಗಾರಾದಿ ಭಿನ್ನ ಭಿನ್ನ ರಸಗಳ ಅಭಿವ್ಯಕ್ತಿಗೆ ಪೂರಕವೆಂಬುದನ್ನೂ ಸಹ ಸೂಚಿಸಲಾಗಿದೆ. ಒಟ್ಟು ನೂರಹತ್ತು ತಾಳ ಪ್ರಕಾರಗಳನ್ನು ಸೂಚಿಸಲಾಗಿದ್ದು ಈ ಎಲ್ಲ ತಾಳಗಳಿಗೂ ಅಭಿಮಾನಿದೇವತೆಗಳು ಪುರುಷರೇ. ಸಂಗೀತಸಂಗ್ರಹವೆಂಬ ಗ್ರಂಥದನುಸಾರವಾಗಿ ಉತ್ತಮಗಾಯಕನ ಲಕ್ಷಣಗಳನ್ನೂ, ಅಧಮಗಾಯಕನ ಲಕ್ಷಣಗಳನ್ನೂ, ಭರತಶಾಸ್ತ್ರದಲ್ಲಿರುವಂತೆ ನಲವತ್ತು ಜನ ನಾಟ್ಯಾಚಾರ್ಯರುಗಳ ಹೆಸರನ್ನು ಸೂಚಿಸಲಾಗಿದೆ. ವಿವೇಕಚಿಂತಾಮಣಿ ಗ್ರಂಥರೀತ್ಯಾ ಇಪ್ಪತ್ತೆರಡು ತಂತೀವಾದ್ಯಪ್ರಭೇದಗಳನ್ನು ದೇವಗಾಯಕನಾದ ತುಂಬುರನ ಕಲಾವತೀ ವೀಣೆಯ ತಂತಿಗಳ ಹೆಸರುಗಳನ್ನು ನೀಡಲಾಗಿದೆ. ಬೃಹತೀ ಎಂಬುದು ವಿಶ್ವಾವಸುವಿನ ವೀಣೆ, ನಾರದಮಹರ್ಷಿಯ ಕೈಯಲ್ಲಿರುವ ವೀಣೆಯ ಹೆಸರು ಮಹತೀ, ಸರಸ್ವತಿಯ ವೀಣೆಯ ಹೆಸರು ಕಚ್ಛಪೀ.

ಸಂಗೀತಶಾಸ್ತ್ರದ ಮೂಲಬೇರುಗಳಿರುವುದು ಸಾಮವೇದದಲ್ಲಿ. ಸಾಮಗಾನ ಆಚಾರ್ಯರೆಂದು ಪ್ರಸಿದ್ಧರಾದವರು ರಾಣಾಯನಿ, ಸಾತ್ಯಮುಗ್ರಿ, ದುರ್ವಾಸ, ಭಾಗುರಿ, ಗೌರ್ಗುಂಡೀ, ಭಗವಾನ್ ಔಪಮನ್ಯು, ಕಾಲಾರ, ವರ್ಷಗಣ್ಯ, ಶಾಲಿಹೋತ್ರ, ಜೈಮಿನಿ, ಕುಥುಮಿನಿ, ಗೌರ್ಗುಲವಿ ಮೊದಲಾದ ಹದಿಮೂರು ಆಚಾರ್ಯರುಗಳು. ಒಟ್ಟಾರೆ ಸಂಗೀತಶಾಸ್ತ್ರದ ಬಗ್ಗೆ ವಿಸ್ತೃತ ವಿವರಣೆಯನ್ನು ಬ್ರಹ್ಮನಿಧಿಯಲ್ಲಿ ಕಾಣಬಹುದಾಗಿದೆ.

ಭರತಸಂಗ್ರಹಕ್ಕೆ ಅನುಗುಣವಾಗಿ ನಾಟ್ಯಕ್ಕೆ ಯೋಗ್ಯರಾದ ನರ್ತಕಿಯರ ಲಕ್ಷಣಗಳನ್ನೂ, ಯೋಗ್ಯರಲ್ಲದ ನರ್ತಕಿಯರ ಲಕ್ಷಣಗಳನ್ನೂ, ರಂಗಸ್ಥಳದಲ್ಲಿ ಪಾತ್ರಗಳ ಯೋಜನೆಯನ್ನೂ, ನಾಟ್ಯದ ಪ್ರಾರಂಭದಲ್ಲಿ ಸಮರ್ಪಿಸುವ ಪುಷ್ಪಾಂಜಲಿಯಲ್ಲಿ ಯಾವ ವಾರದಲ್ಲಿ ಯಾವ ಹೂವನ್ನು ಸಮರ್ಪಿಸಬೇಕೆಂಬ ನಿರ್ದೇಶನವೂ ಸಹ ಬ್ರಹ್ಮನಿಧಿಯಲ್ಲಿದೆ. ಅದರಂತೆ ಭಾನುವಾರ ದಾಸವಾಳದ ಹೂವನ್ನು, ಸೋಮವಾರ ಪುನ್ನಾಗಪುಷ್ಪವನ್ನೂ, ಮಂಗಳವಾರ ತುಂಬೆಹೂವನ್ನು, ಬುಧವಾರ ತಾಳೆಹೂವನ್ನು ಗುರುವಾರ ಸಂಪಿಗೆಯನ್ನು, ಶುಕ್ರವಾರ ಜಾಜಿಹೂವನ್ನು, ಶನಿವಾರ ಬಕುಳದ ಹೂವನ್ನು ನರ್ತಕಿಯು ಕೈಬೊಗಸೆಯಲ್ಲಿ

ಹಿಡಿದು ಪ್ರಾರ್ಥನೆಯ ನಂತರ ಎರಚಬೇಕು. ನಾಟ್ಯಾಂಗಕಾರ್ಯಗಳ ನಿರೂಪಣೆಯಲ್ಲಿ ಭರತಮುನಿಯ ನಾಟ್ಯಶಾಸ್ತ್ರವನ್ನು ಆಧರಿಸಿ ಇಪ್ಪತ್ತೊಂದು ನಾಟ್ಯದ ಅಂಗಗಳನ್ನು ಸೂಚಿಸಿರುವ ಮುಮ್ಮಡಿಯವರು ಸ್ವತಃ ರಚಿಸಿರುವ ಸಂಖ್ಯಾರತ್ನಕೋಶದ ವ್ಯಾಖ್ಯಾನವಾದ ಪ್ರಭಾವಲಿಯನ್ನು ಆಧರಿಸಿ ಹದಿಮೂರು ಬಗೆಯ ನಾಟ್ಯಚೇಷ್ಟೆ ಅರ್ಥಾತ್ ಅಂಗಚಲನೆಯನ್ನು ನಿರೂಪಿಸುತ್ತಾರೆ. ನರ್ತಕಿಯರು ಪ್ರದರ್ಶಿಸುವ ವಿವಿಧ ಹಸ್ತಮುದ್ರೆಗಳನ್ನು ನಂದಿಭರತಶಾಸ್ತ್ರದಿಂದಲೂ, ನಲವತ್ತನಾಲ್ಕು ಬಗೆಯ ಕಣ್ಣಿನಿಂದ ಪ್ರದರ್ಶಿಸುವ ಅಭಿನಯವನ್ನು ಭರತಸಂಗ್ರಹವನ್ನಾಧರಿಸಿಯೂ ನೀಡಲಾಗಿದೆ. ಸಂಗೀತಕ್ಕೂ ನಾಟ್ಯಕ್ಕೂ ಸಂಬಂಧಿಸಿದಂತೆ ಹಲವಾರು ಕುತೂಹಲಕಾರಿವಿಷಯಗಳ ನಿರೂಪಣೆ ಇದ್ದು ಅತಿವಿಸ್ತರಭಯದಿಂದ ಅವೆಲ್ಲವನ್ನೂ ಇಲ್ಲಿ ಕೈಬಿಡಲಾಗಿದೆ.

ನಾಟಕಲಕ್ಷಣವನ್ನು ಸಹ ಸಾಂದರ್ಭಿಕವಾಗಿ ನೀಡಲಾಗಿದ್ದು ಮುಖಸಂಧಿ, ಪ್ರತಿಮುಖಸಂಧಿ, ಗರ್ಭಸಂಧಿ, ವಿಮರ್ಶಸಂಧಿ, ನಿರ್ವಹಣಸಂಧಿಗಳನ್ನು ಅವುಗಳ ಅಂಗಸಹಿತ ನಿರೂಪಿಸಲಾಗಿದೆ. ಮಹಾಕಾವ್ಯಲಕ್ಷಣಗಳು ಶೃಂಗಾರಾದಿ ನವರಸಗಳನ್ನು ಸ್ಥಾಯಿಭಾವಗಳ ಸಹಿತ, ನವರಸಗಳಿಗೆ ಸಂಬಂಧಿಸಿದ ವ್ಯಭಿಚಾರಿಭಾವಗಳನ್ನು ಶಿಂಗಭೂಪಾಲೀಯನ ರಸಾರ್ಣವಸುಧಾಕರದಲ್ಲಿರುವಂತೆ ನೀಡಲಾಗಿದೆ.

ಕಕ್ಕೋಲನ ರತಿರಹಸ್ಯವೆಂಬ ಗ್ರಂಥವನ್ನಾಧರಿಸಿ ಸ್ತ್ರೀಯರ ಪುರುಷರ ಪ್ರಭೇದಗಳನ್ನು ನೀಡಲಾಗಿದ್ದು ಕಾವ್ಯಗಳಲ್ಲಿ ಬರುವ ಧೀರೋದಾತ್ತ, ಧೀರೋದ್ಧತ, ಧೀರಲಲಿತ, ಧೀರಶಾಂತರೆಂಬ ನಾಲ್ಕು ವಿಧದ ನಾಯಕರುಗಳನ್ನು, ಎಂಟುವಿಧದ ನಾಯಿಕೆಯರುಗಳ ಲಕ್ಷಣಗಳನ್ನು ನೀಡಲಾಗಿದೆ. ಉಪಮಾದಿ ನೂರು ಬಗೆಯ ಅರ್ಥಾಲಂಕಾರಗಳನ್ನು ಸೂಚಿಸಿರುವ ಮುಮ್ಮಡಿಯವರು ಛಂದಶ್ಶಾಸ್ತ್ರವನ್ನೂ ಸಹ ಪರಿಚಯಿಸುತ್ತಾ ಎಲ್ಲಾ ವೃತ್ತಗಳಿಗೂ ಮೂಲಭೂತವಾದ ಇಪ್ಪತ್ತಾರು ಛಂದಸ್ಸುಗಳನ್ನು ಸೂಚಿಸಿದ್ದಾರೆ. ಅಕ್ಷರ ಛಂದಸ್ಸಿನ, ಮಾತ್ರಾಛಂದಸ್ಸಿನ ಉಪಭೇದಗಳನ್ನೂ ಸಹ ನೀಡಲಾಗಿದೆ.

ಶ್ಲೋಕಸಂಖ್ಯೆ 1104 ರಿಂದ 1172ರವರೆಗೂ ಒಟ್ಟು 69 ಶ್ಲೋಕಗಳಲ್ಲಿ ಇಡೀ ಬ್ರಹ್ಮನಿಧಿಯಲ್ಲಿ ಬರುವ ಒಟ್ಟು ವರ್ಣಚಿತ್ರಗಳ ಹಾಗೂ ಬ್ರಹ್ಮನಿಧಿಯಲ್ಲಿ ಉಲ್ಲೇಖಿಸಲಾಗಿರುವ ವಿವಿಧ ವಿಷಯಗಳ ಒಂದು ಪಟ್ಟಿಯನ್ನೇ ನೀಡಲಾಗಿದ್ದು, ಸಮಗ್ರಸಂಪುಟದ ವಿಹಂಗಮನೋಟವನ್ನು ಈ 69 ಶ್ಲೋಕಗಳಲ್ಲಿ ಸೆರೆಹಿಡಿಯಲಾಗಿದೆ. ಬ್ರಹ್ಮನಿಧಿಯಲ್ಲಿ ಬರುವ ಹಿಂದೂ ಧಾರ್ಮಿಕ ಜಗತ್ತಿನ ಹಲವಾರು ವಿಚಾರಗಳು, ಸಾಹಿತ್ಯಪ್ರಕಾರಗಳಿಗೆ ಸಂಬಂಧಿಸಿದ ಹೆಸರುಗಳು ಇಂದಿನ ಭಾರತೀಯ ಆಡಳಿತ ಸೇವೆಗೆ ಸಂಬಂಧಿಸಿದ ಸ್ಪರ್ಧಾತ್ಮಕ ಪರೀಕ್ಷೆಗಳಾದ I.A.S. ಹಾಗೂ K.A.S. ಪರೀಕ್ಷೆಯ ಅಭ್ಯರ್ಥಿಗಳಿಗೆ ಸಿದ್ಧಪಡಿಸಲಾಗಿರುವ ಪಠ್ಯಗ್ರಂಥಗಳಲ್ಲಿಯೂ ಸಹ ಪ್ರಶ್ನೋತ್ತರಗಳ ರೂಪದಲ್ಲಿರುವುದು ಗಮನಾರ್ಹವೇ ಸರಿ. ಒಟ್ಟಿನಲ್ಲಿ ಬ್ರಹ್ಮನಿಧಿಯು ಹಿಂದೂ ಧಾರ್ಮಿಕ ಜ್ಞಾನದ ಕೈಪಿಡಿಯಾಗಿದೆ.

ಬ್ರಹ್ಮನಿಧಿಯ ರಚನೆಗಳಲ್ಲಿ ಸಾಕಷ್ಟು ಸಂಸ್ಕೃತಮೂಲಗ್ರಂಥಗಳನ್ನು ಮುಮ್ಮಡಿಯವರು ಅವಲೋಕಿಸಿರುವುದನ್ನು ಕೃತಿಗಳ ಹೆಸರಿನ ಸಹಿತ ಆಕರಶ್ಲೋಕಗಳ ಉಲ್ಲೇಖಗಳಲ್ಲಿ ಕಾಣಬಹುದಾಗಿದೆ. ಸಂಸ್ಕೃತಮೂಲಗ್ರಂಥಗಳಲ್ಲಿ ಪ್ರಮುಖವಾದವು ಶೈವಾಗಮ, ನೃಹಿಂಸಪ್ರಾಸಾದ, ಸ್ಕಂದಪುರಾಣ, ಪದ್ಮಪುರಾಣ, ಮತ್ಸ್ಯಪುರಾಣ, ಸಿದ್ಧಾಂತಶೇಖರ,

ಭಾಗವತ, ಪ್ರಪಂಚಸಾರ, ಕಾರಣಾಗಮ, ಭಾಟ್ಟಭಾಸ್ಕರೀಯ, ಮಯೂಖ, ಅಗ್ನಿಪುರಾಣ, ವಿಷ್ಣುಪುರಾಣ, ಮಂತ್ರದೇವತಾಪ್ರಕಾಶಿಕಾ, ಪಾಂಚರಾತ್ರ, ಹೇಮಾದ್ರಿ, ಮಂತ್ರರತ್ನಾಕರ, ಶುಕಸಪ್ತತಿ, ಭರತಶಾಸ್ತ್ರಸಂಗ್ರಹ, ಸಂಗೀತರತ್ನಾಕರ, ಅನಂಗರಂಗ, ರತಿರಹಸ್ಯ, ವಾತ್ಸ್ಯಾಯನಮುನಿಯ ಕಾಮಸೂತ್ರ, ಅಭಿಲಷಿತಾರ್ಥಚಿಂತಾಮಣಿ, ಶಿವತತ್ತ್ವರತ್ನಾಕರ - ಹೀಗೆ ವೇದಾದಿಗಳಿಂದ ಆರಂಭಿಸಿ ತಮ್ಮ ಕಾಲದವರೆಗಿನ ಸಮಗ್ರ ಸಂಸ್ಕೃತಕೃತಿಗಳನ್ನು ಮುಮ್ಮಡಿಯವರು ಪರಿಶೀಲಿಸಿರುತ್ತಾರೆ. ಅಭಿಲಷಿತಾರ್ಥಚಿಂತಾಮಣಿ (ಅಥವಾ ಮಾನಸೋಲ್ಲಾಸ) ಹಾಗೂ ಶಿವತತ್ತ್ವರತ್ನಾಕರಗಳಿಗಿಂತಲೂ ಪ್ರಶಸ್ತಕೃತಿಯೆನಿಸುವ ತಮ್ಮ ಕೃತಿಗೆ ಮುಮ್ಮಡಿ ಕೃಷ್ಣರಾಜ ಒಡೆಯರ್ 'ಶ್ರೀತತ್ತ್ವನಿಧಿ'ಯೆಂದು ನೀಡಿರುವ ಹೆಸರು ಔಚಿತ್ಯಪೂರ್ಣವಾಗಿದೆ.

ಶ್ರೀತತ್ತ್ವನಿಧಿಯ 'ಬ್ರಹ್ಮನಿಧಿ' ಸಂಪುಟದ ಪ್ರಕಟಣೆಯಲ್ಲಿ ಸಂಸ್ಥೆಯ ಹಿರಿಯ ವಿದ್ವಾಂಸರುಗಳ ಇತರ ಉದ್ಯೋಗಿಗಳ ಪರಿಶ್ರಮ ಪ್ರೋತ್ಸಾಹ ನಾನಾರೀತಿಯಲ್ಲಿ ಲಭಿಸಿದೆ. ಅವರೆಲ್ಲರ ಸಹಕಾರದಿಂದ 1954ರಲ್ಲಿಯೇ ಪ್ರಾಚ್ಯವಿದ್ಯಾ ಸಂಶೋಧನಾಲಯವನ್ನು ಸೇರಿದ ನವಸಂಪುಟಗಳ ಶ್ರೀತತ್ತ್ವನಿಧಿಯ ಹಸ್ತಪ್ರತಿಯಲ್ಲಿ ಮೊದಲ ಮೂರು ಸಂಪುಟಗಳು ಪ್ರಕಟಣೆಗೊಳ್ಳುವಲ್ಲಿ ಈಗಾಗಲೇ ನಿವೃತ್ತರಾಗಿರುವ ಸಂಸ್ಥೆಯ ಹಿರಿಯ ವಿದ್ವಾಂಸರುಗಳ ಪರಿಶ್ರಮ ಸಾಕಷ್ಟಿದೆ. ಶ್ರೀತತ್ತ್ವನಿಧಿಯ ಪ್ರಥಮಸಂಪುಟ ಶಕ್ತಿನಿಧಿಯ (1997) ಸಂಪಾದಕರ ನುಡಿಯಲ್ಲಿನ ಹಲವಾರು ವಿಷಯಗಳನ್ನು ಅನಿವಾರ್ಯವಾಗಿ ಬ್ರಹ್ಮನಿಧಿಯಲ್ಲಿಯೂ ಪ್ರಸ್ತಾಪಿಸಲಾಗಿದೆ.

ಮೈಸೂರು

**ಡಾ. (ಶ್ರೀಮತಿ) ಹೆಚ್.ಪಿ.ದೇವಕಿ**
ನಿರ್ದೇಶಕರು
ಪ್ರಾಚ್ಯವಿದ್ಯಾಸಂಶೋಧನಾಲಯ
ಮೈಸೂರು ವಿಶ್ವವಿದ್ಯಾನಿಲಯ

# ನವರತ್ನಪ್ರಶಸ್ತಿ ಶಾಸನ



**ಆದರಣ : ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನ**
**ಅಂಬಾವಿಲಾಸ ಅರಮನೆಯ ಆವರಣ, ಮೈಸೂರು**

# ನವರತ್ನಪ್ರಶಸ್ತಿಶಾಸನ

## ಶ್ರೀಮನ್ಮಹಾರಾಜ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರಿಗೆ

### ನೀಡಿದಂತಹ ಒಂಭತ್ತು ಸೇವಾರತ್ನಗಳು

1. ॥ ಶ್ರೀ ॥ ಲಕ್ಷ್ಮೀಪ್ರದಾನಸಮಯೇ ನವವಿದ್ರುಮಾಭಾಂ ವಿದ್ಯಾಪ್ರದಾನಸಮಯೇ ಶರದಿಂದುಶುಭ್ರಾಂ ವಿದ್ವೇಷಿವರ್ಗ ವಿಜಯೇ ಹರಿನೀಲ...
2. ವರ್ಣಾಮಂಬಾಂ ತ್ರಿಲೋಕಜನನೀಮಜನಿಂ ಪ್ರಪದ್ಯೇ ॥ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರ್ಷಂಗಳು 1750 ಸಂ...
3. ದ ವರ್ತಮಾನವಾದ ಸರ್ವಧಾರಿ ನಾಮ ಸಂವತ್ಸರದ ಫಾಲ್ಗುಣ ಶುದ್ಧ 10 ಸ್ಥಿರವಾರದಲ್ಲು ಆತ್ರೇಯಸ ಗೋತ್ರ ಆಶ್ವಲಾಯನಸೂತ್ರರ್ರ..
4. ಕ್ಯಾಖಾನುವರ್ತಿಗಳಾದ ಶ್ರೀಮದ್ರಾಜಾಧಿರಾಜ ಮಹಾರಾಜ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನಿ ಕೆಂಪನಂಜ...
5. ಮಾಂಬಾಗರ್ಭ–ಸುಧಾಂಬುಧಿರಾಕಾಸುಧಾಕರಾಯಮಾನ ಶ್ರೀ ಚಾಮುಂಡಿಕಾಂಬಾ ವರಪ್ರಸಾದೊದ್ಭವರಾದ...
6. ಶ್ರೀಮತ್ಸಮಸ್ತ ಭೂಮಂಡಲಮಂಡನಾಯಮಾನ ನಿಖಿಲದೇಶಾವತಂಸ ಕರ್ನಾಟಕ–ಜನಪದ–ಸಂಪದಧಿಷ್ಠಾನ ಭೂ...
7. ತ ಶ್ರೀಮನ್ಮಹೀಶೂರ–ಮಹಾಸಂಸ್ಥಾನ–ಮಧ್ಯ ದೇದೀಪ್ಯಮಾನಾವಿಕಲಕಲಾನಿಧಿ ಕುಲಕ್ರಮಾಗತರಾಜ ಕ್ಷಿತಿಪಾಲ ಪ್ರಮುಖ...
8. ನಿಖಿಲನಿಜ–ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯ–ರತ್ನಸಿಂಹಾಸನಾರೂಢ ಶ್ರೀಮದ್ರಾಜಾಧಿ...
9. ರಾಜ ರಾಜಪರಮೇಶ್ವರ ಪ್ರೌಢಪ್ರತಾಪಾಪ್ರತಿಮವೀರ ನರಪತಿ–ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲಪಯಃಪಾರಾ...
10. ವಾರಕಲಾನಿಧಿ–ಶಂಖ–ಚಕ್ರಾಂಕುಶ–ಕುಠಾರ–ಮಕರ–ಮತ್ಸ್ಯ–ಶರಭ–ಸಾಳ–ಗಂಡಭೇರುಂಡ–ಧರಣೀ–ವರಾಹ–ಹನುಮದ್ಗರುಡ–ಕಂಠೀ...
11. ರವಾದ್ಯನೇಕ ಬಿರುದಾಂಕಿತ ಶ್ರೀ ಕೃಷ್ಣರಾಜ ವಡಯರವರು ನಂಮ ಕುಲದೇವರಾದ ಶ್ರೀ ಚಾಮುಂಡೇಶ್ವರೀ ಪ್ರೀತ್ಯರ್ಥಮಾಗಿ...
12. ನವರತ್ನಗಳೆಂಬ ಹೆಸರಿನಿಂದ ವಂಭತ್ತು ಬಗೆಯಾಗಿ ಮಾಡಿದ ಸೇವೆಗಳಲ್ಲಿ । ಮೇಲುಕೋಟೆ । ನಂಜನಗೂಡು । ಚಾಮರಾಜನ...
13. ಗರ । ಮಹಿಶೂರು ಮುಂತಾದ ಸ್ಥಲಂಗಳಲ್ಲಿ ದೇವರಿಗೆ ಸಮರ್ಪಿಶಿದ ರತ್ನಮಯಂಗಳಾದ ಕೃಷ್ಣರಾಜ ಮುಡಿಗಳೆಂಬ ಭೂಷಾರ...

14. ತ್ನ । 1 । ಚಾಮರಾಜನಗರ ಮೊದಲಾದ ನಗರಪುರಗ್ರಾಮಾದಿ ದೇಶರತ್ನ । 1 । ಚಾಮರಾಜನಗರದ ಚಾಮರಾಜೇಶ್ವರಸ್ವಾಮಿ ದೇ...

15. ವಸ್ಥಾನ ನಾರಾಯಣಸ್ವಾಮೀ ದೇವಸ್ಥಾನ । ಮಹಿಶೂರು ಪ್ರಸಂನಕೃಷ್ಣಸ್ವಾಮಿ ದೇವಸ್ಥಾನಗಳು ಮುಂತಾದ ಸೇವಾರತ್ನ । 1 । ನಿಜ...

16. ನಾಮಾಂಕಿತದಿಂದ ರಚಿಶಿದ ಕೃಷ್ಣರಾಜೇಂದ್ರಪುರ ಅಗ್ರಹಾರ ಮೊದಲಾಗಿ ಸೊಬಸ್ಕರ ಗೃಹ ಸಹಿತಂಗಳಾದ ಅನೇಕ ಅಗ್ರಹಾ...

17. ರ ನಿರ್ಮಾಣಪೂರ್ವಕ ಗ್ರಾಮಭೂದಾನವೆಂಬ ದಾನರತ್ನ । 1 । ನಮ್ಮ ಕುಲದೇವರಾದ ಬೆಟ್ಟದ ಶ್ರೀ ಚಾಮುಂಡೇಶ್ವರೀ ಗೋಪುರ ಯಿಷ್ಟದೇವರಾದ ನಂ...

18. ಜನಗೂಡು ಶ್ರೀಕಂಠೇಶ್ವರಸ್ವಾಮೀ ಗೋಪುರ ಚಾಮರಾಜನಗರದ ಚಾಮರಾಜೇಶ್ವರಸ್ವಾಮೀ ಗೋಪುರ ಮಹಿಶೂರ ಲಕ್ಷ್ಮೀರಮಣಸ್ವಾಮಿ ಗೋ...

19. ಪುರಗಳು ಮುಂತಾದ ಪ್ರತಿಷ್ಠಾರತ್ನ । 1 । ಕಾವೇರಿಯಾದಿಗಳೊಳ್ ಕೃಷ್ಣರಾಜಕಟ್ಟೆ ಪಶ್ಚಿಮವಾಹಿನಿಯಲ್ಲಿ ಕೃಷ್ಣರಾಜಸೋಪಾನ ಮುಂತಾದ ವು...

20. ಪಕಾರರತ್ನ । 1 । ಕಾಶಿಜಗಂನಾಥ ಶ್ರೀರಂಗ ಕಂಚಿ ತಿರುಪತಿ ಮೇಲುಕೋಟೆ ಮೊದಲಾದ ದಿವ್ಯಕ್ಷೇತ್ರಗಳಲ್ಲಿ ಮಾಡಿಶಿ ಯಿರುವ ಅನ್ನದಾನ ಸತ್ರಂಗ...

21. ಳೆಂಬ ಧರ್ಮರತ್ನ । 1 । ಕೃಷ್ಣರಾಜವರಹ ಕೃಷ್ಣರಾಜಹಣ ಮುಂತಾದ ಸುವರ್ಣ ರಜತದ ನಾಣ್ಯಗಳೆಂಬ ಕೀರ್ತಿರತ್ನ । 1 । ಶ್ರೀಭಾಗವತ ಅಧ್ಯಾ...

22. ತ್ಮರಾಮಾಯಣ ಮೊದಲಾದ ಪುರಾಣೇತಿಹಾಸಂಗಳಿಗೆ ಕರ್ನಾಟಕ ಭಾಷಾವ್ಯಾಖ್ಯಾನಗಳು ಸೌಗಂಧಿಕಾಪರಿಣಯಾದಿ ಕಾವ್ಯಪ್ರಬಂಧಂಗಳೆಂ...

23. ಬ ಸಾರಸ್ವತರತ್ನ । 1 । ಯೀ ವಂಭತ್ತು ಬಗೆಯಾದ ರತ್ನಂಗಳ ನಿರ್ಮಾಣವಂಗೈದು ಯಿದರೊಳ್ ಸೇವಾರತ್ನಕೆ ವಳಿತವಾದ ಮಹಿಶೂರು ಪ್ರ...

24. ಸನ್ನ ಕೃಷ್ಣಸ್ವಾಮೀ ದೇವರಸನ್ನಿಧಿಗೆ ಬರೆಶಿ ವಪ್ಪಿಶಿದ ಶಿಲಾಶಾಸನ ಕ್ರಮವೆಂತೆಂದರೆ । ಅರಮನೆಗೆ ಬಲಭಾಗದೊಳ್ ವೇದಶೃಂಗಸಹಿತ ಪಂ...

25. ಚೊಪನಿಷನ್ನಾಮಕವಾದ ಸ್ವರ್ಣ–ಕಲಶಯುಕ್ತ ವಿಮಾನವುಳ್ಳ ದೇವಾಲಯವಂ ಮಹಾದ್ವಾರ ಪ್ರಾಕಾರಮಂಟಪ ಸಹಿತಮಾಗಿ ನಿರ್ಮಿ...

26. ಶಿ ರುಕ್ಮಿಣೀ–ಸತ್ಯಭಾಮಾಸಮೇತ ಪ್ರಸನ್ನ ಕೃಷ್ಣಸ್ವಾಮೀಯವರಂ ಪಂಚಭೇದಯುಕ್ತಮಾಗಿ ಪ್ರತಿಷ್ಠೆಯಂಗೈದು ಮತ್ತೂ ಶ್ರೀರಂಗನಾಥ...

27. ವೆಂಕಟರಮಣಸ್ವಾಮಿ ವರದರಾಜರು ಚಲುವರಾಯಸ್ವಾಮಿ ಮೊದಲಾದ ಯೀ ನಾಲ್ಕು ದಿವ್ಯದೇಶದ ಭಗವದ್ವಿಗ್ರಹಗಳಂ ಮತ್ತೂ ಲ...

28. ಕ್ಷ್ಮೀನೃಸಿಂಹಸ್ವಾಮಿ ಶ್ರೀ ರಾಮಸ್ವಾಮಿ ವೊದಲಾದ ದಿವ್ಯದೇಶದ ಭಗವದ್ವಿಗ್ರಹಗಳಂ ಮತ್ತಂ ರಾಮಾನುಜಾಚಾರ್ಯರು ಮೊದಲಾದ ಪೂರ್ವಾಚಾರ್ಯ...

29. ರ ವಿಗ್ರಹಗಳಂ ಯೀ ವಿಶಿಷ್ಟ ವಿಗ್ರಹಂಗಳಿಗೆ ವುತ್ಸವವಿಗ್ರಹಗಳು ಸಹಿತವಾಗಿ ಪ್ರತಿಷ್ಠೆಯಂಗೈದು ಮತ್ತಂ ಕಾಂಚಿನಗರದಿಂದ ಪೂರ್ವದಲ್ಲಿ ತೆರಕ...

30. ಣಾಂಬಿಗೆರಾಯ ಮಾಡಿದ್ದ ಪೆರಂದೇವಿ ಅಂಮನವರಂ ಯೀ ದೇವಸ್ಥಾನಕ್ಕೆ ಬಿಜ ಮಾಡಿಶಿ ಪ್ರತಿಷ್ಠೆಯಂಗೈದು ಮತ್ತಂ ನಂಮ ಸಂಸ್ಥಾನಕ್ಕೆ ದಿವ್ಯದೇಶವಾ...

31. ದ ಮೇಲುಕೋಟೆ ಶ್ರೀನಾರಾಯಣಸ್ವಾಮಿ ಸನ್ನಿಧಿಯಿಂದ ಶ್ರೀ ಶಠಗೋಪವಂ ಬಿಜ ಮಾಡಿಶಿ ಯೀ ದೇವರುಗಳ ನಿತ್ಯ ಪಡಿತರ ದೀಪಾರಾಧನ ನಿತ್ಯೋತ್ಸವ ಪ...

32. ಕ್ಷೋತ್ಸವ ಮಾಸೋತ್ಸವ ಸಂವತ್ಸರೋತ್ಸವ ರಥೋತ್ಸವ ಮುಂತಾದ ಸಕಲೋತ್ಸವಂಗಳಂ ಧರ್ಮಾಧ್ಯಯನ ರಾಮಾನುಜಕೂಟ ಮುಂತಾದ ಸೇವೆಗಳು...

33. ಸಾರೋದ್ಧಾರವಾಗಿ ನಡೆಯತಕ್ಕ ಬಗ್ಯೆ ವರ್ಷಂಪ್ರತಿಯಲ್ಲು ಕಂಠೀರಾಯಿ (5000) ಯ್ಯೆದು ಸಾವಿರ ವರಹ ತಸ್ತೀಕು ನಿಷ್ಕರ್ಷೆ ಮಾಡಿ ಯಿದಕ್ಕೆ ಮ್ಯೆ...

34. ಶೂರ ಅಠ್ಠವಣೆ ಸುಬೇದಾರೆನ ಹೆಸರಿಗೆ ನಿರೂಪಕಟ್ಲೆ ಮಾಡಿಶಿ ಯೀ ಸೇವೆಗಳು ಆಚಂದ್ರಾರ್ಕವಾಗಿ ನಡೆಯುವಂತೆ ಪ್ರಾರ್ಥಿಸುತ್ತಾ ಶೇಷತೀ...

35. ರ್ಥಪ್ರಸಾದಗಳಂನ್ನು ಸ್ವೀಕರಿಸುವದಕ್ಯೋಸ್ಕರ ಸನ್ನಿಧಿಯಲ್ಲಿ ನಂಮ ಲಕ್ಷ್ಮೀವಿಲಾಸದ ಪಟ್ಟಮಹಿಷಿ ಕೃಷ್ಣವಿಲಾಸದ ಧರ್ಮಪತ್ನಿ ರಮಾವಿಲಾಸದ...

36. ಧರ್ಮಪತ್ನಿ ಸಮೇತವಾದ ನಂಮ ರೂಪುಭಕ್ತಪ್ರತಿಮೆಗಳಂ ಪ್ರತಿಷ್ಠಿಶಿ ಶ್ರೀಯವರ ಸನ್ನಿಧಿಗೆ ಬರೆಶಿ ವಪ್ಪಿಶಿದ ಶ್ರೀಕರ ಶಿಲಾಶಾಸನ ॥

37. ಮದ್ವಂಶಜಾಃ ಪರಮಹೀಪತಿವಂಶಜಾ ವಾ ಯೇ ಭೂಮಿಪಾಶ್ರಿತತಮುಜ್ವಲಧರ್ಮಚಿತ್ತಾಃ । ಮದ್ಧರ್ಮಮೇವ ಸತತಂ ಪರಿಪಾಲಯಂ...

38. ತಿ ತತ್ಪಾದಪದ್ಮಯುಗಳಂ ಶಿರಸಾ ನಮಾಮಿ ॥

ಲಿಪ್ಯಂತರಕಾರ್ಯ

**ದಿದ್ದಿಗಿ ವಂಶಿ ಕೃಷ್ಣ** ಎಂ.ಎ.,

ಸಹಾಯಕ ಸಂಶೋಧಕರು ಶ್ರೇಣಿ-2, ಪ್ರಾ.ವಿ.ಸಂ.

## ಅಥ ಉತ್ಕೃತಿಛಂದಸಿ

ಅಪದಾಹೋ ನವಲತಾ ಸ್ಯಾದ್ಭುಜಂಗವಿಜೃಂಭಿತಮ್ |
ಇತ್ಯಾದಿಕಾನಿ ವೃತ್ತಾನಿ ಷಡ್ವಿಂಶೋತ್ಕೃತಿಛಂದಸಿ || 1091
ತಂತ್ರಶ್ರೀ೬೬೧೦೮೮೬೪ಸಿದ್ಧಿಪಂಕ್ತಿಶ್ಚ ಚಕ್ರವರ್ತಿಮಿತಾನಿ ಹಿ || ೨೬ || 1091A
ಸರ್ವಛಂದಸ್ಸು ಸಂಭೂತವೃತ್ತಾನ್ಯಾಹತ್ಯ ಸಂಖ್ಯಯಾ |
ಛಂದಃ ೧೩೪೨೧೬೬೨೬ಸಪ್ತ್ಯಶ್ವಭೂಪಾದವಾರ್ಧಿವಿಶ್ವಮಿತಾನಿ ಹಿ || 1092
ವೃತ್ತಾನ್ಯೇವಮನೇಕಾನಿ ಛಂದಸ್ಸ್ವೇಷೂದ್ಭವಂತಿ ಹಿ |
ಗಣವಿನ್ಯಾಸಭೇದೇನ ವೃತ್ತಾನಿ ಸ್ಯುಃ ಪೃಥಕ್ ಪೃಥಕ್ || 1093
ಭವೇದಕ್ಷರವೃತ್ತೇಷು ಗಣ ಏಕೋಽಕ್ಷರತ್ರಯಮ್ |
ಯರತಾಭಜಸಾಮೋನ ಇತ್ಯೇಷ್ವಷ್ಟೌ ಗಣಾಸ್ಸ್ಮೃತಾಃ || 1094
ಆದಿಮಧ್ಯಾವಸಾನೇಷು ಯರತಾ ಲಘುಸಂಯುತಾಃ |
ಗುರುಯುಕ್ತಾಸ್ತು ಭಜಸಾಸ್ಸರ್ವಗುಸ್ಸರ್ವಲೋ ಮನೌ || 1095
ಏಭ್ಯೈಸ್ತು ವಾಙ್ಮಯಂ ವ್ಯಾಪ್ತಂ ತ್ರೈಲೋಕ್ಯಮಿವ ವಿಷ್ಣುನಾ |
ಮಾತ್ರಾವೃತ್ತಾನಿ ತಾನಿ ಸ್ಯುರಾರ್ಯಾವೃತ್ತಾನಿ ಯಾನಿ ಹಿ || 1096
186B ತೇಷಾಮಶೀತಿರ್ಭೇದಾಸ್ತು ಛಂದೋರತ್ನಹಲಾಯುಧೇ |
ನಾಮಲಕ್ಷಣದೃಷ್ಟಾಂತೈರ್ಮುಖ್ಯಭೂತಾಃ ಪ್ರದರ್ಶಿತಾಃ || 1097
ಮಾತ್ರಾವೃತ್ತೇಷು ಸರ್ವತ್ರ ಚತುರ್ಮಾತ್ರಾಗಣಾಸ್ಸ್ಮೃತಾಃ |
ತೇಽಪಿ ಪಂಚೈವ ತತ್ರ ಸ್ಯುಃ ಭಜಸಾನೋಮ ಇತ್ಯಮೀ || 1098
ಭಜಸಾಗುರುಯುಕ್ತಾ ಸ್ಯುಃ ಆದಿಮಧ್ಯಾಂತತಃ ಕ್ರಮಾತ್ |
ಚತುರ್ಲಘುರ್ನೋ ವಿಜ್ಞೇಯೋ ದ್ವಿಗುರುರ್ಮಗಣಸ್ಸ್ಮೃತಃ || 1099
ಪೂರ್ವವದ್ಗಣವಿನ್ಯಾಸಭೇದೇನ ಸ್ಯುರನೇಕಧಾ |
ಮಾತ್ರಾವೃತ್ತಾನಿ ಶಸ್ತಾನಿ ತತ್ತಲ್ಲಕ್ಷಣಭಾಂಜಿ ಹಿ || 1100
ಏವಂ ಸಂಗ್ರಹತಶ್ಛಂದೋವೃತ್ತಾನಾಂ ಕ್ರಮ ಈರಿತಃ |
ಛಂದಶ್ಶಾಸ್ತ್ರೇ ವಿಶೇಷೇಣ ತತ್ಸರ್ವಸ್ಸಂ ನಿರೂಪಿತಮ್ || 1101
ಗ್ರಂಥವಿಸ್ತರಭೀತ್ಯಾ ತು ನಾಸ್ಮಾಭಿಸ್ತತ್ಪ್ರಪಂಚಿತಮ್ || 1101A

ಗದ್ಯಮ್ - ಬಂಧುರತರನಿಜಭೇರೀದಂಧಣರವಸಂಧುಕ್ಷಿತಾಂಧ್ಯಶಿಥಿಲಹೃದ್ಗ್ರಂಥಿಬಂಧ ವಿತರಣಾನುಸಂಧಾನಾಂಧಕಮದನಸಿಂಧುಜಾಕಮನಸಿತಪತಗಸ್ಯೆಂಧವಸುಧಾಂಧೋಧವ ಗಂಧವಾಹಬಂಧುಕಾಲಕಂಧರಾನುಬಂಧಿಗಂಧವಾಹಸಿಂಧುರಶಿರೋಧಿಶರಸ್ತನಂಧಯ ಪ್ರಮುಖಸುರಧೂರ್ವಹಗಂಧರ್ವಮುಖಗರ್ವಗಂಧಸರ್ವಂಕಷಶುಂಭನಿಶುಂಭನಿರ್ಗಂಧ ನೇಂಧಾನಚಂಡಿಮಶ್ರೀಮುಚ್ಚಾಮುಂಡಿಕಾಂಬಾಚರಣಪುಂಡರೀಕಪುಷ್ಪಗಂಧಯತಾಕಲಿತ ಸಂಸ್ಕೃತಾಂಧ್ರಕರ್ನಾಟಾದ್ಯಖಿಲಭಾಷಾವಿಶೇಷಸಾಮ್ರಾಜ್ಯಪ್ರಾಜ್ಯಪ್ರತಿದಿನಪ್ರಬಂಧನಿಬಂಧನ ಧುರಂಧರಾಕ್ಷುದ್ರತರಸುರಕ್ಷೋಭ-





20

ದಕ್ಷೋನ್ನತರಕ್ಷೋವರಶಿಕ್ಷಾವಿಚಕ್ಷಣಸಹಸ್ರಾಕ್ಷಪಕ್ಷಿಧ್ವಜ ಮಲ್ಲಿಕಾಕ್ಷಕಲಭಾಶುಶುಕ್ಷಣಿಯಕ್ಷೇಶ-
ಮುಖಸುರಾಧ್ಯಕ್ಷರಕ್ಷಕರಗರನಗರತ್ರೀಕ್ಷಣಸಾಕ್ಷಾತ್ಕಟಾಕ್ಷವೀಕ್ಷಾನುಕ್ಷಣಸಂಧುಕ್ಷಿತಪ್ರೇಕ್ಷೈಕ-
ಲಕ್ಷಣಪ್ರತಿಪಕ್ಷಕುಕ್ಷಿತ್ವಕ್ಷಕಕ್ಷದಹನಕೌಕ್ಷೇಯಕೋದ್ದಾಮವಿಭವಶ್ರೀಮಚ್ಚಾಮರಾಜಕ್ಷಮಾ-
ಖುಭುಕ್ಷತನೂಜಸಾಹಿತೀಭೋಜರಾಜಾಧಿರಾಜರಾಜಪರಮೇಶ್ವರಾಪ್ರತಿಮಪ್ರಭಾವಭಾವಭವ-
ಪರಿಭವಾಭಂಗಮಂಗಲಾಂಗಸೌಭಾಗ್ಯಭಾಗ್ಯರಮಾದಿಮನಿದಾನದಾನಕರ್ಣಸೌವರ್ಣಧರಾವರಾಹ-
ಶರಭಶಂಖಚಕ್ರಗಂಡಭೇರುಂಡ ಗಂಡರಗಂಡಾದ್ಯುದ್ದಂಡಬಿರುದಮಂಡಲೀಮಂಡನಕುಂಡಲೀ-
ಮಂಡಲಾಖಂಡಲಾಖರ್ವಗರ್ವಖಂಡನವಾಕ್ಪಾಂಡಿತೀಶೌಂಡಪುಂಡರೀಕಾಕ್ಷಾವತಾರಧೀರ-
ವರಾನುಕಂಪಾಸಂಪನ್ನಕೆಂಪನಂಜಮಾಂಬಾಗರ್ಭಶುಕ್ತಿಮುಕ್ತಾಸಮಾನಮುಕ್ತಾಯಮಾನಶ್ರೀಕೃಷ್ಣ-
ರಾಜಕಂಠೀರವ ಸಾರ್ವಭೌಮವಿರಚಿತೇ ಶ್ರೀತತ್ತ್ವನಿಧ್ಯಾಖ್ಯಗ್ರಂಥೇ ಚತುರ್ಮುಖಬ್ರಹ್ಮಾದಿಸ್ವರೂಪ
ಶಾಸ್ತ್ರಸಂಗ್ರಹನಿರೂಪಣಂ ನಾಮ ತುರೀಯೋ ಬ್ರಹ್ಮನಿಧಿಸ್ಸಂಪೂರ್ಣಃ ||

ಶ್ರೀಃ

187A ಶ್ರೀಮದ್ಬ್ರಹ್ಮನಿಧಿಪ್ರಖ್ಯವಿದ್ರುಮದ್ಯುತಿಭಾಸುರಃ |
ಶ್ರೀಕೃಷ್ಣರಾಜೇಂದ್ರರಚಿತಗ್ರಂಥೋಽಯಂ ವರ್ಧತಾಂ ವರಮ್ || 1102
ಭಕ್ತ್ಯಾ ಬ್ರಹ್ಮನಿಧಿಂ ನಿತ್ಯಂ ಯೇ ಪಠಂತಿ ನರೋತ್ತಮಾಃ |
ತೇಷಾಂ ಮುಖಾಬ್ಜೇ ವಾಗ್ದೇವೀ ಸಂತೋಷಾನ್ನಾಟ್ಯಮಾಚರೇತ್ || 1103

ಅಸ್ಮಿನ್ ಬ್ರಹ್ಮನಿಧೌ ವಿದ್ಯಮಾನಾನಾಂ
ಪ್ರತಿಮಾನಾಂ ವಿವರಣಶ್ಲೋಕಾಃ

ತುರೀಯೇ ಬ್ರಹ್ಮನಿಧ್ಯಾತ್ಮಸಾದ್ವಿದ್ರುಮನಿಧೌ ಕ್ರಮಾತ್ |
ಸಂಪ್ರೋಕ್ತಾಸ್ಸಪರಿವಾರಾಃ ಪ್ರಕಾಶ್ಯಂತೇಽತ್ರ ದೇವತಾಃ || 1104
ಆದೌ [೧]ಚತುರ್ಮುಖೋ ಬ್ರಹ್ಮಾ [೨]ಚತುರ್ಬಾಹುಸ್ಸರಸ್ವತೀ |
ಪುನ[೩]ಶ್ಚತುರ್ಭುಜಾ ಸೈವ [೪]ದ್ವಿಭುಜಾ ಚ ಸರಸ್ವತೀ || 1105
[೫]ಆದ್ಯಬ್ರಹ್ಮಾ [೬]ಲೋಕಪಾಲೋ [೭]ವಿಶ್ವಕರ್ಮಾ [೮]ಪ್ರಜಾಪತಿಃ |
[೯]ವಿಧಿಬ್ರಹ್ಮಾ ಚೇತಿ ಶಾಸ್ತ್ರೇ ಪಂಚ ಬ್ರಹ್ಮಾಣ ಈರಿತಾಃ || 1106
[೧೦]ಮರೀಚಿ[೧೧]ರಂಗಿರಾ[೧೨]ಶ್ಚಾತ್ರಿಃ [೧೩]ಪುಲಸ್ತ್ಯಃ [೧೪]ಪುಲಹಃ [೧೫]ಕ್ರತುಃ |
[೧೬]ಕರ್ದಮಃ [೧೭]ಕಶ್ಯಪೋ [೧೮]ದಕ್ಷೋ ನವೈತೇ ಹಿ ಪ್ರಜೇಶ್ವರಾಃ || 1107
[೧೯]ಕಶ್ಯಪೋಽ[೨೦]ತ್ರಿ[೨೧]ರ್ಭರದ್ವಾಜೋ [೨೨]ವಿಶ್ವಾಮಿತ್ರೋಽಥ [೨೩]ಗೌತಮಃ |
[೨೪]ಜಮದಗ್ನಿ[೨೫]ರ್ವಸಿಷ್ಠಶ್ಚ ಸಪ್ತಸಂಖ್ಯಾಃ ಮಹರ್ಷಯಃ || 1108
[೨೬]ನಾರದೋ ಬ್ರಹ್ಮತನಯೋ ವೀಣಾಲೋಲೋ ಮಹಾಮುನಿಃ |
ಭೃಗುರ್ವಸಿಷ್ಠಸ್ಸಾವೇದಾ ಅಂಗಿರಾಃ ಪುಲಹಃ ಕ್ರತುಃ || 1109
ಪುಲಸ್ತ್ಯೋಽತ್ರಿರ್ಮರೀಚಿಶ್ಚ ನವೈತೇ ಋಷಯೋ ಮತಾಃ |
ಪ್ರದರ್ಶಿತಾ [೨೭]ಮೂರ್ತಿರೇಕಾ ನವಾನಾಮೇಕರೂಪತಃ || 1110

ತಥಾ [೨೮]ಚತುರ್ಭುಜಾಗಸ್ತ್ರ್ಯೇ [೨೯]ದ್ವಿಭುಜಾಗಸ್ತ್ರ್ಯ ಏವ ಚ |
ಗಂಗಾ ಚ ಯಮುನಾ ಗೋದಾ ರೇವಾ ಕೃಷ್ಣಾ ಚ ತಾಪಿನೀ || 1111
ವೇಣೀ ಸರಸ್ವತೀ ಚೈವ ಮಹಾನದ್ಯೋಽಷ್ಟಸಂಖ್ಯಕಾಃ |
ದರ್ಶಿತಾ [೩೦]ಪ್ರತಿಮೈಕಾತ್ರ ನದೀನಾಮ್ಮೈಕರೂಪತಃ || 1112
[೩೧]ಸ್ವಾಯಂಭುವಮನುಸ್ತ್ವಾದ್ಯಸ್ತಥಾ [೩೨]ಸ್ವಾರೋಚಿಷೋ ಮನುಃ |
[೩೩]ಉತ್ತಮಾಖ್ಯಸ್ತೃತೀಯಸ್ತು ತಥಾ ವೈ [೩೪]ತಾಮಸೋ ಮನುಃ || 1113
[೩೫]ರೈವತ[೩೬]ಶ್ಚಾಕ್ಷುಷೋ [೩೭]ವೈವಸ್ವತಾಖ್ಯಸ್ಸಪ್ತಮೋ ಮನುಃ |
[೩೮]ಸೂರ್ಯಸಾವರ್ಣಿನಾಮಾ ಚ [೩೯]ದಕ್ಷಸಾವರ್ಣಿರೇವ ಚ || 1114
ತಥೈವ [೪೦]ಬ್ರಹ್ಮಸಾವರ್ಣಿಃ [೪೧]ಧರ್ಮಸಾವರ್ಣಿರೇವ ಚ |
[೪೨]ರುದ್ರಸಾವರ್ಣಿನಾಮಾ ಚ [೪೩]ವೇದಸಾವರ್ಣಿಸಂಜ್ಞಕಃ || 1115
[೪೪]ಇಂದ್ರಸಾವರ್ಣಿರಿತ್ಯೇತೇ ಮನವಸ್ತು ಚತುರ್ದಶ |
ಪತ್ನೀಪುತ್ರಸಮಾಯುಕ್ತಾಃ ಮಹಾತ್ಮಾನೋ ಯಶಸ್ವಿನಃ || 1116
ಏತೇಷಾಂ ಪಿತೃನಾಮಾನಿ ಮನ್ವಾದಿತಿಥಯಸ್ತಥಾ |
ತತ್ತತ್ಕಾಲಸ್ಥಶಕ್ರಾಣಾಂ ಹರೀಣಾಂ ಚ ಯಥಾಕ್ರಮಮ್ || 1117
ಋಷೀಣಾಂ ಚೈವ ನಾಮಾನಿ ಪ್ರೋಕ್ತಾನಿ ಮನುಭಿಸ್ಸಹ |
[೪೫]ಪರ್ಜನ್ಯಮೂರ್ತಿ[೪೬]ರ್ಬ್ರಹ್ಮಾಸ್ತ್ರಮೂರ್ತಿಶ್ಚೈವ ತತಃ ಪರಮ್ || 1118
[೪೭]ಕಾಮಧೇನೋಶ್ಚ [೪೮]ಪ್ರತಿಮಾದ್ವಯಂ ಚಾತ್ರ ಪ್ರದರ್ಶಿತಮ್ |
[೪೯]ಅಶ್ವತ್ಥಾಮಾ[೫೦]ಬಲಿ[೫೧]ರ್ವ್ಯಾಸೋ [೫೨]ಹನೂಮಾಂಶ್ಚ [೫೩]ವಿಭೀಷಣಃ || 1119
[೫೪]ಕೃಪಃ [೫೫]ಪರಶುರಾಮಶ್ಚ [೫೬]ಪ್ರಹ್ಲಾದಶ್ಚ ತಥಾಷ್ಟಮಃ |
[೫೭]ಮಾರ್ಕಂಡೇಯ ಇತಿ ಖ್ಯಾತಾಃ ಅಂಕಾಂಕಾಶ್ಚಿರಜೀವಿನಃ || 1120
[೫೮]ಧ್ರುವಶ್ಚೈವಾ[೫೯]ಧ್ವರ[೬೦]ಸ್ಸೋಮಃ [೬೧]ಆಪಶ್ಚೈ[೬೨]ವಾನಿಲೋ[೬೩]ಽನಲಃ |
[೬೪]ಪ್ರತ್ಯೂಷಶ್ಚ [೬೫]ಪ್ರಭಾಸಶ್ಚೇತ್ಯೇತೇಽಷ್ಟವಸವೋ ಮತಾಃ || 1121
[೬೬]ಆವಹೋ [೬೭]ವಿವಹಶ್ಚಾ[೬೮]ನುವಹಃ [೬೯]ಸಂವಹ [೭೦]ಉದ್ವಹಃ |
187B [೭೧]ನಿವಹಃ [೭೨]ಪ್ರವಹಶ್ಚೇತಿ ಮರುತಸ್ಸಪ್ತಸಂಖ್ಯಕಾಃ || 1122
ಪ್ರಾಣೋಪಾನ ಉದಾನಶ್ಚ ಸಮಾನೋ ವ್ಯಾನ ಏವ ಚ |
ನಾಗಶ್ಚಕ್ರಕರಃ ಕೂರ್ಮೋ ದೇವದತ್ತೋ ಧನಂಜಯಃ || 1123
ಪ್ರವಹೋ ವಿವಹಶ್ಶಂಭುಸ್ಸಂವಹಶ್ಚೋದ್ವಹಸ್ತಥಾ |
ಶಂಭುಶ್ಚಾಪ್ಯನ್ವಹಃ ಕಾಲಃ ಆವಹೋ ನಿವಹಸ್ತಥಾ || 1124
ಶ್ವಾಸೋಽನಿಲೋಽನಲಶ್ಚೈವ ಪ್ರತಿಭಾಕುಮುದಸ್ತಥಾ |
ಕಾಂತಶ್ಶಿಬಿಶ್ವೇತರಕ್ತೌ ಕೃಷ್ಣಶ್ಚೈವ ಜಿತೋಽಜಿತಃ || 1125
ಜಂಝಾಖ್ಯಶ್ಚ ಕ್ರತುರ್ದ್ಯೋತಸ್ಸಿದ್ಧಃ ಪಿಂಗಶ್ಶುಭೋ ಹನುಃ |

ಮಾರುತಃ ಕಂಪನಸ್ಸೌಮ್ಯೋ ಮಂಡೂಕಸ್ಸಂತತಸ್ತಥಾ || 1126
ಸಂವರ್ತಕಃ ಕಪಿರ್ಭೀಮೋ ಜಡೋಽತಿಜಡ ಇತ್ಯಮೀ |
ಏಕೋನಪಂಚಾಶತ್ಸಂಖ್ಯಾಃ ಮರುತಸ್ಸಂಪ್ರಕೀರ್ತಿತಾಃ || 1127
ಏಷ್ವಾವಹಾದಿಸಂಜ್ಞಾನಿ ಸಪ್ತಕಾನಿ ತು ಸಪ್ತ ವೈ |
ಪೂರ್ವೋಕ್ತಾಸ್ಸಪ್ತಮರುತೋಽಪ್ಯಂತರ್ಭೂತಾ ಇಹೈವ ಹಿ || 1128
ಏಕಾತ್ರ ದರ್ಶಿತಾ [೭೩]ಮೂರ್ತಿಸ್ಸರ್ವೇಷಾಂ ರೂಪಸಾಮ್ಯತಃ |
ಕ್ರತುರ್ದಕ್ಷೋ ವಸುಸ್ಸತ್ಯಃ ಕಾಲಃ ಕಾಮೋ ದನುಸ್ತಥಾ || 1129
ಪುರೂರವಾಶ್ಚ ರುದ್ರಶ್ಚ ರುಚಿಕಶ್ಚಾರ್ದ್ರವಾಸ್ತಥಾ |
ಧುನಿರ್ವಿಲೋಚನಶ್ಚೇತಿ ವಿಶ್ವೇದೇವಾಸ್ತ್ರಯೋದಶ || 1130
ಏಷಾಂ ಸದೃಶರೂಪತ್ವಾ[೭೪]ತ್ತ್ರೃತಿರ್ಮೈಕಾ ಪ್ರದರ್ಶಿತಾ |
[೭೫]ಇಂದ್ರೋ [೭೬]ವಹ್ನಿ[೭೭]ರ್ದಂಡಧರೋ [೭೮]ನೈರ್ಋತೋ [೭೯]ವರುಣೋ [೮೦]ಮರುತ್|| 1131
[೮೧]ಕುಬೇರಶ್ಚ ತ್[೮೨]ಥೇಶಾನೋ ದಿಕ್‌ಪಾಲಾಶ್ಚಾಷ್ಟ ಕೀರ್ತಿತಾಃ |
[೮೩]ಐರಾವತಃ [೮೪]ಪುಂಡರೀಕೋ [೮೫]ವಾಮನಃ [೮೬]ಕುಮುದೋ[೮೭]ಽಂಜನಃ || 1132
[೮೮]ಪುಷ್ಪದಂತ[೮೯]ಸ್ಸಾರ್ವಭೌಮ[೯೦]ಸ್ಸುಪ್ರತೀಕೋಽಷ್ಟದಿಗ್ಗಜಾಃ |
[೯೧]ಅನಂತೋ [೯೨]ವಾಸುಕಿ[೯೩]ಸ್ತಕ್ಷಕಾಖ್ಯಃ [೯೪]ಕರ್ಕೋಟ[೯೫]ಪದ್ಮಕೌ || 1133
[೯೬]ಮಹಾಪದ್ಮ[೯೭]ಶ್ಶಂಖಪಾಲಃ [೯೮]ಕುಲಿಕೋಽಷ್ಟೌ ಭುಜಂಗಮಾಃ |
ದಿಕ್ಪಾಲಾಃ ದಿಗ್ಗಜಾಶ್ಚೈವ ದಿಙ್ನಾಗಾಶ್ಚ ಪ್ರಕೀರ್ತಿತಾಃ || 1134
ಪೂರ್ವಾದಿದಿಕ್ಕ್ರಮೇಣೈವ ವಿಜ್ಞಾತವ್ಯಾ ವಿಚಕ್ಷಣೈಃ |
[೯೯]ಪ್ರಾಚ್ಯಾ[೧೦೦]ಗ್ನೇಯಿೀ [೧೦೧]ದಕ್ಷಿಣಾ ಚ [೧೦೨]ನೈರ್ಋತೀ [೧೦೩]ಪಶ್ಚಿಮಾ ತಥಾ || 1135
[೧೦೪]ವಾಯವೀಯೋ[೧೦೫]ತ್ತರೈ[೧೦೬]ಶಾನೀ [೧೦೭]ಚೋರ್ಧ್ವಾ[೧೦೮]ಧೋ ದಿಗ್ದಿಶೋ ದಶ |
[೧೦೯]ಬ್ರಹ್ಮೋರ್ಧ್ವದಿಕ್‌ಪತಿಶ್ಚಾಧೋ ದಿಕ್ಪಾಲೋ[೧೧೦]ಽನಂತಸಂಜ್ಞಕಃ || 1136
ಅಶ್ವಾರೂಢಾ[೧೧೧]ವಾಶ್ವನೇಯೌ [೧೧೨]ತ್ರಿಮುಖಾಗ್ನಿಸ್ತಥೈವ ಚ |
[೧೧೩]ಚತುರ್ಭುಜಾಶ್ವಜಘನದಸ್ರೌ ಚ ಪುನರೀರಿತೌ || 1137
[೧೧೪]ಲವಣಾಬ್ಧಿ[೧೧೫]ಶ್ಚೇಕ್ಷುವಾರ್ಧಿ[೧೧೬]ಸ್ಸುರಾಬ್ಧಿ[೧೧೭]ರ್ಘೃತವಾರಿಧಿಃ |
[೧೧೮]ದಧಿವಾರ್ಧಿ[೧೧೯]ರ್ದುಗ್ಧವಾರ್ಧಿಃ [೧೨೦]ಜಲಾಬ್ಧಿಸ್ಸಪ್ತ ವಾರ್ಧಯಃ || 1138
[೧೨೧]ಪೃಥ್ವೀ [೧೨೨]ಜಲಂ ತಥಾ [೧೨೩]ತೇಜೋ [೧೨೪]ವಾಯು[೧೨೫]ರಾಕಾಶಮಿತ್ಯಪಿ |
ಪಂಚಸಂಖ್ಯಾಕಭೂತಾನಿ ಜ್ಞಾತವ್ಯಾನಿ ಯಥಾಕ್ರಮಮ್ || 1139
[೧೨೬]ಧರ್ಮೋ [೧೨೭]ಜ್ಞಾನಂ ಚ [೧೨೮]ವೈರಾಗ್ಯಮ್ [೧೨೯]ಐಶ್ವರ್ಯಂ ಚ ಚತುಷ್ಟಯಮ್ |
[೧೩೦]ಯಮೋ ಧರ್ಮಸ್ಯಾಭಿಮಾನೀ ಜ್ಞಾನಸ್ಯ [೧೩೧]ಪವನಸ್ತಥಾ || 1140
ವೈರಾಗ್ಯಸ್ಯ [೧೩೨]ಶಿವಃ ಪ್ರೋಕ್ತಃ ಐಶ್ವರ್ಯಸ್ಯ [೧೩೩]ಪುರಂದರಃ |
ತಥೈವ [೧೩೪]ಪುಣ್ಯಪುರುಷೋ ಮಧ್ಯತಸ್ಸಂಪ್ರದರ್ಶಿತಃ || 1141

[೧೩೫]ಅಧರ್ಮಾ[೧೩೬]ಜ್ಞಾನಾ[೧೩೭]ಽವೈರಾಗ್ಯಾ[೧೩೮]ನೈಶ್ವರ್ಯಾಣಿ ಚತುಷ್ಟಯಮ್ |
[೧೩೯]ಅಧರ್ಮಾಧಿಪತೀ ರಕ್ಷೋ [೧೪೦]ದುರ್ಗಾ ಚಾಜ್ಞಾನದೇವತಾ || 1142
ಅವೈರಾಗ್ಯಾಧಿಪಃ [೧೪೧]ಕಾಮೋ [೧೪೨]ರುದ್ರೋಽನೈಶ್ವರ್ಯದೇವತಾ |
ತಥೈವ [೧೪೩]ಪಾಪಪುರುಷೋ ಮಧ್ಯತಸ್ಸಂಪ್ರದರ್ಶಿತಃ || 1143
[೧೪೪]ಋಗ್ವೇದೋಽಥ [೧೪೫]ಯಜುರ್ವೇದ[೧೪೬]ಸ್ಸಾಮವೇದೋ[೧೪೭]ಽಪ್ಯಥರ್ವಣಃ |
[೧೪೮]ಆಯುರ್ವೇದೋ [೧೪೯]ಧನುರ್ವೇದಃ ಇತಿ ವೇದಾಷ್ಷಡೀರಿತಾಃ || 1144
188A [೧೫೦]ಸೋಮೋ [೧೫೧]ರುದ್ರಸ್ತ[೧೫೨]ಥೇಂದ್ರಶ್ಚ [೧೫೩]ಬ್ರಹ್ಮಾ[೧೫೪]ಧನ್ವಂತರಿಸ್ತಥಾ |
[೧೫೫]ಇಂದ್ರಶ್ಚೇತಿ ಷಡೇತೇ ಷಟ್ ವೇದಾನಾಮ್ ಅಧಿದೇವತಾಃ || 1145
[೧೫೬]ಧನ್ವಂತರೇರ್ಧನುರ್ವೇದಸ್ಯಾಪಿ ರೂಪಾಂತರೇ ದ್ವಯೋಃ |
ಗ್ರಂಥಾಂತರಾನುಸಾರೇಣ ಸಮ್ಯಗತ್ರ ಪ್ರದರ್ಶಿತೇ || 1146
ಶ್ರೀಚಾಮುಂಡಾನಿಘಂಟೂಕ್ತತತ್ತನ್ನಾಮಕ್ರಮೇಣ ವೈ |
ಶ್ರೀಭಾವಸಮಸಂಖ್ಯಾನಾಂ ದೇವತಾಹಸ್ತವಾಸಿನಾಮ್ || 1147
ಆಯುಧಾನಾಂ ಸ್ವರೂಪಾಣಿ ದರ್ಶಿತಾನಿ ತಥೈವ ಚ |
ದೇವತಾಹಸ್ತಭೇದಾನಾಂ ರೂಪಾಣಿ ಚ [೨೮೫]ಪೃಥಕ್ ಪೃಥಕ್ || 1148
[೨೮೬]ಶಿಕ್ಷಾ [೨೮೭]ಕಲ್ಪೋ [೨೮೮]ವ್ಯಾಕರಣಂ [೨೮೯]ನಿರುಕ್ತಂ [೨೯೦]ಛಂದ ಏವ ಚ |
[೨೯೧]ಜ್ಯೋತಿಷಂ ಚೈವ [೨೯೨]ಮೀಮಾಂಸಾ [೨೯೩]ನ್ಯಾಯಶಾಸ್ತ್ರಮತಃ ಪರಮ್ || 1149
[೨೯೪]ಧರ್ಮಶಾಸ್ತ್ರಂ [೨೯೫]ಪುರಾಣೇ[೨೯೬]ತಿಹಾಸಾಶ್ಚ [೨೯೭]ಭರತಂ ತಥಾ |
[೨೯೮]ಪಾಂಚರಾತ್ರಂ [೨೯೯]ಪಾಶುಪತಂ [೩೦೦]ಸಾಂಖ್ಯಂ [೩೦೧]ಪಾತಂಜಲಾಭಿಧಮ್ || 1150
ನೃಪಸಂಖ್ಯಾಕಶಾಸ್ತ್ರಾಣಿ ದರ್ಶಿತಾನಿ ಸ್ವರೂಪತಃ |
[೩೦೨]ಪ್ರಜಾಪತಿಸ್ತಥಾ [೩೦೩]ಬ್ರಹ್ಮಾ [೩೦೪]ವಾಗ್ದೇವೀ [೩೦೫]ವರುಣೋ[೩೦೬]ಽದಿತಿಃ || 1151
[೩೦೭]ಹರಿ[೩೦೮]ಸ್ಸೋಮೋ [೩೦೯]ವಾಯು[೩೧೦]ಧರ್ಮೌ [೩೧೧]ಸ್ವಾಯಂಭುವಮನುಸ್ತಥಾ |
[೩೧೨]ಪಿತಾಮಹ [೩೧೩]ಉಮೇಶಶ್ಚ ತಥಾ [೩೧೪]ಸಂಕರ್ಷಣಾಭಿಧಃ || 1152
[೩೧೫]ರುದ್ರಶ್ಚ [೩೧೬]ಕಪಿಲೋ[೩೧೭]ಽನಂತಃ ಕ್ರಮಾಚ್ಛಾಸ್ತ್ರಾಧಿದೇವತಾಃ |
[೩೧೮]ಪ್ರಭುಶಕ್ತಿ[೩೧೯]ರ್ಮಂತ್ರಶಕ್ತಿ[೩೨೦]ಶ್ಯಕ್ತಿರುತ್ಸಾಹಸಂಜ್ಞಿಕಾಃ || 1153
ಶಕ್ತಿತ್ರಯಮಿತಿ ಜ್ಞೇಯಂ ರಾಜನೀತಾವುದಾಹೃತಮ್ |
[೩೨೧]ಸಾಮ[೩೨೨]ದಾನೇ [೩೨೩]ಭೇದ[೩೨೪]ದಂಡಾವಿತ್ಯುಪಾಯಚತುಷ್ಟಯಮ್ || 1154
ಸ್ಯಾ[೩೨೫]ದ್ಧರ್ಮದೇವತಾ ಪ್ರೋಕ್ತಾ [೩೨೬]ವಿಶ್ವಕರ್ಮಾ [೩೨೭]ಮಯಸ್ತತಃ
[೩೨೮]ಮಂತ್ರಶಾಸ್ತ್ರಂ [೩೨೯]ಕಾವ್ಯಶಾಸ್ತ್ರಂ [೩೩೦]ಕಾಮಶಾಸ್ತ್ರಂ ಚ [೩೩೧]ಶಾಕುನಮ್ || 1155
[೩೩೨]ಶಿಲ್ಪಶಾಸ್ತ್ರ[೩೩೩]ಮಲಂಕಾರಶಾಸ್ತ್ರಂ ಚೈ[೩೩೪]ವೇಂದ್ರಜಾಲಕಮ್ |
[೩೩೫]ನಾಟ್ಯಶಾಸ್ತ್ರಂ [೩೩೬]ಸೂಪಶಾಸ್ತ್ರಂ [೩೩೭]ಮಲ್ಲಶಾಸ್ತ್ರಂ ತತಃ ಪರಮ್ || 1156
[೩೩೮]ಅಥರ್ವವೇದೋಪವೇದಮಂತ್ರವೇದಸ್ವರೂಪಕಮ್ |

ಶಿಲ್ಪಿಃ ಪ್ರೋಕ್ತೋ [೧೩೯]ಮನುಬ್ರಹ್ಮಾ [೧೪೦]ಮಯಬ್ರಹ್ಮಾ ತತಃ ಪರಮ್ ॥ 1157
[೧೪೧]ತ್ವಷ್ಟೃಬ್ರಹ್ಮಾ [೧೪೨]ವಿಶ್ವಕರ್ಮಾ [೧೪೩]ಶಿಲ್ಪಿಬ್ರಹ್ಮಾ ಚ ಪಂಚಕಮ್ ।
ತಥೈವ [೧೪೪]ಕಾಲಪುರುಷಃ [೧೪೫]ಕ್ರೂರರೂಪಂ ಯಮಸ್ಯ ಚ ॥ 1158
[೧೪೬]ಸೌಮ್ಯರೂಪಂ ಯಮಸ್ಯೈವ ತಥಾ ರೂಪಂ [೧೪೭]ವನಸ್ಪತೇಃ ।
[೧೪೮]ವಾಡವಾಸ್ತ್ರಸ್ವರೂಪಂ ಚ [೧೪೯]ವಡವಾಗ್ನಿಸ್ವರೂಪಕಮ್ ॥ 1159
[೧೫೦]ಕಾಲಕೂಟವಿಷಸ್ಯಾಪಿ ರೂಪಂ [೧೫೧]ಚಾಮೃತಲಕ್ಷಣಮ್ ।
[೧೫೨]ಚಿತ್ರಸೇನಾಖ್ಯಗಂಧರ್ವರೂಪಂ [೧೫೩]ವಿಶ್ವಾವಸೋಸ್ತಥಾ ॥ 1160
ರೂಪಂ ಚ ಸಾಮವೇದೋಪವೇದ[೧೫೪]ಗಾಂಧರ್ವರೂಪಕಮ್ ।
ಅಸ್ಯಾಭಿಮಾನಿ[೧೫೫]ವಾಗ್ದೇವೀರೂಪಂ [೧೫೬]ಷಡ್ಜಸ್ವರೂಪಕಮ್ ॥ 1161
[೧೫೭]ಋಷಭಸ್ವರರೂಪಂ ಚ [೧೫೮]ಗಾಂಧಾರಸ್ವರರೂಪಕಮ್ ।
[೧೫೯]ಮಧ್ಯಮಸ್ವರರೂಪಂ ಚ [೧೬೦]ಪಂಚಮಸ್ವರರೂಪಕಮ್ ॥ 1162
[೧೬೧]ಧೈವತಸ್ವರರೂಪಂ ಚ [೧೬೨]ನಿಷಾಧಸ್ವರರೂಪಕಮ್ ।
ರೂಪಾಣ್ಯೇಷಾಂ ಸ್ವರಾಣಾಂ ಚ ದ್ವಾತ್ರಿಂಶಲ್ಲಕ್ಷಣಾವಲೇಃ ॥ 1163
ಆದೌ [೧೬೩]ಭೈರವರಾಗಶ್ಚ [೧೬೪]ಮಧ್ಯಮಾದಿಸ್ತತಃ ಪರಮ್ ।
[೧೬೫]ಭೈರವೀ ಚೈವ [೧೬೬]ಬಂಗಾಲೀ [೧೬೭]ವರಾಟೀ[೧೬೮]ಸೈಂಧವೀ ತಥಾ ॥ 1164
[೧೬೯]ತೋಡೀ [೧೭೦]ಕಂಭಾವತೀ [೧೭೧]ಗೌಡೀ ರಾಗೋ [೧೭೨]ಮಾಲವಕೌಶಿಕಃ ।
[೧೭೩]ಗುಂಡಕ್ರಿಯಾ ಚ [೧೭೪]ಕಕುಭಾ [೧೭೫]ಹಿಂದೋಲಾಖ್ಯಸ್ತತಃ ಪರಮ್ ॥ 1165
[೧೭೬]ವೇಲಾವಲೀ [೧೭೭]ರಾಮಕಲಿಃ [೧೭೮]ದೇಶಾಕ್ಷೀ [೧೭೯]ಫಲಮಂಜರೀ ।
[೧೮೦]ಪ್ರದೀಪಕಶ್ಚ [೧೮೧]ಕರ್ನಾಟಃ [೧೮೨]ಕೇತಾರೋ [೧೮೩]ಲಲಿತಾ ತಥಾ ॥ 1166
[೧೮೪]ದೇಶೀರಾಗಶ್ಚ [೧೮೫]ಕಾಂಭೋಜೀ [೧೮೬]ನಾಟೀ [೧೮೭]ಶ್ರೀರಾಗ ಏವ ಚ ।
188B [೧೮೮]ಮಾಲವಶ್ರೀಃ [೧೮೯]ವಸಂತಶ್ಚಾ[೧೯೦]ಪ್ಯಸಾವೇರೀ ಚ [೧೯೧]ಮಾಲವಃ ॥ 1167
[೧೯೨]ಧನಶ್ರೀರಾಗ[೧೯೩]ಮಲ್ಲಾರೀರಾಗೌ [೧೯೪]ಮೇಘಾಭಿಧಸ್ತಥಾ ।
[೧೯೫]ಭೂಪಾಲೀ [೧೯೬]ದೇಶಕಾರಿಶ್ಚ [೧೯೭]ಟಕ್ಕರಾಗಶ್ಚ [೧೯೮]ಘೂರ್ಜರಃ ॥ 1168
ರೂಪಾಣ್ಯೇಷಾಂ ಚ ಷಟ್‌ತ್ರಿಂಶದ್ರಾಗಾಣಾಂ ದರ್ಶಿತಾನಿ ವೈ ।
[೧೯೯]ಧ್ರುವತಾಲೋ [೨೦೦]ಮಠ್ಯತಾಲೋ [೨೦೧]ರೂಪಕೋ [೨೦೨]ಝಂಪನಾಮಕಃ ॥ 1169
[೨೦೩]ತ್ರಿಪುಟೋಽ[೨೦೪]ಪ್ಯಟ್ಟತಾಲಶ್ಚಾ[೨೦೫]ಪ್ಯೇಕತಾಲಶ್ಚ ಸಪ್ತಮಃ ।
ರೂಪಾಣ್ಯೇಷಾಂ ಲಕ್ಷಣಾನಿ ದರ್ಶಿತಾನಿ ಪೃಥಙ್ನವ ॥ 1170
ಶರಪೂರ್ಣಾಬ್ಧಿಸಂಖ್ಯಾಕಾಃ ಮೂರ್ತಯೋಽತ್ರ ಪ್ರದರ್ಶಿತಾಃ ।
ಶಿಖಾಶ್ವಸಂಖ್ಯಾಃ ಪ್ರತಿಮಾಸ್ಸಾರೂಪ್ಯಾನ್ನ ಪ್ರದರ್ಶಿತಾಃ ॥ 1171
ಸರ್ವೇ ದೇವಾಃ ಬ್ರಹ್ಮನಿಧೌ ಪೂರ್ಣಶ್ರೀವೇದಸಂಖ್ಯಕಾಃ ॥ 1172

**ಇತಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತೇ**

**ಶ್ರೀತತ್ತ್ವನಿಧೌ ಚತುರ್ಥಃ ಬ್ರಹ್ಮನಿಧಿಃ ಸಂಪೂರ್ಣಃ**

## ಬ್ರಹ್ಮನಿಧಿಯಲ್ಲಿ ಹೇಳಲಾಗಿರುವ ಗ್ರಂಥಗಳ ಹೆಸರುಗಳು

1. ಅಗಸ್ತ್ಯಪೂಜಾಕಲ್ಪ (ಮತ್ಸ್ಯಪುರಾಣಾಂತರ್ಗತ)
2. ಅಗ್ನಿಪುರಾಣ
3. ಅನಂಗರಂಗ
4. ಅಮರಕೋಶ
5. ಅಲಂಕಾರಶಾಸ್ತ್ರ
6. ಅಷ್ಟಭೋಗನೀತಿಶಾಸ್ತ್ರ
7. ಆಯುರ್ವೇದತಂತ್ರ
8. ಕಾರಣಾಗಮ
9. ಕಾಲಪ್ರಕಾಶಿಕಾ
10. ಕಾವ್ಯಪ್ರಕಾಶ
11. ಚಾಮುಂಡಾಲಘುನಿಘಂಟು (ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ಕೃತ)
12. ಛಂದಶ್ಶಾಸ್ತ್ರ
13. ದಶಶ್ಲೋಕೀ
14. ದಾನಖಂಡ (ಮಯೂಖದಲ್ಲಿ ಹೇಮಾದ್ರಿಕಾಂಡದಲ್ಲಿ)
15. ದಾನಚಿಂತಾಮಣಿ
16. ದೇವಶಿಲ್ಪಗ್ರಂಥ (ವಿಷ್ಣುಪುರಾಣಾಂತರ್ಗತ)
17. ನಂದಿಭರತಶಾಸ್ತ್ರ
18. ನಾಟ್ಯಶಾಸ್ತ್ರ
19. ನೀತಿಪ್ರಕಾಶಿಕಾ
20. ನೃಸಿಂಹಪ್ರಸಾದ
21. ಪರ್ಜನ್ಯಕಲ್ಪ (ಮತ್ಸ್ಯಪುರಾಣಾಂತರ್ಗತ)
22. ಪದ್ಮಪುರಾಣ
23. ಪಾಂಚರಾತ್ರ
24. ಪ್ರಪಂಚಸಾರ
25. ಪ್ರಭಾವಲೀ (ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ ಸಂಖ್ಯಾರತ್ನಕೋಶವ್ಯಾಖ್ಯಾ)
26. ಬ್ರಹ್ಮಕಲ್ಪ
27. ಭಟ್ಟಭಾಸ್ಕರೀಯ

28. ಭರತಶಾಸ್ತ್ರಸಂಗ್ರಹ (ಭರತನ ನಾಟ್ಯಶಾಸ್ತ್ರಸಂಗ್ರಹ)
29. ಭಾಗವತಪುರಾಣ
30. ಮತ್ಸ್ಯಪುರಾಣ
31. ಮಂತ್ರದೇವತಾಪ್ರಕಾಶಿಕಾ
32. ಮಂತ್ರರತ್ನಾಕರ
33. ಮಂತ್ರಾಗಮ
34. ಮಯೂಖ (ಹೇಮಾದ್ರಿಕಾಂಡಾಂತರ್ಗತ)
35. ರತಿರಹಸ್ಯ
36. ರಸಾರ್ಣವಸುಧಾಕರ
37. ಲಕ್ಷ್ಮೀನಾರಾಯಣಸಂವಾದ (ಸ್ಕಾಂದಪುರಾಣಾಂತರ್ಗತ)
38. ವಾಗ್ದೇವೀಪೂಜಾಕಲ್ಪ
39. ವಿವೇಕಚಿಂತಾಮಣಿ
40. ವಿಷ್ಣುಧರ್ಮೋತ್ತರಪುರಾಣ
41. ವಿಷ್ಣುಪುರಾಣ
42. ವೈದ್ಯಶಾಸ್ತ್ರ
43. ವ್ರತಕಲ್ಪ
44. ಶಿಂಗಭಟ್ಟೀಯಪ್ರಯೋಗ
45. ಶಿವತತ್ತ್ವರತ್ನಾಕರ
46. ಶೈವಾಗಮ
47. ಸಂಗೀತರತ್ನಾಕರ
48. ಸಂಗೀತಶಾಸ್ತ್ರ
49. ಸಂಗೀತಸಂಗ್ರಹ
50. ಸರಸ್ವತೀಪೂಜಾಕಲ್ಪ
51. ಸಿದ್ಧಾಂತಶೇಖರ
52. ಸೃಷ್ಟಿಖಂಡ (ಪದ್ಮಪುರಾಣಾಂತರ್ಗತ)
53. ಸ್ವರಚೂಡಾಮಣಿ (ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ)



ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ವಿರಚಿತ

# ಶ್ರೀತತ್ತ್ವನಿಧಿ

ನಾಲ್ಕನೆಯ ಸಂಪುಟ

# ಬ್ರಹ್ಮನಿಧಿ



ಕನ್ನಡಾನುವಾದ


ಪ್ರತಿಭಾಪಟು, ವೇದಸೂಕ್ತವಿದ್ಯಾಸಾಗರ, ವೇದವಿದ್ಯಾನಿಧಿ
ಆದರ್ಶಸೇವಾರತ್ನ, ಸಂಸ್ಕೃತಸಾಹಿತ್ಯಶಿರೋಮಣಿ, ವಿಜಯೀಂದ್ರ ಪ್ರಶಸ್ತಿ ಭಾಜನರು

**ವಿದ್ವಾನ್ ಡಾ. ಟಿ.ವಿ. ಸತ್ಯನಾರಾಯಣ** ಎಂ.ಎ., ಪಿಹೆಚ್.ಡಿ.

ಅಲಂಕಾರ-ವ್ಯಾಕರಣಶಾಸ್ತ್ರ ವಿದ್ವಾನ್, ಸಂಸ್ಕೃತ ಕೋವಿದ

ನಿವೃತ್ತ ಉಪನಿರ್ದೇಶಕ ಮತ್ತು ಹಾಲಿ ಗೌರವ ಸಲಹಾಗಾರರು

ಪ್ರಾಚ್ಯವಿದ್ಯಾಸಂಶೋಧನಾಲಯ

ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ಶ್ರೀತತ್ತ್ವನಿಧಿ

## ನಾಲ್ಕನೆಯ ಸಂಪುಟ

# ಬ್ರಹ್ಮನಿಧಿ

## ವಿಷಯಾನುಕ್ರಮಣಿಕಾ

ಶ್ರೀಗಣಾಧಿಪತಯೇ ನಮಃ
ಶ್ರೀಃ ಶ್ರೀಚಾಮುಂಡಿಕಾಯೈ ನಮಃ

## ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರಿಂದ ವಿರಚಿತವಾದ ಶ್ರೀತತ್ತ್ವನಿಧಿಯಲ್ಲಿ ನಾಲ್ಕನೆಯ ಬ್ರಹ್ಮನಿಧಿಯ ಪ್ರಾರಂಭ

# ಬ್ರಹ್ಮನಿಧಿ

ನಾಲ್ಕನೆಯ ಸಂಪುಟ

129A/1 ### ಚತುರ್ಮುಖಬ್ರಹ್ಮನ ಧ್ಯಾನ

(ಶೈವಾಗಮದಲ್ಲಿ)

ನಾಲ್ಕು ಮುಖಗಳು ಮತ್ತು ನಾಲ್ಕು ತೋಳುಗಳುಳ್ಳ, ಕಮಂಡಲು ಮತ್ತು ಜಪಮಾಲೆಗಳನ್ನು ಹಿಡಿದುಕೊಂಡಿರುವ, ಜನಿವಾರವನ್ನು ಹಾಕಿಕೊಂಡು ಉತ್ತರೀಯವನ್ನು ಹೊದ್ದುಕೊಂಡಿರುವ, ತಲೆಯಲ್ಲಿ ಜಟೆಯನ್ನು ಕಟ್ಟಿ ಕಿರೀಟವನ್ನು ಧರಿಸಿರುವ, ಬಲ ಎಡಭಾಗಗಳ ಮೇಲಿನ ಕೈಗಳಲ್ಲಿ ಕ್ರಮವಾಗಿ ಜಪಮಾಲೆ ಮತ್ತು ಕಮಂಡಲುಗಳನ್ನು ಹಿಡಿದುಕೊಂಡಿರುವ, ಕೆಳಗಿನ ಬಲಕೈನಲ್ಲಿ ಸೌಟನ್ನು ಕೆಳಗಿನ ಎಡಗೈನಲ್ಲಿ ಪುಸ್ತಕವನ್ನು ಹಿಡಿದಿರುವ, ಕಮಲಾಸನದ ಮೇಲೆ ಕುಳಿತುಕೊಂಡು ಕಣ್ಣುಮುಚ್ಚಿ ಧ್ಯಾನ ಮಾಡುತ್ತಿರುವ, ಕಮಲದ ಎಲೆಯ ತುದಿಯ ಬಣ್ಣದಂತೆ ದೇಹಕಾಂತಿಯುಳ್ಳ, ನಾಲ್ಕು ಮುಖವುಳ್ಳ ಬ್ರಹ್ಮನನ್ನು ಧ್ಯಾನಮಾಡಬೇಕು. **1-3**

(ಬ್ರಹ್ಮನ ದೇಹದ ಬಣ್ಣ ಪಾದರಿಯ ಹೂವಿನಂತಹ ಕೆಂಪುಬಣ್ಣ)

129A/2 ### ಸರಸ್ವತಿಯ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ಸರಸ್ವತಿಯ ಪ್ರತಿಮೆಯನ್ನು ಈ ರೀತಿಯಲ್ಲಿ ನಿರ್ಮಿಸಬೇಕು. ಸರಸ್ವತಿಯು ಸರ್ವಾಭರಣ ಭೂಷಿತಳಾಗಿರಬೇಕು, ಅವಳಿಗೆ ನಾಲ್ಕು ಕೈಗಳಿರಬೇಕು, ಆ ನಾಲ್ಕೂ ಕೈಗಳೂ ಸಮವಾಗಿರಬೇಕು. ಬಲಗಡೆಯ ಎರಡು ಕೈಗಳಲ್ಲಿ ಪುಸ್ತಕ ಮತ್ತು ಜಪಮಾಲೆಗಳು ಇರಬೇಕು. ಎಡಭಾಗದ ಎರಡು ಕೈಗಳಲ್ಲಿ ವೀಣೆ ಮತ್ತು ಕಮಂಡಲುಗಳಿರಬೇಕು. ಅವಳ ಎರಡು ಪಾದಗಳು ಸಮವಾಗಿರುವಂತೆ

ಸ್ಥಾಪಿಸಬೇಕು. ಅವಳು ಪ್ರಸನ್ನವದನೆಯಾಗಿರಬೇಕು. ಅವಳ ಇಡೀ ದೇಹದ ಬಣ್ಣ ಬಿಳಿಯಾಗಿರಬೇಕು. 4-6A

(ಸರಸ್ವತಿಯ ದೇಹದ ಬಣ್ಣ ಬಿಳಿ)

129B/1 **ನಾಲ್ಕು ತೋಳುಗಳುಳ್ಳ ಸರಸ್ವತಿಯ ಮತ್ತೊಂದು ಬಗೆಯ ಧ್ಯಾನ**

**(ಆಶ್ವಲಾಯನಕೃತ ದಶಶ್ಲೋಕೀಗ್ರಂಥದಲ್ಲಿರುವಂತೆ)**

ಅಂಕುಶ, ಜಪಮಾಲೆ, ವೀಣೆ ಮತ್ತು ಪುಸ್ತಕಗಳನ್ನು ಧರಿಸಿರುವ, ಮುತ್ತಿನಹಾರವನ್ನು ಹಾಕಿಕೊಂಡಿರುವ, ನಾಲ್ಕು ತೋಳುಗಳನ್ನು ಹೊಂದಿ ಚತುರ್ಭುಜಳೆನಿಸಿರುವ, ದೇವಿ ಸರಸ್ವತಿಯನ್ನು ಧ್ಯಾನ ಮಾಡಬೇಕು. ಅವಳ ದೇಹದ ಬಣ್ಣ ಬಿಳಿ. ಚಂದ್ರನಿಗೆ ಸಮಾನವಾದ ಬಿಳಿಯ ವಸ್ತ್ರಗಳನ್ನು ಹಾಕಿಕೊಂಡಿದ್ದಾಳೆ. ಅವಳಿಗೆ ಮೂರು ಕಣ್ಣುಗಳು. ವಾಕ್ಕಿಗೆ ಅಧಿದೇವತೆಯಾದ್ದರಿಂದ ಅವಳಿಗೆ ವಾಗ್ದೇವಿಯೆಂದು ಹೆಸರು. ಕಾಲುಗಳಿಗೆ ಚಿನ್ನದ ಗೆಜ್ಜೆಗಳನ್ನು ಕಟ್ಟಿಕೊಂಡಿದ್ದಾಳೆ. ಭುಜಗಳಿಗೆ ಮತ್ತು ಕೈಮಣಿಕಟ್ಟುಗಳಿಗೆ ರತ್ನಖಚಿತವಾದ ಚಿನ್ನದ ಭುಜಕೀರ್ತಿ ಮತ್ತು ಕೇಯೂರಗಳೆಂಬ ಆಯುಧಗಳನ್ನು ಧರಿಸಿದ್ದಾಳೆ. ಶಂಖದಂತೆ ಸುಂದರವಾದ ಕುತ್ತಿಗೆಯಿರುವುದರಿಂದ ಅವಳು ಕಂಬುಗ್ರೀವೆ. ಅವಳ ತುಟಿಗಳು ಅತ್ಯಂತ ಕೆಂಪಾಗಿವೆ. ಎಲ್ಲ ಬಗೆಯ ಆಭರಣಗಳನ್ನೂ ತೊಟ್ಟಿದ್ದಾಳೆ. ಕಾಲ್ಗಡಗಗಳಿಂದಲೂ, ನಡುಪಟ್ಟಿ ಮೊದಲಾದವುಗಳಿಂದಲೂ, ಭೂಷಿತಳಾಗಿದ್ದಾಳೆ. ಮೂರು ಲೋಕಗಳನ್ನೂ ಅವಳು ಬೆಳಗತಕ್ಕ ಇವಳು. ಶಬ್ದಬ್ರಹ್ಮಸ್ವರೂಪಳು. ಇಂತಹ ಚತುರ್ಭುಜಳಾದ ದೇವಿ ಸರಸ್ವತಿಯನ್ನು ಜ್ಞಾನವನ್ನು ಪಡೆಯಬೇಕೆನ್ನುವ ಮನಸ್ಸುಳ್ಳವನು ಧ್ಯಾನಿಸಬೇಕು. 6B-9A

(ಬಿಳಿಯಬಣ್ಣ)

**ಎರಡು ತೋಳುಗಳ ಸರಸ್ವತಿಯ ಮತ್ತೊಂದು ಬಗೆಯ ಧ್ಯಾನ**

**(ಸರಸ್ವತೀಪೂಜಾಕಲ್ಪದಲ್ಲಿ)**

ಯಾವ ದೇವಿಯು ಕುಂದಪುಷ್ಪ ಅಂದರೆ ಗಿರಿಮಲ್ಲಿಗೆಹೂವು, ಹಿಮ, ಬಿಳಿಯ ಮುತ್ತಿನಹಾರಗಳಂತೆ ಬೆಳ್ಳಗಿರುವಳೋ, ಯಾವಳು ಸ್ವಚ್ಛವಾದ ಬಿಳಿಯ ಬಟ್ಟೆಗಳನ್ನು ತೊಟ್ಟಿರುವಳೋ, ಯಾವಳು ವೀಣೆಯ ಶ್ರೇಷ್ಠವಾದ ದಂಡವನ್ನು ಕೈಗಳಲ್ಲಿ ಹಿಡಿದು ಕೊಂಡಿರುವಳೋ, ಯಾವಳು ಬಿಳಿಯ ಕಮಲವನ್ನು ಆಸನವನ್ನಾಗಿ ಮಾಡಿಕೊಂಡು ಅದರ ಮೇಲೆ ಕುಳಿತಿರುವಳೋ, ಯಾವಳು ಬ್ರಹ್ಮ ವಿಷ್ಣು ಮಹೇಶ್ವರ ಮೊದಲಾದ ದೇವತೆಗಳಿಂದ ಸದಾ ಪೂಜಿತಳಾಗಿರುವಳೋ, ಅಂತಹ ಪ್ರಸಿದ್ಧಳಾದ ಅಜ್ಞಾನವನ್ನು ಸಂಪೂರ್ಣವಾಗಿ ತೊಡೆದು ಹಾಕುವ, ಭಗವತಿ ಸರಸ್ವತೀದೇವಿಯು ನನ್ನನ್ನು ಕಾಪಾಡಲಿ. 10

(ಸ್ಫಟಿಕದಂತೆ ಬಿಳಿಯ ಬಣ್ಣ)

## ಪಂಚಬ್ರಹ್ಮರ ಧ್ಯಾನ
## ಮೊದಲಿಗೆ ಬ್ರಹ್ಮನ ಧ್ಯಾನ
### (ನೃಸಿಂಹಪ್ರಾಸಾದದಲ್ಲಿ)

ತಿಳಿದ ವಿದ್ವಾಂಸನು ಬ್ರಹ್ಮನ ಚಿತ್ರವನ್ನು ಹೀಗೆ ಬರೆಸಬೇಕು. ಬ್ರಹ್ಮದೇವನಿಗೆ ನಾಲ್ಕು ಮುಖಗಳಿರಬೇಕು. ಸೌಮ್ಯನಾಗಿರಬೇಕು. ಬದ್ಧಪದ್ಮಾಸನದಲ್ಲಿ ಕುಳಿತಿದ್ದು ಸಂತೋಷಗೊಂಡಿರುವಂತೆ ಚಿತ್ರಿಸಬೇಕು. ಕೃಷ್ಣಾಜಿನವನ್ನು ಅಂದರೆ ಜಿಂಕೆಯ ಚರ್ಮವನ್ನು ತೊಟ್ಟಿರಬೇಕು. ಜಟೆಯನ್ನು ಕಟ್ಟಿದವನಾಗಿ, ನಾಲ್ಕು ತೋಳುಗಳುಳ್ಳವನಾಗಿ, ಏಳು ಹಂಸಗಳಿಂದ ಎಳೆಯಲ್ಪಡುವ ರಥದ ಮೇಲೆ ಕುಳಿತಿರಬೇಕು. ಬಲಭಾಗದ ಒಂದು ಕೈನಲ್ಲಿ ಕಮಂಡಲು ಇರಬೇಕು. ಎಲ್ಲ ಆಭರಣಗಳನ್ನೂ ಧರಿಸಿರಬೇಕು. ಎಲೈ ರಾಜನೇ, ಸಕಲ ಲಕ್ಷಣಗಳಿಂದ ಕೂಡಿ ಶಾಂತವಾದ ರೂಪವುಳ್ಳವನಾಗಿರಬೇಕು. ಕಮಲದ ಎಲೆಯ ಎಸಳುಗಳ ತುದಿಯಂತೆ ಕೆಂಪುಬಣ್ಣವುಳ್ಳ ದೇಹ ಅವನದಾಗಿರಬೇಕು. ಕಣ್ಣು ಮುಚ್ಚಿಕೊಂಡು ಧ್ಯಾನ ಮಾಡುತ್ತಿರುವಂತೆ ಆಚಾರ್ಯನು ಚಿತ್ರದಲ್ಲಾಗಲೀ ಅಥವಾ ವಾಸ್ತುಕರ್ಮದಲ್ಲಾಗಲೀ ಬ್ರಹ್ಮದೇವನನ್ನು ಹೀಗೆ ಬರೆಯಿಸಬೇಕು. **11-14A**

(ಬ್ರಹ್ಮನ ದೇಹದ ಬಣ್ಣ ಪಾದರಿಯ ಹೂವಿನಂತೆ ಎಳೆಗೆಂಪು)

130A/1
## ಲೋಕಪಾಲಬ್ರಹ್ಮನ ಧ್ಯಾನ
### (ನೃಸಿಂಹಪ್ರಾಸಾದದಲ್ಲಿ)

ಎಲೈ ದೊರೆಯೇ, ಬ್ರಹ್ಮನನ್ನು ಕಮಲಾಸನದ ಮೇಲೆ ಕುಳಿತಿರುವಂತೆ, ನಾಲ್ಕು ಮುಖಗಳಿಂದ ಕೂಡಿರುವಂತೆ ಚಿತ್ರಿಸಬೇಕು. ಆಗ ತಾನೇ ಹುಟ್ಟುವ ಸೂರ್ಯನಂತೆ ಅವನ ದೇಹಕಾಂತಿ ಕೆಂಪಗಿರಬೇಕು. ಧರ್ಮವನ್ನು ಬಲ್ಲ ವ್ಯಕ್ತಿಯಂತೆ ಬ್ರಹ್ಮನ ಆಕಾರವಿರಬೇಕು. ಅವನ ಕೈಯಲ್ಲಿ ಜಪಮಾಲೆ ಇರಬೇಕು. ಉಳಿದ ಎಲ್ಲ ಸ್ವರೂಪವನ್ನೂ ಹಿಂದೆ ಪಂಚಬ್ರಹ್ಮನಿಗೆ ಹೇಳಿರುವಂತೆಯೇ ಚಿತ್ರಿಸಬೇಕು. **15-15A**

(ಲೋಕಪಾಲಬ್ರಹ್ಮನ ದೇಹದ ಬಣ್ಣದಂತೆ ಪಾದರಿಯ ಹೂವಿನಂತೆ ಎಳೆಗೆಂಪು)

130A/2
## ಪ್ರಜಾಪತಿಬ್ರಹ್ಮನ ಧ್ಯಾನ
### (ನೃಸಿಂಹಪ್ರಾಸಾದದಲ್ಲಿ)

ಪ್ರಜಾಪತಿಬ್ರಹ್ಮನನ್ನು ಈ ಕೆಳಕಂಡಂತೆ ಚಿತ್ರಿಸಬೇಕು. ಅವನು ಹಂಸವಾಹನದ ಮೇಲೆ ಕುಳಿತಿರಬೇಕು. ಅವನಿಗೆ ನಾಲ್ಕು ಮುಖಗಳಿರಬಾರದು. ಅವನ ಎಡತೊಡೆಯ ಮೇಲೆ ಸಾವಿತ್ರೀದೇವಿಯು ಕುಳಿತಿರಬೇಕು. ಪ್ರಜಾಪತಿಯ ಉಳಿದ ರೂಪಗಳನ್ನು ಬ್ರಹ್ಮನಿಗೆ ಹೇಳಿದ ರೂಪಗಳಂತೆಯೇ ಚಿತ್ರಿಸಬೇಕು. **16-16A**

(ಈ ದೇವನ ದೇಹದ ಬಣ್ಣ ಪಾದರಿಯ ಹೂವಿನಂತೆ ಎಳೆಗೆಂಪು)

130A/3 ## ವಿಶ್ವಕರ್ಮನ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ಸೂರ್ಯನಂತೆ ಪ್ರಜ್ವಲಿಸುವ ರೂಪು ವಿಶ್ವಕರ್ಮನದು. ಇವನು ಎಲ್ಲರಿಗೂ ಪ್ರಭುವಾಗಿದ್ದಾನೆ. ಇವನಿಗೆ ಎರಡು ಕೈಗಳಿರಬೇಕು. ಮಹಾತ್ಮನಾದ ಇವನ ದೇಹದಿಂದ ತೇಜಸ್ಸು ಹೊರಸೂಸುತ್ತಿರಬೇಕು. ಇವನ ಕೈನಲ್ಲಿ ಇಕ್ಕಳವಿರಬೇಕು. ಈ ರೀತಿ ವಿಶ್ವಕರ್ಮನನ್ನು ಚಿತ್ರಿಸಬೇಕು. 17

(ಪಾದರಿಯ ಹೂವಿನಂತೆ ಇವನ ದೇಹದ ಬಣ್ಣ ಎಳೆಗೆಂಪು)

130A/4 ## ವಿಧಿಬ್ರಹ್ಮನ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ವಿಧಿಬ್ರಹ್ಮನಿಗೆ ನಾಲ್ಕು ಮುಖಗಳು, ನಾಲ್ಕು ಕಾಲುಗಳು, ನಾಲ್ಕು ಕೈಗಳು ಇರಬೇಕು. ಬಿಳಿಯ ಬಟ್ಟೆಗಳನ್ನು ತೊಟ್ಟಿರಬೇಕು. ಎಲ್ಲ ಬಗೆಯ ಆಭರಣಗಳನ್ನೂ ಹಾಕಿಕೊಂಡಿರಬೇಕು, ಧರ್ಮ ಕಾರ್ಯವನ್ನು ಅರಿಯುವಂತಹ ಮುಖಭಾವವಿರಬೇಕು. ಅವನ ಸ್ವರೂಪವು ಶಾಂತವಾಗಿರಬೇಕು. ಬಲ ಎಡ ಭಾಗಗಳ ಕೆಳಗಡೆಯ ಕೈಗಳಲ್ಲಿ ಕ್ರಮವಾಗಿ ಅಕ್ಷಮಾಲೆ, ಪುಸ್ತಕಗಳಿರಬೇಕು. ಬಲಭಾಗದ ಆಕಾರಗಳು ಅಂದರೆ ಮುಖಾದಿಗಳು ಕಾರ್ಯ ಪ್ರವೃತ್ತರಾಗಿರುವಂತಿರಬೇಕು. ಎಡಭಾಗದ ಮುಖವು ಅತ್ಯಂತ ಸುಂದರವಾಗಿರಬೇಕು. ಬಲ ಎಡ ಭಾಗಗಳ ಮೇಲುಗಡೆಯ ಕೈಗಳಲ್ಲಿ ಕಮಲಗಳಿರಬೇಕು. ಹೀಗೆ ಈ ಮೂರ್ತಿಯನ್ನು ರಚಿಸಬೇಕು. 18-20

(ಪಾದರಿಯ ಹೂವಿನಂತೆ ಇವನ ದೇಹದ ಬಣ್ಣ ಎಳೆಗೆಂಪು)

130B ## ಒಂಭತ್ತು ಜನ ಪ್ರಜೇಶ್ವರರ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಮರೀಚಿ, ಅಂಗಿರಸ್ಸು, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ಕರ್ದಮ, ಕಶ್ಯಪ, ದಕ್ಷ ಎಂಬುದಾಗಿ ಈ ಒಂಭತ್ತು ಜನರು ಬ್ರಹ್ಮನ ಪುತ್ರರು. 21

130B/1 ## ಮರೀಚಿಯ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಅಕ್ಷಮಾಲೆ ಮತ್ತು ಕಮಂಡಲುಗಳನ್ನು ಕೈಗಳಲ್ಲಿ ಹಿಡಿದಿರುವ, ತಲೆಯಲ್ಲಿ ಜಟೆಯನ್ನು ಕಟ್ಟಿ, ಮೈಗೆ ನಾರುಬಟ್ಟೆಗಳನ್ನು ತೊಟ್ಟಿರುವ, ಚಿನ್ನದ ಪರ್ವತದಂತೆ ಹೊಳೆಯುವ ದೇಹಕಾಂತಿಯುಳ್ಳ,

ಶ್ರೇಷ್ಠವಾದ ಓಂಕಾರವನ್ನು ಜಪಿಸುತ್ತಿರುವ, ಮೊದಲನೆಯ ಪ್ರಜಾಪತಿಯಾದ ಮರೀಚಿಯನ್ನು ನಮಸ್ಕರಿಸುತ್ತೇನೆ. 22-22A

(ಇವನ ದೇಹದ ಬಣ್ಣ ಚಿನ್ನದಂತೆ ಹೊಳೆಯುವ ಹಳದಿ)

130B/2 ಅಂಗಿರಸ್ಸಿನ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಹಣೆಯಲ್ಲಿ ಮೂರು ಎಳೆ ವಿಭೂತಿಪಟ್ಟೆಗಳನ್ನು ಧರಿಸಿರುವ, ಅಕ್ಷಮಾಲೆ ಮತ್ತು ಕಮಂಡಲುಗಳನ್ನು ಕೈಗಳಲ್ಲಿ ಹಿಡಿದಿರುವ, ಚಿನ್ನದಂತೆ ಹೊಳೆಯುವ ದೇಹಕಾಂತಿಯುಳ್ಳ, ಪ್ರಜಾಪತಿಯಾದ ಋಷಿ ಅಂಗಿರಸ್ಸನ್ನು ನಾನು ವಂದಿಸುತ್ತೇನೆ. 23

(ಇವನ ದೇಹದ ಬಣ್ಣ ಚಿನ್ನದಂತೆ ಹೊಳೆಯುವ ಹಳದಿ)

130B/3 ಅತ್ರಿಯ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಅತ್ರಿಯು ಮರೀಚಿಯ ಮಗನು. ಅಕ್ಷಮಾಲೆ ಮತ್ತು ಕಮಂಡಲುಗಳನ್ನು ಕೈಗಳಲ್ಲಿ ಹಿಡಿದಿದ್ದಾನೆ. ತಲೆಯಲ್ಲಿ ಜಟೆಯನ್ನು ಕಟ್ಟಿದ್ದಾನೆ. ಗಡ್ಡವನ್ನು ಬಿಟ್ಟಿದ್ದಾನೆ. ಇವನು ಶಾಂತರೂಪಿ. ಇವನ ದೇಹ ಕಪ್ಪು. ಇಂತಹ ಅತ್ರಿಯನ್ನು ಸದಾಕಾಲ ಭಜಿಸುತ್ತೇನೆ. 24

(ಇವನ ದೇಹದ ಬಣ್ಣ ಕಪ್ಪು)

130B/4 ಪುಲಸ್ತ್ಯನ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಶಾಂತನೂ, ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳನ್ನು ಗೆದ್ದಿರುವವನೂ, ಅಕ್ಷಮಾಲೆ ಮತ್ತು ಕಮಂಡಲುಗಳನ್ನು ಕೈಗಳಲ್ಲಿ ಹಿಡಿದಿರುವವನೂ, ಕಪ್ಪುಬಣ್ಣದ ಜಿಂಕೆಯ ಚರ್ಮವನ್ನು ಉಟ್ಟುಕೊಂಡು ಅದನ್ನೇ ಹೊದ್ದುಕೊಂಡಿರುವ, ಜಟೆಯನ್ನು ಕಟ್ಟಿರುವ, ಕಂದುಬಣ್ಣದ ಕಾಂತಿಯುಳ್ಳ, ಬ್ರಹ್ಮನ ಮಾನಸಪುತ್ರನಾದ, ಪುಲಸ್ತ್ಯಬ್ರಹ್ಮನನ್ನು ತಲೆಬಾಗಿ ನಮಿಸುತ್ತೇನೆ. 25-25A

(ಇವನ ದೇಹದ ಬಣ್ಣ ಕಂದು)

130B/5 ಪುಲಹನ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ತಪೋನಿಧಿಯಾದ, ಶಾಂತರೂಪನಾದ, ಜಪಮಾಲೆ ಮತ್ತು ಕಮಂಡಲುಗಳನ್ನು ಕೈಗಳಲ್ಲಿ ಹಿಡಿದಿರುವ, ಮೋಡದಂತೆ ಕಡುನೀಲಿಬಣ್ಣವುಳ್ಳ, ಪುಲಹನನ್ನು ಯಾವಾಗಲೂ ನಮಸ್ಕರಿಸುತ್ತೇನೆ. 26

(ಇವನ ದೇಹದ ಬಣ್ಣ ಮೋಡದಂತೆ ದಟ್ಟನೀಲಿ)

130B/6

## ಕ್ರತುವಿನ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಶ್ರೇಷ್ಠವಾದ ಯಾಗಗಳನ್ನು ಮಾಡುತ್ತಿರುವ ಬ್ರಹ್ಮರ್ಷಿಗಳ ಸಮೂಹದಿಂದ ಚೆನ್ನಾಗಿ ಸ್ತುತನಾದ, ಜಟೆಯನ್ನು ಕಟ್ಟಿ ಗಡ್ಡವನ್ನು ಬಿಟ್ಟಿರುವ, ಕೈಗಳಲ್ಲಿ ದಂಡ ಮತ್ತು ಕಮಂಡಲುಗಳನ್ನು ಹಿಡಿದುಕೊಂಡು ಕಂಗೊಳಿಸುತ್ತಿರುವ, ಏಳು ಜ್ವಾಲೆಗಳುಳ್ಳ ಅಗ್ನಿಯಂತೆ ಹೊಳೆಯುತ್ತಿರುವ, ತಪೋನಿಧಿಯಾದ, ಕ್ರತುವನ್ನು ನಾನು ನಮಸ್ಕರಿಸುತ್ತೇನೆ. 27-27A

(ಇವನ ದೇಹದ ಬಣ್ಣ ಕೆಂಪು)

131A/1

## ಕರ್ದಮನ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಜಟೆಯನ್ನು ಕಟ್ಟಿ ಕಿರೀಟವನ್ನು ತೊಟ್ಟು ಸುಂದರವಾದ ನೋಟವುಳ್ಳ, ಸಂಧ್ಯಾಕಾಲದ ಆಕಾಶವು ಹೇಗೆ ಕೆಂಪಗಿರುತ್ತದೋ ಹಾಗೆ ಕೆಂಪಾದ ಶರೀರವುಳ್ಳ, ಜಪಮಾಲೆ ಮತ್ತು ಕಮಂಡಲುಗಳನ್ನು ಕೈಗಳಲ್ಲಿ ಹಿಡಿದಿರುವ, ನಾರುಬಟ್ಟೆಯನ್ನು ನಡುವಿಗೆ ಕಟ್ಟಿ ಕಪ್ಪುಜಿಂಕೆಯ ಚರ್ಮವನ್ನು ಹೊದ್ದುಕೊಂಡಿರುವ, ಪಾಪವೆಂಬ ಕೆಸರನ್ನು ಒಣಗಿಸುವ ಅಂದರೆ ನಾಶಮಾಡುವ, ಕರ್ದಮವನ್ನು ತಲೆಬಾಗಿ ನಮಸ್ಕರಿಸುತ್ತೇನೆ. 28-28A

(ಇವನ ದೇಹದ ಬಣ್ಣ ನಸುಗೆಂಪು)

131A/2

## ಕಶ್ಯಪನ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಪರಬ್ರಹ್ಮಸ್ವರೂಪವಾದ ಓಂಕಾರವನ್ನು ಮನಸ್ಸಿನಲ್ಲಿ ತುಂಬಿಕೊಂಡಿರುವ, ಉತ್ತಮವಾದ ಚಿನ್ನದ ಕಾಂತಿಯಂತೆ ಹೊಳೆಯುತ್ತಿರುವ, ನಾರುಬಟ್ಟೆಯನ್ನು ಉಟ್ಟುಕೊಂಡು ನಾರುಬಟ್ಟೆಯನ್ನೇ ಹೊದ್ದುಕೊಂಡಿರುವ, ತಲೆಯಲ್ಲಿ ಗುಂಡಗೆ ಜಟೆಯನ್ನು ಕಟ್ಟಿ ಸುಂದರವಾಗಿ ಕಂಗೊಳಿಸುತ್ತಿರುವ, ಪ್ರಜೆಗಳನ್ನು ಸೃಷ್ಟಿಸುವ ಕಾರ್ಯದಲ್ಲಿ ತೊಡಗಿರುವ, ಜಪಮಾಲೆ ಮತ್ತು ಕಮಂಡಲುಗಳನ್ನು ಕೈಗಳಲ್ಲಿ ಹಿಡಿದುಕೊಂಡಿರುವ, ಶುಚಿರ್ಭೂತನಾದ, ಮರೀಚಿಯ ಮಗನಾದ ಕಶ್ಯಪನನ್ನು ತಲೆಬಾಗಿ ನಮಸ್ಕರಿಸುತ್ತೇನೆ. 29-30

(ಇವನ ದೇಹದ ಬಣ್ಣ ಚಿನ್ನದಂತೆ ಹೊಂಬಣ್ಣ)

131A/3 **ದಕ್ಷನ ಧ್ಯಾನ**

**(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)**

ಆಡಿನ ಮುಖ, ಎರಡು ಕಣ್ಣುಗಳು, ಎರಡು ಕೊಂಬುಗಳಿಂದ ಭೂಷಿತನಾದ, ಶಿವನಿಗೆ ಕೈಮುಗಿದು ನಮಸ್ಕರಿಸುತ್ತಾ ಶಿವನ ಧ್ಯಾನದಲ್ಲೇ ಮುಳುಗಿರುವ, ಸ್ವಯಂ ಜನಿಸಿದ, ಮೋಡದಂತೆ ಕಪ್ಪಾದ ಕಾಂತಿಯುಳ್ಳ, ಯಾಗದೀಕ್ಷಿತನಾದ, ದಕ್ಷನನ್ನು ವಂದಿಸುತ್ತೇನೆ. **31-31A**

**(ಇವನ ದೇಹದ ಬಣ್ಣ ಕಪ್ಪು)**

131A/4 **ಮರೀಚಿ ಮೊದಲಾದ ಋಷಿಗಳ ಧ್ಯಾನ**

**(ನೃಸಿಂಹಪ್ರಾಸಾದದಲ್ಲಿ)**

ಮರೀಚಿ, ಅತ್ರಿ, ಅಂಗಿರಸ್, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಭೃಗು, ನಾರದ, ಸಾವೇದ ಎಂಬ ಈ ಹತ್ತು ಜನರು ಬ್ರಹ್ಮರ್ಷಿಗಳು. ಇವರೆಲ್ಲರನ್ನೂ ಜಟೆಗಳನ್ನು ಕಟ್ಟಿಕೊಂಡಿರುವಂತೆ, ಗಡ್ಡವನ್ನು ಬಿಟ್ಟಿರುವಂತೆ, ಶಾಂತಸ್ವರೂಪದವರಂತೆ ಚಿತ್ರಿಸಬೇಕು. ಇವರೆಲ್ಲರಿಗೂ ಎರಡು ಕೈಗಳಿರಬೇಕು. ಕೃಶರಾಗಿರಬೇಕು ಅಂದರೆ ತುಂಬಾ ಸಣ್ಣಗಿರಬೇಕು. ಕೇವಲ ರಕ್ತನಾಳಗಳಿಂದಲೇ ಬದುಕಿರುವಂತೆ ಕಲ್ಪಿಸಬೇಕು. ಇವರೆಲ್ಲರಿಗೂ ಎರಡು ಕೈಗಳಿರಬೇಕು. ಈ ಕೈಗಳಲ್ಲಿ ಕಮಂಡಲು ಮತ್ತು ಜಪಮಾಲೆಗಳಿರಬೇಕು. ಇವರಲ್ಲಿ ನಾರದನು ದೇವಗಂಧರ್ವನು ಅಂದರೆ ದೇವತೆಗಳ ಗಾಯಕನು. ಇವನ ಎರಡು ಕೈಗಳಲ್ಲಿ ಜಪಮಾಲೆ ಮತ್ತು ಕಮಂಡಲುಗಳಿರಬೇಕು. ಗೆಳತಿಯಂತೆ ಇರುವ ವೀಣೆಯನ್ನು ಇವನ ಎಡಭುಜದಲ್ಲಿ ಮಾಲೆಯಂತೆ ತೂಗುಹಾಕಿರಬೇಕು. ಎಲೈ ರಾಜನೇ, ಒಂಭತ್ತು ಜನ ಮುನಿಗಳನ್ನು ಬಿಳಿಯ ಬಣ್ಣದಲ್ಲಿರುವಂತೆ ಚಿತ್ರಿಸಬೇಕು. **32-34**

**(ಇವರೆಲ್ಲರ ದೇಹದ ಬಣ್ಣ ಬಿಳಿ)**

ಮರೀಚಿ ಮೊದಲಾದ ಋಷಿಗಳು ಒಂದೇ ರೂಪವುಳ್ಳವರಾದ್ದರಿಂದ ಒಂದೇ ಋಷಿಯ ಚಿತ್ರವನ್ನು ಬರೆಯಲಾಗಿದೆ. ನಾರದನ ಚಿತ್ರವನ್ನು ಮಾತ್ರ ಪ್ರತ್ಯೇಕವಾಗಿ ಬರೆಯಲಾಗಿದೆ.

131B **ನೃಸಿಂಹಪ್ರಾಸಾದದಲ್ಲಿರುವಂತೆ ಸಪ್ತಋಷಿಗಳ ಧ್ಯಾನ,**
**ಪಾದ್ಮಪುರಾಣದಲ್ಲಿರುವಂತೆ ಅವರ ಬಣ್ಣ ಮತ್ತು ಹೆಸರುಗಳು**

ಗೌತಮ, ಭರದ್ವಾಜ, ವಿಶ್ವಾಮಿತ್ರ, ಕಾಶ್ಯಪ, ಜಮದಗ್ನಿ, ವಸಿಷ್ಠ, ಅತ್ರಿ - ಈ ಏಳು ಜನರು ವೈವಸ್ವತಮನ್ವಂತರದಲ್ಲಿ ಮಹರ್ಷಿಗಳು. **35**

## ಇವರ ಲಕ್ಷಣಗಳು

ಈ ಸಪ್ತರ್ಷಿಗಳು ಉದಾಸೀನರು ಅಂದರೆ ಯಾವ ಪಕ್ಷಕ್ಕೂ ಸೇರದೆ ತಮ್ಮ ಪಾಡಿಗೆ ತಾವು ಇರುವವರು. ಇವರೆಲ್ಲರೂ ಜನಿವಾರವನ್ನು ತೊಟ್ಟಿದ್ದಾರೆ. ಕಮಂಡಲು ಮತ್ತು ಜಪಮಾಲೆಗಳನ್ನು ಕೈಗಳಲ್ಲಿ ಹಿಡಿದಿದ್ದಾರೆ. ಜಟೆಗಳನ್ನು ಕಟ್ಟಿ ಗಡ್ಡ ಬಿಟ್ಟಿದ್ದಾರೆ. ಶಾಂತಚಿತ್ತರಾದ ಇವರು ಧ್ಯಾನ ಮಾಡುತ್ತಾ ಕುಳಿತಿದ್ದಾರೆ. ಈ ಸಪ್ತರ್ಷಿಗಳಲ್ಲಿ ವಸಿಷ್ಠನನ್ನು ಹೆಂಡತಿಯೊಡನಿರುವಂತೆ ಚಿತ್ರಿಸಬೇಕು. **36-36A**

ಪದ್ಮಪುರಾಣದಲ್ಲಿ ಹೇಳಿರುವಂತೆ ಇವರ ದೇಹದ ಬಣ್ಣಗಳು ಹೀಗಿವೆ -

| | | |
|---|---|---|
| ಗೌತಮ | ಚಿನ್ನದ ಬಣ್ಣ | |
| ಭರದ್ವಾಜ | ಆಕಾಶನೀಲಿ | |
| ವಿಶ್ವಾಮಿತ್ರ | ಹಳದಿ | |
| ಕಾಶ್ಯಪ | ಕಪ್ಪು | |
| ಜಮದಗ್ನಿ | ಕೆಂಪು | |
| ವಸಿಷ್ಠ | ಬಿಳಿ | |
| ಅತ್ರಿ | ಕಪ್ಪು | 37 |

**131B/1** ## ಗೌತಮನ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ರಹೂಗಣಋಷಿಯ ಮಗನಾದ, ಶಾಂತಸ್ವರೂಪನಾದ, ಹಣೆಯಲ್ಲಿ ಮೂರು ಎಳೆ ವಿಭೂತಿಪಟ್ಟೆಗಳನ್ನು ಬಳಿದುಕೊಂಡಿರುವ, ಜಪಮಾಲೆ, ಕಮಂಡಲು ಮತ್ತು ದಂಡಗಳನ್ನು ಹಿಡಿದುಕೊಂಡಿರುವ, ಗೌತಮನನ್ನು ಭಜಿಸುತ್ತೇನೆ. 38

(ಇವನ ದೇಹದ ಬಣ್ಣ ಚಿನ್ನದಂತಹ ಹಳದಿ ಬಣ್ಣ)

**131B/2** ## ಭರದ್ವಾಜನ ಧ್ಯಾನ

ಅತ್ಯಂತ ಶಾಂತನಾದ, ಸುಶೀಲೆಯ ಪತಿಯಾದ, ಶಕ್ತಿಶಾಲಿಯಾದ, ಜಪಮಾಲೆ ಮತ್ತು ದಂಡಗಳನ್ನು ಕೈಗಳಲ್ಲಿ ಹಿಡಿದಿರುವ, ಅಂಗಿರಸ್ಸನ ಮಗನಾದ ಭರದ್ವಾಜಮುನಿಯನ್ನು ನಾನು ಭಜಿಸುತ್ತೇನೆ. 39

(ಇವನ ದೇಹದ ಬಣ್ಣ ನೀಲಿ)

131B/3

## ವಿಶ್ವಾಮಿತ್ರನ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ಹಿರಣ್ಯಗರ್ಭನಾದ ಬ್ರಹ್ಮನಿಗೆ ಸಮಾನನಾದ, ತಲೆಯಲ್ಲಿ ಜಟೆಯನ್ನು ಕಟ್ಟಿ ಕಿರೀಟವನ್ನು ತೊಟ್ಟಿರುವ, ಕುಮುದ್ವತಿಯ ಪತಿಯಾದ, ಶಾಂತನಾದ, ವಿಶ್ವಾಮಿತ್ರನನ್ನು ನಾನು ಭಜಿಸುತ್ತೇನೆ. 40

(ಇವನ ದೇಹದ ಬಣ್ಣ ಹಳದಿ)

131B/4

## ಕಶ್ಯಪನ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ತಲೆಯಲ್ಲಿ ಜಟೆಯನ್ನು ಕಟ್ಟಿ, ಮೈಗೆ ನಾರುಬಟ್ಟೆಯನ್ನು ಉಟ್ಟಿರುವ, ಜಪಮಾಲೆಯನ್ನು ಕೈನಲ್ಲಿ ಹಿಡಿದಿರುವ, ಹೆಂಡತಿಯ ಜೊತೆಯಲ್ಲಿರುವ, ಮುನಿಶ್ರೇಷ್ಠನಾದ, ಮರೀಚಿಯ ಮಗನಾದ ಕಾಶ್ಯಪನನ್ನು ಧ್ಯಾನಮಾಡಬೇಕು. 41

(ಇವನ ದೇಹದ ಬಣ್ಣ ಕಪ್ಪು)

131B/5

## ಜಮದಗ್ನಿಯ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ಶಾಂತನಾದ, ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೆಂಬ ಆರು ಶತ್ರುಗಳನ್ನು ಗೆದ್ದಿರುವ, ಭೃಗುವಿನ ಮಗನಾದ, ಅತ್ಯಂತ ತೇಜಸ್ವಿಯಾದ, ದಂಡ ಮತ್ತು ಕಮಂಡಲುಗಳನ್ನು ಕೈಗಳಲ್ಲಿ ಹಿಡಿದಿರುವ, ಜಮದಗ್ನಿಯನ್ನು ನಾನು ನಮಸ್ಕರಿಸುತ್ತೇನೆ. 42

(ಇವನ ದೇಹದ ಬಣ್ಣ ಕೆಂಪು)

131B/6

## ವಸಿಷ್ಠನ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ತಪೋನಿಧಿಯಾದ, ಕರುಣಾಸಮುದ್ರನಾದ, ಮಿತ್ರಾವರುಣರಿಂದ ಜನಿಸಿದ, ಜಪಮಾಲೆ ಮತ್ತು ದಂಡಗಳನ್ನು ಕೈಗಳಲ್ಲಿ ಹಿಡಿದಿರುವ, ವರಗಳನ್ನು ನೀಡುವ, ವಸಿಷ್ಠನನ್ನು ನಾನು ನಮಸ್ಕರಿಸುತ್ತೇನೆ. 43

(ಇವನ ದೇಹದ ಬಣ್ಣ ಬಿಳಿ)

132A/1 ಅತ್ರಿಯ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ಬ್ರಹ್ಮನ ಮಗನಾದ, ದೇವನಾದ, ಜಪಮಾಲೆ ಮತ್ತು ಕಮಂಡಲುಗಳನ್ನು ಕೈಗಳಲ್ಲಿ ಹಿಡಿದಿರುವ, ಶಾಂತನಾದ, ಪಾಪರಹಿತನಾದ, ಅನಸೂಯೆಯ ಪತಿಯಾದ, ಅತ್ರಿಯನ್ನು ಭಜಿಸುತ್ತೇನೆ. 44

(ಇವನ ದೇಹದ ಬಣ್ಣ ಕಪ್ಪು)

132A/2 ಎರಡು ಕೈಗಳ ಅಗಸ್ತ್ಯನ ಧ್ಯಾನ

(ಮತ್ಸ್ಯಪುರಾಣದ ಪೂಜಾಕಲ್ಪದಲ್ಲಿ)

ಬಿಳಿಯ ಬಣ್ಣದ ದೇಹವುಳ್ಳ, ಎರಡು ಕೈಗಳನ್ನು ಹೊಂದಿರುವ, ಆ ಎರಡು ಕೈಗಳಲ್ಲಿ ಜಪಮಾಲೆ ಮತ್ತು ಕಮಂಡಲುಗಳನ್ನು ಹಿಡಿದುಕೊಂಡಿರುವ, ಶಾಂತರೂಪನಾದ, ಅಗಸ್ತ್ಯನೆಂಬ ಮುನಿಶ್ರೇಷ್ಠನು ಇದ್ದನು. 45

(ಇವನ ದೇಹದ ಬಣ್ಣ ಬಿಳಿ)

132A/3 ನಾಲ್ಕು ಕೈಗಳ ಅಗಸ್ತ್ಯನ ಧ್ಯಾನ

(ಪರ್ಜನ್ಯಕಲ್ಪದಲ್ಲಿ ಮತ್ತು ಮತ್ಸ್ಯಪುರಾಣದಲ್ಲಿ)

ಹೆಂಡತಿಯಾದ ಲೋಪಾಮುದ್ರೆಯ ಜೊತೆಯಲ್ಲಿರುವ, ಕುಂಭದಲ್ಲಿ ಜನಿಸಿದ, ಪಾಪರಹಿತನಾದ, ಸಮುದ್ರವನ್ನು ಕುಡಿದವನಾದ, ವಾತಾಪಿಯೆಂಬ ಪರ್ವತಶ್ರೇಷ್ಠಕ್ಕೆ ವಜ್ರಾಯುಧನಾದ ಅಂದರೆ ವಾತಾಪಿಯೆಂಬ ರಾಕ್ಷಸನನ್ನು ಸಂಹರಿಸಿದ, ವಾತಾಪಿಯ ತಮ್ಮನಾದ ಇಲ್ವಲನನ್ನು ಶಮನಗೊಳಿಸಿದ, ವಿಂಧ್ಯಪರ್ವತದ ಅಹಂಕಾರವನ್ನು ಮುರಿದ, ಬಿಳಿಯ ಬಣ್ಣದ ದೇಹವುಳ್ಳ, ತನ್ನ ನಾಲ್ಕು ಕೈಗಳಲ್ಲಿ ಕಮಂಡಲು, ಪುಸ್ತಕ, ಜಪಮಾಲೆ ಮತ್ತು ವ್ಯಾಖ್ಯಾನಮುದ್ರೆಗಳನ್ನು ಹಿಡಿದಿರುವ, ದೇವತೋತ್ತಮರಿಂದ ಸ್ತುತನಾದ, ಅಗಸ್ತ್ಯನನ್ನು ಮಳೆ ಬೀಳುವುದಕ್ಕೆ ಉಂಟಾಗುವ ತೊಂದರೆಗಳ ಶಮನಕ್ಕಾಗಿ ವಂದಿಸುತ್ತೇನೆ. 46

(ಇವನ ದೇಹದ ಬಣ್ಣ ಬಿಳಿ)

132A/4 ಎಂಟು ನದಿಗಳ ಧ್ಯಾನ, ಅವುಗಳ ಬಣ್ಣಗಳು ಮತ್ತು ಹೆಸರುಗಳು

(ಶೈವಾಗಮದಲ್ಲಿ)

ಗಂಗಾ, ಯಮುನಾ, ಗೋದಾವರೀ, ಕೃಷ್ಣಾ, ರೇವಾ ಅಂದರೆ ನರ್ಮದಾ, ತಾಪಿತಾ, ಕೃಷ್ಣವೇಣೀ ಮತ್ತು ಸರಸ್ವತೀ ಎಂಬುದಾಗಿ ಇವು ಕ್ರಮವಾಗಿ ಎಂಟು ನದಿಗಳ ಹೆಸರುಗಳು. ಎಲ್ಲ ನದಿಗಳಿಗೂ ಒಂದೇ

ರೀತಿಯ ಆಕಾರ. ನದೀದೇವತೆಗಳು ಎರಡು ಕೈಗಳನ್ನು ಹೊಂದಿವೆ. ಇವರೆಲ್ಲರ ಬಲಗಡೆಯ ಕೈಗಳಲ್ಲಿ ಕಮಂಡಲುಗಳು ಇವೆ. ಎಡಗಡೆಯ ಕೈಗಳಲ್ಲಿ ವರುಣಪಾಶವಿದೆ. ಮೊಸಳೆಯು ಇವರಿಗೆ ವಾಹನವಾಗಿದೆ. **47-48A**

ಈ ಎಂಟು ನದಿಗಳ ಬಣ್ಣಗಳು ಕ್ರಮವಾಗಿ ಪ್ರತ್ಯೇಕವಾಗಿ ಹೀಗಿವೆ -

| | |
|---|---|
| ಗಂಗಾನದೀ | ಬಿಳಿಯ ಬಣ್ಣ |
| ಯಮುನಾನದೀ | ನೀಲಿಯ ಬಣ್ಣ |
| ಗೋದಾವರೀನದೀ | ಎಳೆಗೆಂಪುಬಣ್ಣ |
| ಕೃಷ್ಣಾನದೀ | ಕಪ್ಪುಬಣ್ಣ |
| ರೇವಾನದೀ | ಚಿನ್ನದಂತಹ ಹಳದಿಬಣ್ಣ |
| ತಾಪಿತಾನದೀ | ಕೆಂಪುಬಣ್ಣ |
| ಕೃಷ್ಣವೇಣೀನದೀ | ಕೇಸರೀಬಣ್ಣದಂತಹ ಕೆಂಪುಬಣ್ಣ |
| ಸರಸ್ವತೀನದೀ | ಹಸುವಿನ ಹಾಲಿನಂತಹ ಬಿಳಿಯ ಬಣ್ಣ |

ಎಂಟು ನದಿಗಳ ರೂಪಗಳು ಒಂದೇ ಆಗಿವೆ. ಆದ್ದರಿಂದ ಒಂದೇ ಚಿತ್ರವನ್ನು ಬರೆಯಲಾಗಿದೆ. **49-49A**

132B/1

## ಹದಿನಾಲ್ಕು ಜನ ಮನುಗಳ ಧ್ಯಾನ, ಅವರ ಬಣ್ಣಗಳು, ತಂದೆಯರ, ಹೆಂಡತಿಯರ ಮತ್ತು ಮಕ್ಕಳ ಹೆಸರುಗಳು

ಶೈವಾಗಮ ಮತ್ತು ಸಿದ್ಧಾಂತಶೇಖರದಲ್ಲಿ ಹೇಳಿರುವಂತೆ ಹದಿನಾಲ್ಕು ಜನ ಮನುಗಳ ತಿಥಿಗಳು ಅಂದರೆ ಹುಟ್ಟಿದ ದಿನಗಳು, ಕಾಲಪ್ರಕಾಶಿಕೆಯಲ್ಲಿ ಹೇಳಿರುವಂತೆ ಮನ್ವಂತರದ ಋಷಿಗಳು, ಕೃಷ್ಣಕಥಾಸಾರ ಸಂಗ್ರಹ ಮತ್ತು ಪುರಾಣದಲ್ಲಿ ಹೇಳಿರುವಂತೆ ಮನ್ವಂತರಹರಿಗಳು ಭಾಗವತದಲ್ಲಿ ಹೇಳಿರುವಂತೆ ಇಂದ್ರರ ಹೆಸರುಗಳು.

### ಸ್ವಾಯಂಭುವಮನುವಿನ ಧ್ಯಾನ

### (ಶೈವಾಗಮ ಮತ್ತು ಸಿದ್ಧಾಂತಶೇಖರದಲ್ಲಿ)

ಹನ್ನೆರಡು ಜನ ಮನುಗಳಲ್ಲಿ ಮೊದನೆಯವನು ಸ್ವಾಯಂಭುವಮನು. (ಹಾಗಾಗಿ ಮೊದಲನೆಯದು ಸ್ವಾಯಂಭುವಮನ್ವಂತರ.) ಅವನು ಬ್ರಹ್ಮನ ಮಾನಸಪುತ್ರನು. ಅವನು ಮನು ಎಂಬ ಹೆಸರಿನಿಂದ ಸ್ಮೃತನಾಗಿದ್ದಾನೆ. ಕ್ಷತ್ರಿಯಧರ್ಮ ಪರಿಪಾಲಕನಾದ ಅವನ ಹೆಂಡತಿ ಶತರೂಪಾ. ವ್ರತ ಮತ್ತು

ಉತ್ತಾನಪಾದ ಇಬ್ಬರು ಅವನ ಗಂಡುಮಕ್ಕಳು. ಆಕೂತಿ, ದೇವಹೂತಿ, ಪ್ರಸೂತಿ ಎಂಬ ಮೂವರು ಹೆಣ್ಣು ಮಕ್ಕಳು. ಬಿಳಿಯ ಬಣ್ಣದ ದೇಹವುಳ್ಳವನು. ಕ್ಷತ್ರಿಯರಿಗೆ ಉಚಿತವಾದ ಅಸ್ತ್ರಗಳನ್ನು ಧರಿಸಿದ್ದಾನೆ. ವಿವಿಧ ಧರ್ಮಗಳು ಎಲ್ಲಿ ಇವೆಯೋ, ನಾಲ್ಕು ವರ್ಣಗಳನ್ನು ಆಶ್ರಯಿಸಿರುವ ಜನರು ಮಂಗಳವುಳ್ಳವರಾಗಿ ಎಲ್ಲಿ ಇರುವರೋ ಅಂತಹ ಎಲ್ಲ ಲೋಕಗಳ ಒಡೆಯನು ಅವನು. **50-52**

(ಇವನ ದೇಹದ ಬಣ್ಣ ಬಿಳಿ)

ದೇಹದ ಬಣ್ಣ ಬಿಳಿ, ತಂದೆ ಬ್ರಹ್ಮ, ಹೆಂಡತಿ ಶತರೂಪಾ, ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಇಬ್ಬರು ಗಂಡುಮಕ್ಕಳು, ಆಕೂತಿ, ದೇವಹೂತಿ, ಪ್ರಸೂತಿ ಈ ಮೂವರು ಹೆಣ್ಣುಮಕ್ಕಳು. ಆಶ್ವಯುಜ ಶುಕ್ಲ ನವಮೀ ಹುಟ್ಟಿದ ದಿನ. ಈ ಮೊದಲನೆಯ ಮನ್ವಂತರಕ್ಕೆ ಸ್ವಾಯಂಭುವಮನುವೇ ಮೊದಲನೆಯವನು. ಹರಿಯ ಹೆಸರು ಯಜ್ಞ, ಇಂದ್ರನ ಹೆಸರು ಯಜ್ಞ.

೧. ಮರೀಚಿ, ೨. ಕ್ರತು, ೩. ಅತ್ರಿ, ೪. ಅಂಗಿರಸ್, ೫. ಪುಲಹ, ೬. ವಸಿಷ್ಠ ಮತ್ತು ೭. ಪುಲಸ್ತ್ಯ - ಇವರುಗಳು ಈ ಸ್ವಾಯಂಭುವಮನ್ವಂತರದಲ್ಲಿ ಬರುವ ಋಷಿಗಳು.

**132B/2** ಸ್ವಾರೋಚಿಷಮನುವಿನ ಧ್ಯಾನ

(ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)

ಸ್ವಾರೋಚಿಷಮನ್ವಂತರ ಎರಡನೆಯದು. ಎರಡನೆಯ ಮನ್ವಂತರದ ಮನು ಸ್ವಾರೋಚಿಷ. ಅವನು ಅಗ್ನಿಯ ಮಗನಾಗಿ ಹುಟ್ಟಿದನು. ದ್ಯುಮ, ಸ್ತುಷೇಣ, ರೋಚಿಷ್ಮಾನ್ ಮೊದಲಾದವರು ಅವನ ಗಂಡುಮಕ್ಕಳು. ಅವನ ಹೆಂಡತಿ ಊರ್ಜಾ. ಬ್ರಾಹ್ಮಣಧರ್ಮವನ್ನು ಅನುಷ್ಠಾನ ಮಾಡುತ್ತಾನೆ. ಕಾದಚಿನ್ನದಂತೆ ಹೊಳೆಯುವ ದೇಹಕಾಂತಿ ಅವನದು. ಸಕಲಲೋಕಗಳಿಗೂ ಒಡೆಯನು ಅವನು. **53-54**

(ಇವನ ದೇಹದ ಬಣ್ಣ ಚಿನ್ನದಂತೆ ಹೊಳೆಯುವ ಹಳದಿ)

ತಂದೆ ಅಗ್ನಿ. ಹೆಂಡತಿ ಊರ್ಜಾ. ರೋಚಿಷ್ಮಾನ್ ಮೊದಲಾದವರು ಗಂಡುಮಕ್ಕಳು. ಅವನು ಹುಟ್ಟಿದ ದಿವಸ ಕಾರ್ತಿಕ ಶುದ್ಧ ದ್ವಾದಶೀ. ಸ್ವಾರೋಚಿಷಮನು ಈ ಎರಡನೆಯ ಮನ್ವಂತರಕ್ಕೆ ಮೊದಲನೆಯವನು. ಹರಿಯ ಹೆಸರು ವಿಭು. ಇಂದ್ರನ ಹೆಸರು ರೋಚನ.

**132B/3** ೧. ಊರ್ಜಸ್ತಂಭ, ೨. ವೃಷಭ, ೩. ಪ್ರಾಣ, ೪. ದತ್ತ, ೫. ಚಾರ್ವರಿ, ೬. ನಿಶ್ಚರ ಮತ್ತು ೭. ಅತ್ರಿ - ಇವರುಗಳು ಈ ಮನ್ವಂತರದಲ್ಲಿ ಬರುವ ಋಷಿಗಳು.

133A/1 **ಉತ್ತಮಮನುವಿನ ಧ್ಯಾನ**

**(ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)**

ಉತ್ತಮಮನ್ವಂತರ ಮೂರನೆಯದು. ಉತ್ತಮನು ಮೂರನೆಯ ಮನು. ಅವನು ಪ್ರಿಯವ್ರತನ ಮಗ. ಹೆಂಡತಿ ಉಷಾ. ಅಸ್ಯಂಜಯ, ಜಪಾಹೋತ್ರ ಮೊದಲಾದವರು ಅವನ ಗಂಡುಮಕ್ಕಳು. ಕೆಂಪುಬಣ್ಣದ ದೇಹ. ಅಸ್ತ್ರಗಳನ್ನು ಧರಿಸಿದ್ದಾನೆ. ಕ್ಷಾತ್ರಧರ್ಮವನ್ನು ಅನುಸರಿಸಿದವನು. ನಾಲ್ಕು ಯುಗಗಳು ಎಪ್ಪತ್ತೊಂದು ಬಾರಿ ಬಂದರೆ ಅದು ಒಂದು ಮನ್ವಂತರ. ಅಂತಹ ಮೂರನೆಯ ಮನ್ವಂತರಕ್ಕೆ ಅವನು ಒಡೆಯನು. **55-56**

**(ಇವನ ದೇಹದ ಬಣ್ಣ ಕೆಂಪು)**

೧. ಅರ್ಧಬಾಹು, ೨. ಸವನ, ೩. ಸುತಪಸ್, ೪. ರಜಸ್, ೫. ಘುನ, ೬. ಶುಕ್ಲ ಮತ್ತು ೭. ಗೋತ್ರ - ಇವರುಗಳು ಈ ಮನ್ವಂತರದಲ್ಲಿ ಬರುವ ಋಷಿಗಳು.

133A/2 **ತಾಮಸಮನುವಿನ ಧ್ಯಾನ**

**(ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)**

ತಾಮಸಮನ್ವಂತರ ನಾಲ್ಕನೆಯದು. ನಾಲ್ಕನೆಯ ಮನ್ವಂತರದ ಮನುವಿನ ಹೆಸರು ತಾಮಸ. ಅವನು ಮೂರನೆಯ ಮನು ಉತ್ತಮನ ಸೋದರ. ಹೆಂಡತಿಯ ಹೆಸರು ಖ್ಯಾತಿ. ಕೇತುಮಂತ ಮೊದಲಾದವರು ಅವನ ಗಂಡುಮಕ್ಕಳು. ತಾಮಸನೂ ಸಹ ಪ್ರಿಯವ್ರತನ ಮಗ. ಇವನು ಕ್ಷತ್ರಿಯಧರ್ಮವನ್ನು ಅನುಸರಿಸಿದವನು. ಹಸಿರು ಬಣ್ಣದ ದೇಹ. ಅಸ್ತ್ರಗಳನ್ನು ಧರಿಸಿದ್ದಾನೆ. ಇವನು ಸಕಲಲೋಕಗಳ ಪ್ರಭುವು. **57-58**

ಬಣ್ಣ ಹಸಿರು. ತಂದೆ ಪ್ರಿಯವ್ರತ. ಹೆಂಡತಿ ಖ್ಯಾತಿ. ಗಂಡುಮಕ್ಕಳು ಕೇತುಮಂತ ಮೊದಲಾದವರು. ಇವನು ಹುಟ್ಟಿದ ದಿವಸ ಭಾದ್ರಪದ ಶುಕ್ಲ ತೃತೀಯಾ. ಈ ನಾಲ್ಕನೆಯ ಮನ್ವಂತರಕ್ಕೆ ಇವನೇ ಮೊದಲನೆಯವನು. ಹರಿಯ ಹೆಸರು ಹರಿ. ಇಂದ್ರನ ಹೆಸರು ತ್ರಿಶಿಖ.

ಈ ಮನ್ವಂತರದಲ್ಲಿನ ಋಷಿಗಳು - ೧. ಜ್ಯೋತಿರ್ಧಾಮ, ೨. ಪೃಥು, ೩. ಚೈತ್ರ, ೪. ವಾನಕ, ೫. ಕಾವ್ಯ, ೬. ಪೀವರ ಮತ್ತು ೭. ಅಗ್ನಿ.

133B/1 **ರೈವತಮನುವಿನ ಧ್ಯಾನ**

**(ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)**

ಐದನೆಯದು ರೈವತಮನ್ವಂತರ. ಐದನೆಯ ಮನ್ವಂತರದ ಮನು ರೈವತ. ಹಿಂದೆ ಹೇಳಿದ ಉತ್ತಮ

ಮತ್ತು ತಾಮಸರ ಸೋದರನಿವನು. ವಿಂಧ್ಯಾವಳಿಯು ಇವನ ಹೆಂಡತಿ. ದತ್ತಕ, ಅರ್ಜುನ ಮೊದಲಾದವರು ಇವನ ಗಂಡುಮಕ್ಕಳು. ಕ್ಷತ್ರಿಯಧರ್ಮವನ್ನು ಅನುಸರಿಸಿರುವವನು. ಇವನೂ ಕೂಡ ಪ್ರಿಯವ್ರತನ ಮಗ. ಕಪ್ಪು ಶರೀರ ಇವನದು. ಸದಾ ಖಡ್ಗ ಮೊದಲಾದ ಆಯುಧಗಳನ್ನು ಹಾಗೂ ಅನೇಕ ಅಸ್ತ್ರಗಳನ್ನೂ ಹಿಡಿದುಕೊಂಡಿರುವವನು. ಎಲ್ಲ ಲೋಕಗಳಿಗೂ ಒಡೆಯವನಿವನು. **59-60**

(ಇವನ ದೇಹದ ಬಣ್ಣ ನೀಲಿ)

ತಂದೆ ಪ್ರಿಯವ್ರತ. ಹೆಂಡತಿ ವಿಂಧ್ಯಾವಳಿ. ಮಕ್ಕಳು ದತ್ತಕ ಮೊದಲಾದವರು. ಫಾಲ್ಗುಣ ಕೃಷ್ಣ ಅಮಾವಾಸ್ಯಾ ಇವನು ಹುಟ್ಟಿದ ದಿವಸ. ಈ ಐದನೆಯ ಮನ್ವಂತರಕ್ಕೆ ರೈವತನು ಆದಿ. ಹರಿಯ ಹೆಸರು ವೈಕುಂಠ. ಇಂದ್ರನ ಹೆಸರು ವಿಭು.

ಈ ಮನ್ವಂತರದಲ್ಲಿನ ಋಷಿಗಳು - ೧. ಹಿರಣ್ಯರೋಮ, ೨. ವೇದಶ್ರೀ, ೩. ಊರ್ಧ್ವಬಾಹು, ೪. ಸೋಮಪ, ೫. ವೇದಬಾಹು, ೬. ಸುಧಾಮ ಮತ್ತು ೭. ಸುತಾಪ.

**133B/2** ಚಾಕ್ಷುಷಮನುವಿನ ಧ್ಯಾನ

(ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)

ಆರನೆಯದು ಚಾಕ್ಷುಷಮನ್ವಂತರ. ಆರನೆಯ ಮನ್ವಂತರದ ಮನು ಚಾಕ್ಷುಷನೆಂದು ಪ್ರಸಿದ್ಧನಾಗಿದ್ದಾನೆ. ಇವನು ಚಕ್ಷುಸ್ಸನ ಮಗ. ಸೂರ್ಯನ ಮೊಮ್ಮಗ. ಅವನ ಹೆಂಡತಿ ಕಾಂತಿ. ಅವನು ಓದಿರುವ ಶಾಸ್ತ್ರಗಳನ್ನು ಹೇಳುವೆನು ಕೇಳು. ಪುರುಷ, ಸುದ್ಯುಮ್ನ ಮೊದಲಾದವರು ಅವನ ಗಂಡುಮಕ್ಕಳು. ಕೆಂಪುಬಣ್ಣದ ದೇಹ. ಬ್ರಾಹ್ಮಣವ್ರತವನ್ನು ಧರಿಸಿರುವವನು. ಕಾಂತಿಯುಕ್ತನಾದವನು. ಎಲ್ಲ ಲೋಕಗಳ ಪ್ರಭು ಇವನು. **61-62**

(ಇವನ ದೇಹದ ಬಣ್ಣ ಕೆಂಪು)

ತಂದೆ ಚಕ್ಷುಸ್ಸು, ಹೆಂಡತಿ ಕಾಂತಿ, ಗಂಡುಮಕ್ಕಳು ಪುರುಷ, ಸುದ್ಯುಮ್ನ ಮೊದಲಾದವರು. ಪುಷ್ಯ ಶುದ್ಧ ಏಕಾದಶೀ ಹುಟ್ಟಿದ ದಿವಸ. ಈ ಮನ್ವಂತರಕ್ಕೆ ಇವನೇ ಮೊದಲನೆಯವನು. ಹರಿಯ ಹೆಸರು ಅಜಿತ. ಇಂದ್ರನ ಹೆಸರು ಮಂದ್ರದ್ಯುಮ್ನ.

ಈ ಮನ್ವಂತರದ ಋಷಿಗಳು - ೧. ಹವಿರ್ಭಾನು, ೨. ಸುಮೇಧಸ್, ೩. ಸಹಿಷ್ಣು, ೪. ವಿರಜ, ೫. ಮಧು, ೬. ಋಷಭ ಮತ್ತು ೭. ಅತಿನಾಮ.

**134A/1** ವೈವಸ್ವತಮನುವಿನ ಧ್ಯಾನ

(ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)

ಏಳನೆಯದು ವೈವಸ್ವತಮನ್ವಂತರ. ಏಳನೆಯ ಮನ್ವಂತರಕ್ಕೆ ಸೂರ್ಯನ ಮಗನಾದ ವೈವಸ್ವತನು ಮನು. ಇಕ್ಷ್ವಾಕು ಮೊದಲಾದವರು ಇವನ ಗಂಡುಮಕ್ಕಳು. ಪತ್ನಿಯ ಹೆಸರು ರಿಷ್ಟಿ ಎಂದು ಹೇಳಲಾಗಿದೆ. ಕ್ಷತ್ರಿಯಧರ್ಮ ಮತ್ತು ಬ್ರಾಹ್ಮಣಧರ್ಮ ಎರಡನ್ನೂ ಅನುಸರಿಸಿದವನು. ಸ್ಮೃತಿಗಳನ್ನು ರಚಿಸಿದವನು. ರಾಜನಾದ ಇವನ ದೇಹಕಾಂತಿ ಚಿನ್ನದಂತಹ ಹಳದಿ. ಕಮಲದ ಕಣ್ಣುಗಳುಳ್ಳವನು. ಇವನು ಎಲ್ಲ ಜಗತ್ತುಗಳ ಪ್ರಭುವೆಂದು ಹೇಳಲಾಗಿದೆ. **63-64**

(ಇವನ ದೇಹದ ಬಣ್ಣ ಚಿನ್ನದಂತೆ ಹೊಂಬಣ್ಣ)

ತಂದೆ ಸೂರ್ಯ. ಹೆಂಡತಿ ರಿಷ್ಟಿ. ಇಕ್ಷ್ವಾಕು ಮೊದಲಾದವರು ಗಂಡುಮಕ್ಕಳು. ಆಷಾಢ ಶುದ್ಧ ದ್ವಾದಶೀ ಇವನು ಹುಟ್ಟಿದ ದಿವಸ. ಈ ಮನ್ವಂತರಕ್ಕೆ ವೈವಸ್ವತನೇ ಆದಿ. ಹರಿಯ ಹೆಸರು ವಾಮನ. ಇಂದ್ರನ ಹೆಸರು ಪುರಂದರ.

ಈ ಮನ್ವಂತರದಲ್ಲಿ ಬರುವ ಋಷಿಗಳ ಹೆಸರುಗಳು - ೧. ಕಶ್ಯಪ, ೨. ಅತ್ರಿ, ೩. ಭರದ್ವಾಜ, ೪. ವಿಶ್ವಾಮಿತ್ರ, ೫. ಗೌತಮ, ೬. ಜಮದಗ್ನಿ ಮತ್ತು ೭. ವಸಿಷ್ಠ.

134A/2 **ಸೂರ್ಯಸಾವರ್ಣಿಕಮನುವಿನ ಧ್ಯಾನ**

(ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)

ಎಂಟನೆಯದು ಸೂರ್ಯಸಾವರ್ಣಿಕಮನ್ವಂತರ. ಎಂಟನೆಯ ಮನ್ವಂತರವು ಮುಂದೆ ಬರಲಿದೆ. ಇದಕ್ಕೆ ಸಾವರ್ಣಿಯು ಮನುವಾಗುವನು. ನಿರ್ಮೋಹ, ವಿರಜಸ್ಕ ಮೊದಲಾದವರು ಇವನ ಮಕ್ಕಳಾಗಿ ಹುಟ್ಟುವರು. ದೇವಿಕಾ ಇವನ ಹೆಂಡತಿಯಾಗಿರುವಳು. ಇವನು ಕ್ಷತ್ರಿಯನು. ಲೋಕಪ್ರಸಿದ್ಧನು. ಮೋಡದಂತೆ ಕಪ್ಪುಬಣ್ಣದ ದೇಹವನ್ನು ಹೊಂದಿದ್ದಾನೆ. ನಾಲ್ಕು ಯುಗಗಳು ಎಪ್ಪತ್ತೊಂದು ಬಾರಿ ಬಂದರೆ ಆಗ ಒಂದು ಮನ್ವಂತರ. ಅಂತಹ ಎಂಟನೆಯ ಮನ್ವಂತರಕ್ಕೆ ಇವನು ಪ್ರಭುವೆಂದು ಹೇಳಲ್ಪಟ್ಟಿದ್ದಾನೆ. **65-66**

(ಇವನ ದೇಹದ ಬಣ್ಣ ಮೋಡದಂತೆ ಕಪ್ಪು)

ತಂದೆ ಸೂರ್ಯ. ಹೆಂಡತಿ ದೇವಿಕಾ. ನಿರ್ಮೋಹ, ವಿರಜಸ್ಕ ಮೊದಲಾದವರು ಗಂಡುಮಕ್ಕಳು. ಹುಟ್ಟಿದ ದಿವಸ ಮಾಘ ಶುಕ್ಲ ಸಪ್ತಮೀ. ಈ ಮನ್ವಂತರಕ್ಕೆ ಸೂರ್ಯಸಾವರ್ಣಿಕಮನುವು ಆದಿಪುರುಷ. ಹರಿಯ ಹೆಸರು ಸಾರ್ವಭೌಮ. ಇಂದ್ರನ ಹೆಸರು ಬಲಿ.

ಈ ಮನ್ವಂತರದ ಋಷಿಗಳು - ೧. ವ್ಯಾಸ, ೨. ಪರಶುರಾಮ, ೩. ಗಾಲವ, ೪. ದೀಪ್ತಿಮಾನ್, ೫. ಕೃಪ, ೬. ಅಶ್ವತ್ಥಾಮ ಮತ್ತು ೭. ಋಷ್ಯಶೃಂಗ.

134B/1

## ದಕ್ಷಸಾವರ್ಣಿಕಮನುವಿನ ಧ್ಯಾನ

### (ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)

ಒಂಭತ್ತನೆಯದು ದಕ್ಷಸಾವರ್ಣಿಕಮನ್ವಂತರ. ಒಂಭತ್ತನೆಯ ಮನ್ವಂತರಕ್ಕೆ ದಕ್ಷ-ಸಾವರ್ಣಿಯು ಮನುವಾಗುವನು. ಇವನು ವರುಣನಿಂದ ಹುಟ್ಟಿದವನು. ಹೆಂಡತಿ ಪರಾ. ಧೃಷ್ಟಕೇತು ಮೊದಲಾದವರು ಅವನ ಗಂಡುಮಕ್ಕಳೆಂದು ಹೇಳಲಾಗಿದೆ. ಇವನು ಕ್ಷತ್ರಿಯನು. ಲೋಕಪ್ರಸಿದ್ಧನು. ಕೆಂಪುಬಣ್ಣದ ದೇಹವುಳ್ಳವನು. ಎಪ್ಪತ್ತೊಂದು ಯುಗಗಳಿಗೆ ಆಗುವ ಒಂದು ಯುಗಕ್ಕೆ ಇವನು ಪ್ರಭುವೆಂದು ಹೇಳಲ್ಪಟ್ಟಿದ್ದಾನೆ. **67-68**

### (ಇವನ ದೇಹದ ಬಣ್ಣ ಕೆಂಪು)

ತಂದೆ ವರುಣ. ಹೆಂಡತಿ ಪರಾ. ಗಂಡುಮಕ್ಕಳು ಧೃಷ್ಟಕೇತು ಮೊದಲಾದವರು. ಇವನು ಹುಟ್ಟಿದ ದಿವಸ ಫಾಲ್ಗುಣ ಶುಕ್ಲ ಪೂರ್ಣಿಮೆ. ಈ ಮನ್ವಂತರಕ್ಕೆ ದಕ್ಷಸಾವರ್ಣಿಕ ಮನು ಆದಿಪುರುಷ. ಹರಿಯ ಹೆಸರು ಋಷಭ. ಇಂದ್ರನ ಹೆಸರು ಅದ್ಭುತ.

ಈ ಮನ್ವಂತರದಲ್ಲಿನ ಋಷಿಗಳ ಹೆಸರುಗಳು - ೧. ಮೇಧಾತಿಥಿ, ೨. ವಸು, ೩. ಸತ್ಯ, ೪. ಸವನ, ೫. ಹವ್ಯವಾಹನ, ೬. ಜ್ಯೋತಿಷ್ಮಾನ್ ಮತ್ತು ೭. ದ್ಯುತಿಮಾನ್.

134B/2

## ಬ್ರಹ್ಮಸಾವರ್ಣಿಕಮನುವಿನ ಧ್ಯಾನ

### (ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)

ಬ್ರಹ್ಮಸಾವರ್ಣಿಮನ್ವಂತರವು ಹತ್ತನೆಯದು. ಇದಕ್ಕೆ ಬ್ರಹ್ಮಸಾವರ್ಣಿಯು ಮನುವಾಗುವನು. ಇವನು ಉಪಶ್ಲೋಕಮುನಿಯ ಮಗನು. ಭೂರಿಷೇಣ ಮೊದಲಾದವರು ಇವನ ಗಂಡುಮಕ್ಕಳು. ಇವನ ಹೆಂಡತಿ ಬೃಹತೀ ಎಂದು ಹೇಳಲಾಗಿದೆ. ಇವನು ಬ್ರಾಹ್ಮಣನು. ಲೋಕಪ್ರಸಿದ್ಧನಾದವನು. ಬಿಳಿಯ ಬಣ್ಣದ ದೇಹವುಳ್ಳವನು. ಹಿಂದೆ ಹೇಳಿದ ಮನುಗಳಂತೆ ಇವನೂ ಸಹ ಎಲ್ಲ ಲೋಕಗಳ ಒಡೆಯನು. **69-70**

### (ಇವನ ದೇಹದ ಬಣ್ಣ ಬಿಳಿ)

ತಂದೆ ಉಪಶ್ಲೋಕಮುನಿ. ಹೆಂಡತಿ ಬೃಹತೀ. ಭೂರಿಷೇಣ ಮೊದಲಾದವರು ಇವನ ಗಂಡುಮಕ್ಕಳು. ಇವನು ಹುಟ್ಟಿದ ದಿವಸ ಆಷಾಢ ಶುಕ್ಲ ಪೂರ್ಣಿಮೆ. ಬ್ರಹ್ಮಸಾವರ್ಣಿಕ ಮನ್ವಾದಿ ಎಂದು ಈ ಮನ್ವಂತರಕ್ಕೆ ಹೆಸರು. ಇದಕ್ಕೆ ಬ್ರಹ್ಮಸಾವರ್ಣಿಕನು ಮನು. ಹರಿಯ ಹೆಸರು ವಿಷ್ವಕ್ಸೇನ. ಇಂದ್ರನ ಹೆಸರು ಶಂಭು.

ಈ ಮನ್ವಂತರದ ಋಷಿಗಳು - ೧. ಆಪೋಮೂರ್ತಿ, ೨. ಹವಿಷ್ಮಂತ, ೩. ನಾಭಾಗ, ೪. ಅಪ್ರತಿಮ, ೫. ವಸಿಷ್ಠ, ೬. ಸುಕೃತಿ ಮತ್ತು ೭. ಸತ್ಯ.

135A/1 **ಧರ್ಮಸಾವರ್ಣಿಕಮನುವಿನ ಧ್ಯಾನ**

**(ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)**

ಹನ್ನೊಂದನೆಯದ ಧರ್ಮಸಾವರ್ಣಿಕಮನ್ವಂತರ. ಈ ಹನ್ನೊಂದನೆಯ ಮನ್ವಂತರಕ್ಕೆ ಧರ್ಮಸಾವರ್ಣಿಯು ಮನುವಾಗುವನು. ಇವನು ಆತ್ಮಜ್ಞಾನಿ. ಧರ್ಮಪುತ್ರನು. ಸತ್ಯಧರ್ಮ ಮೊದಲಾದವರು ಇವನ ಗಂಡುಮಕ್ಕಳೆಂದು ತಿಳಿಸಲಾಗಿದೆ. ಇವನ ಹೆಂಡತಿ ದೀಕ್ಷಾ. ಕೆಂಪುಬಣ್ಣದ ದೇಹವುಳ್ಳವನು. ಕ್ಷತ್ರಿಯ ಧರ್ಮವನ್ನು ಅನುಸರಿಸಿರುವವನು. ನಾಲ್ಕು ಯುಗಗಳು ಎಪ್ಪತ್ತೊಂದು ಬಾರಿ ಬಂದರೆ ಅದು ಒಂದು ಮನ್ವಂತರ. ಅಂತಹ ಈ ಹತ್ತನೆಯ ಮನ್ವಂತರಕ್ಕೆ ಇವನು ಪ್ರಭುವೆಂದು ಹೇಳಲಾಗಿದೆ. **71-72**

**(ಇವನ ದೇಹದ ಬಣ್ಣ ಕೆಂಪು)**

ತಂದೆ ಧರ್ಮ. ಹೆಂಡತಿ ದೀಕ್ಷಾ. ಸತ್ಯಧರ್ಮ ಮೊದಲಾದವರು ಗಂಡುಮಕ್ಕಳು. ಶ್ರಾವಣ ಕೃಷ್ಣಾಷ್ಟಮೀ ಇವನು ಹುಟ್ಟಿದ ದಿವಸ. ಧರ್ಮಸಾವರ್ಣಿಕಮನ್ವಾದಿಯೆಂದು ಈ ಮನ್ವಂತರಕ್ಕೆ ಹೆಸರು. ಹರಿಯ ಹೆಸರು ಧರ್ಮಸೇತು. ಇಂದ್ರನ ಹೆಸರು ವಿಧೃತಿ.

ಈ ಮನ್ವಂತರದ ಋಷಿಗಳ ಹೆಸರುಗಳು - ೧. ಹವಿಷ್ಮಂತ, ೨. ವರಿಷ್ಠ, ೩. ಅಗ್ನಿತೇಜಸ್, ೪. ನಿಶ್ಚಲ, ೫. ಅರುಣಿ, ೬. ವೃಷ್ಟಿ ಮತ್ತು ೭. ಅನಘ.

135A/2 **ರುದ್ರಸಾವರ್ಣಿಕಮನುವಿನ ಧ್ಯಾನ**

**(ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)**

ಹನ್ನೆರಡನೆಯದು ರುದ್ರಸಾವರ್ಣಿಕಮನ್ವಂತರ. ರುದ್ರಸಾವರ್ಣಿಯು ಮುಂದೆ ಹುಟ್ಟಲಿರುವನು. ಇವನು ರುದ್ರನ ಮಗ. ಹಾಗೆಯೇ ಹನ್ನೆರಡನೆಯ ಮನ್ವಂತರದ ಮನು ಇವನು. ದೇವಾಧಿದೇವತೆಗಳು ಇವನ ಮಕ್ಕಳುಗಳು. ಇವನ ಹೆಂಡತಿ ಆರ್ಯಾ ಎಂದು ಸ್ಮೃತಳಾಗಿದ್ದಾಳೆ. ಇವನು ಕ್ಷತ್ರಿಯಧರ್ಮವನ್ನು ಆಶ್ರಯಿಸಿದವನು. ಕಪ್ಪುಬಣ್ಣದ ದೇಹವುಳ್ಳವನು. ಪ್ರತಾಪಶಾಲಿ. ಇವನು ಕಠೋರವಾದ ಶಾಸನ ಮಾಡುವವನು. ಅಂದರೆ ಅತ್ಯಂತ ತೀಕ್ಷ್ಣವಾಗಿ ಪ್ರಜಾಪರಿಪಾಲನೆಯನ್ನು ಮಾಡುವನು. ಸಕಲ ಲೋಕಗಳಿಗೆ ಇವನು ಒಡೆಯನು. **73-74**

**(ಇವನ ದೇಹದ ಬಣ್ಣ ಎಳೆನೀಲಿ)**

ತಂದೆ ರುದ್ರ. ಹೆಂಡತಿ ಆರ್ಯಾ. ದೇವಾನುದೇವತೆಗಳು ಇವನ ಮಕ್ಕಳುಗಳು. ಕಾರ್ತಿಕ ಶುಕ್ಲ ಪೂರ್ಣಿಮೆ ಇವನು ಹುಟ್ಟಿದ ದಿವಸ. ರುದ್ರಸಾವರ್ಣಿಕಮನ್ವಾದಿ ಎಂದು ಈ ಮನ್ವಂತರಕ್ಕೆ ಹೆಸರು. ಹರಿಯ ಹೆಸರು ಸ್ವಾಧಾಮ. ಇಂದ್ರನ ಹೆಸರು ಋತುಧಾಮ.

ಈ ಮನ್ವಂತರದ ಋಷಿಗಳು - ೧. ತಪೋನಿಧಿ, ೨. ಸುತಾಪ, ೩. ತಪಸ್ವೀ, ೪. ತಪೋಮತಿ, ೫. ತಪೋಧೃತಿ, ೬. ದ್ಯುತಿ ಮತ್ತು ೭. ತಪೋಮೂರ್ತಿ.

135B/1

## ವೇದಸಾವರ್ಣಿಕಭೌತ್ಯಮನುಧ್ಯಾನ

### (ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)

ಹದಿಮೂರನೆಯ ಮನ್ವಂತರ ವೇದಸಾವರ್ಣಿಕಮನ್ವಂತರ. ವೇದಸಾವರ್ಣಿ ಎಂಬುವವನು ಹದಿಮೂರನೆಯ ಮನ್ವಂತರದ ಮನುವಾಗಿ ಹುಟ್ಟುವನು. ಇವನು ಆತ್ಮಜ್ಞಾನಿ. ಇವನು ವೇದಶಿರಸ್ಸಿನ ಮಗ. ಬ್ರಾಹ್ಮಣಧರ್ಮವನ್ನು ಅನುಸರಿಸಿರುವವನು. ಚಿತ್ರಸೇನ ಮೊದಲಾ-ದವರು ಇವನ ಮಕ್ಕಳು. ಇವನ ಪ್ರಿಯಳಾದ ಹೆಂಡತಿ ತ್ರಯೀ. ನಾಲ್ಕು ಯುಗಗಳು ಎಪ್ಪತ್ತೊಂದು ಬಾರಿ ಬಂದರೆ ಅದು ಒಂದು ಮನ್ವಂತರ. ಅಂತಹ ಹದಿಮೂರನೆಯ ಮನ್ವಂತರಕ್ಕೆ ಇವನು ಒಡೆಯನು. 75-76

### (ಇವನ ದೇಹದ ಬಣ್ಣ ಬಿಳಿ)

ತಂದೆ ವೇದಶಿರಸ್. ಹೆಂಡತಿ ತ್ರಯೀ. ಚಿತ್ರಸೇನ ಮೊದಲಾದವರು ಗಂಡುಮಕ್ಕಳು. ಚೈತ್ರ ಶುಕ್ಲ ಪೂರ್ಣಿಮೆ ಇವನು ಹುಟ್ಟಿದ ದಿವಸ. ವೇದಸಾವರ್ಣಿಕಮನ್ವಾದಿಯೆಂದು ಈ ಮನ್ವಂತರಕ್ಕೆ ಹೆಸರು. ಹರಿಯ ಹೆಸರು ಯೋಗೀಶ್ವರ. ಇಂದ್ರನ ಹೆಸರು ದಿವಸ್ಪತಿ.

ಈ ಮನ್ವಂತರದಲ್ಲಿ ಬರುವ ಋಷಿಗಳು - ೧. ನಿಷ್ಪ್ರವಾಪ, ೨. ತತ್ತ್ವದರ್ಶೀ, ೩. ಧೃತಿಮಾನ್, ೪. ಅವ್ಯಯ, ೫. ನಿರುತ್ಸುಕ, ೬. ಸುತಾಪ ಮತ್ತು ೭. ನಿರ್ಮೋಹ.

135B/2

## ಇಂದ್ರಸಾವರ್ಣಿಕರೌಚ್ಯಮನುಧ್ಯಾನ

### (ಶೈವಾಗಮದಲ್ಲಿ ಮತ್ತು ಸಿದ್ಧಾಂತಶೇಖರದಲ್ಲಿ)

ಹದಿನಾಲ್ಕನೆಯ ಮನ್ವಂತರದ ಮನು ಇಂದ್ರಸಾವರ್ಣಿ ಎಂದು ಹೇಳಲ್ಪಟ್ಟಿದ್ದಾನೆ. ಹಾಗಾಗಿ ಇದಕ್ಕೆ ಇಂದ್ರಸಾವರ್ಣಿಕಮನ್ವಂತರ ಎಂದು ಹೆಸರು. ಇವನು ಇಂದ್ರನ ಮಗ. ಉರುಗಂಭೀರಕ ಮೊದಲಾದವರು ಇವನ ಗಂಡುಮಕ್ಕಳು. ನೀಲಿಯ ಬಣ್ಣದ ದೇಹವುಳ್ಳವನು. ಬಿಲ್ಲನ್ನು ಹಿಡಿದಿದ್ದಾನೆ. ಕ್ಷತ್ರಿಯ ಧರ್ಮವನ್ನು ಅನುಸರಿಸಿರುವವನು. ಮತಿ ಎನ್ನುವವಳು ಇವನ ಹೆಂಡತಿ. ಇವನು ಎಲ್ಲ ಲೋಕಗಳಿಗೂ ಪ್ರಭುವಾಗಿದ್ದಾನೆ. 77-78

(ಇವನ ದೇಹದ ಬಣ್ಣ ನೀಲಿ)

ತಂದೆ ಇಂದ್ರ. ಹೆಂಡತಿ ಮತಿ. ಉರುಗಂಭೀರಕ ಮೊದಲಾದವರು ಪುತ್ರರು. ಜ್ಯೇಷ್ಠ ಶುಕ್ಲ ಪೂರ್ಣಿಮೆ ಇವನು ಹುಟ್ಟಿದ ದಿವಸ. ಈ ಮನ್ವಂತರಕ್ಕೆ ಇಂದ್ರಸಾವರ್ಣಿಕಮನ್ವಾದಿ ಎಂದು ಹೆಸರು. ಹರಿಯ ಹೆಸರು ಅಪಹತ. ಇಂದ್ರನ ಹೆಸರು ಶುಚಿ.

ಈ ಮನ್ವಂತರದಲ್ಲಿ ಬರುವ ಋಷಿಗಳು - ೧. ಅಗ್ನೀಧ್ರ, ೨. ಅಗ್ನಿಬಾಹು, ೩. ಯೂಚಿ, ೪. ಯುಕ್ತ, ೫. ಮಾಧವ, ೬. ಅಯುತ ಮತ್ತು ೭. ಶುಕ್ರ.

**136A**

## ಸ್ವಾಯಂಭುವಮನು ಮೊದಲಾದ ಹದಿನಾಲ್ಕು ಜನ ಮನುಗಳ ಮನ್ವಾದಿ ತಿಥಿಗಳು

(ಕಾಲಪ್ರಕಾಶಿಕೆಯಲ್ಲಿ)

| | ಮನುವಿನ ಹೆಸರು | ಹುಟ್ಟಿದ ದಿವಸ |
|---|---|---|
| 1. | ಸ್ವಾಯಂಭುವಮನು | ಆಶ್ವಯುಜ ಶುಕ್ಲ ನವಮೀ |
| 2. | ಸ್ವಾರೋಚಿಷಮನು | ಕಾರ್ತಿಕ ಶುಕ್ಲ ದ್ವಾದಶೀ |
| 3. | ಉತ್ತಮಮನು | ಚೈತ್ರ ಶುಕ್ಲ ತೃತೀಯಾ |
| 4. | ತಾಮಸಮನು | ಭಾದ್ರಪದ ಶುಕ್ಲ ತೃತೀಯಾ |
| 5. | ರೈವತಮನು | ಫಾಲ್ಗುಣ ಕೃಷ್ಣ ಅಮಾವಾಸ್ಯಾ |
| 6. | ಚಾಕ್ಷುಷಮನು | ಪುಷ್ಯ ಶುಕ್ಲ ಏಕಾದಶೀ |
| 7. | ವೈವಸ್ವತಮನು | ಆಷಾಢ ಶುಕ್ಲ ದಶಮೀ |
| 8. | ಸೂರ್ಯಸಾವರ್ಣಿಕಮನು | ಮಾಘ ಶುಕ್ಲ ಸಪ್ತಮೀ |
| 9. | ದಕ್ಷಸಾವರ್ಣಿಮನು | ಫಾಲ್ಗುಣ ಶುಕ್ಲ ಪೂರ್ಣಿಮಾ |
| 10. | ಬ್ರಹ್ಮಸಾವರ್ಣಿಮನು | ಆಷಾಢ ಶುಕ್ಲ ಪೂರ್ಣಿಮಾ |
| 11. | ಧರ್ಮಸಾವರ್ಣಿಮನು | ಶ್ರಾವಣ ಕೃಷ್ಣ ಅಷ್ಟಮೀ |
| 12. | ರುದ್ರಸಾವರ್ಣಿಮನು | ಕಾರ್ತಿಕ ಶುಕ್ಲ ಪೂರ್ಣಿಮಾ |
| 13. | ವೇದಸಾವರ್ಣಿಕಮನು | ಚೈತ್ರ ಶುಕ್ಲ ಪೂರ್ಣಿಮಾ |
| 14. | ಇಂದ್ರಸಾವರ್ಣಿಕರೌಚ್ಯಮನು | ಜ್ಯೇಷ್ಠ ಶುಕ್ಲ ಪೂರ್ಣಿಮಾ |

ಇವು ಕ್ರಮವಾಗಿ ಸ್ವಾಯಂಭುವಮನು ಮೊದಲಾದ ಹದಿನಾಲ್ಕು ಮನುಗಳ ಹುಟ್ಟಿದ ದಿವಸಗಳು. 79-82

**ಸ್ವಾಯಂಭುವಮನು ಮೊದಲಾದ ಹದಿನಾಲ್ಕು ಜನ ಮನುಗಳ ಹದಿನಾಲ್ಕು ಮನ್ವಂತರಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಏಳು ಏಳು ಜನಗಳ ಗುಂಪಿನಲ್ಲಿ ಬರುವ ಏಳು ಏಳು ಜನ ಋಷಿಗಳ ಹೆಸರುಗಳು**

**ಮೊದಲನೆಯ ಸ್ವಾಯಂಭುವಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :**

1. ಮರೀಚಿ, 2. ಕ್ರತು, 3. ಅತ್ರಿ, 4. ಅಂಗಿರಸ್, 5. ಪುಲಹ, 6. ವಸಿಷ್ಠ, 7. ಪುಲಸ್ತ್ಯ. 83

**ಎರಡನೆಯ ಸ್ವಾರೋಚಿಷಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :**

1. ಊರ್ಜಸ್ತಂಭ, 2. ಋಷಭ, 3. ಪ್ರಾಣ, 4. ದತ್ತ, 5. ಜಾರ್ವರಿ, 6. ನಿಶ್ಚರ, 7. ಅತ್ರಿ. 84

**ಮೂರನೆಯ ಉತ್ತಮಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :**

1. ಅರ್ಧಬಾಹು, 2. ಸವನ, 3. ಸುತಪಸ್, 4. ರಜಸ್, 5. ಘನ, 6. ಶುಕ್ಲ, 7. ಗೋತ್ರ. 85

**ನಾಲ್ಕನೆಯ ತಾಮಸಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :**

1. ಜ್ಯೋತಿರ್ಧಾಮ, 2. ಚೈತ್ರ, 3. ಪೃಥು, 4. ವಾನಕ, 5. ಕಾವ್ಯ, 6. ಪೀವರ, 7. ಅಗ್ನಿ. 86

**ಐದನೆಯ ರೈವತಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :**

1. ಹಿರಣ್ಯರೋಮ, 2. ವೇದಶ್ರೀ, 3. ಊರ್ಧ್ವಬಾಹು, 4. ಸೋಮಪ, 5. ವೇದಬಾಹು, 6. ಸುಧಾಮ, 7. ಸುತಾಪ. 87

**ಆರನೆಯ ಚಾಕ್ಷುಷಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :**

1. ಹವಿರ್ಭಾನು, 2. ಸುಮೇಧ, 3. ಸಹಿಷ್ಣು, 4. ವಿರಜ, 5. ಮಧು, 6. ಋಷಭ, 7. ಅತಿನಾಮ. 88

**ಏಳನೆಯ ವೈವಸ್ವತಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :**

1. ಕಶ್ಯಪ, 2. ಅತ್ರಿ, 3. ಭರದ್ವಾಜ, 4. ವಿಶ್ವಾಮಿತ್ರ, 5. ಗೌತಮ, 6. ಜಮದಗ್ನಿ, 7. ವಸಿಷ್ಠ. 89

**ಎಂಟನೆಯ ಸೂರ್ಯಸಾವರ್ಣಿಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :**

1. ವ್ಯಾಸ, 2. ಪರಶುರಾಮ, 3. ಗಾಲವ, 4. ದೀಪ್ತಿಮಾನ್, 5. ಕೃಪ, 6. ಅಶ್ವತ್ಥಾಮ, 7. ಋಷ್ಯಶೃಂಗ. 90

ಒಂಭತ್ತನೆಯ ದಕ್ಷಸಾವರ್ಣಿಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :

1. ಮೇಧಾತಿಥಿ, 2. ವಸು, 3. ಸತ್ಯ, 4. ಸವನ, 5. ಹವ್ಯವಾಹನ, 6. ಜ್ಯೋತಿಷ್ಮಾನ್, 7. ದ್ಯುತಿಮಾನ್. 91

ಹತ್ತನೆಯ ಬ್ರಹ್ಮಸಾವರ್ಣಿಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :

1. ಅಪೋಮೂರ್ತಿ, 2. ಹವಿಷ್ಯಂತ, 3. ನಾಭಾಗ, 4. ಅಪ್ರತಿಮ, 5. ವಸಿಷ್ಠ, 6. ಸುಕೃತಿ, 7. ಸತ್ಯ. 92

ಹನ್ನೊಂದನೆಯ ಧರ್ಮಸಾವರ್ಣಿಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :

1. ಹವಿಷ್ಮಂತ, 2. ವರಿಷ್ಠ, 3. ಅಗ್ನಿತೇಜಸ್, 4. ನಿಶ್ಚಲ, 5. ಅರುಣಿ, 6. ವೃಷ್ಟಿ, 7. ಅನಘ. 93

ಹನ್ನೆರಡನೆಯ ರುದ್ರಸಾವರ್ಣಿಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :

1. ತಪೋನಿಧಿ, 2. ಸುತಾಪ, 3. ತಪಸ್ವೀ, 4. ತಪೋಮತಿ, 5. ತಪೋಧೃತಿ, 6. ದ್ಯುತಿ, 7. ತಪೋಮೂರ್ತಿ. 94-95A

ಹದಿಮೂರನೆಯ ವೇದಸಾವರ್ಣಿಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :

1. ನಿಷ್ಪ್ರವಾಪ, 2. ತತ್ತ್ವದರ್ಶೀ, 3. ಧೃತಿಮಾನ್, 4. ಅವ್ಯಯ, 5. ನಿರುತ್ಸುಕ, 6. ಸುತಾಪ, 7. ನಿರ್ಮೋಹ. 95B-96

ಹದಿನಾಲ್ಕನೆಯ ಇಂದ್ರಸಾವರ್ಣಿಮನ್ವಂತರದಲ್ಲಿ ಬರುವ ಏಳು ಜನ ಋಷಿಗಳ ಹೆಸರುಗಳು :

1. ಅಗ್ನೀಧ್ರ, 2. ಅಗ್ನಿಬಾಹು, 3. ಯೂಚಿ, 4. ಯುಕ್ತ, 5. ಮಾಧವ, 6. ಅಯುತ, 7. ಶುಕ್ರ.

ಹೀಗೆ ಸ್ವಾಯಂಭುವಾದಿ 14 ಜನ ಮನುಗಳ ಮನ್ವಂತರದಲ್ಲಿ ಒಟ್ಟು ತೊಂಭತ್ತೆಂಟು ಋಷಿಗಳ ಹೆಸರುಗಳನ್ನು ಹೇಳಲಾಯಿತು. 97-97A

136B ಸ್ವಾಯಂಭುವಾದಿ ಹದಿನಾಲ್ಕು ಜನ ಮನುಗಳ ಮನ್ವಂತರಗಳಲ್ಲಿ ಬರುವ ಇಂದ್ರರ ಹೆಸರುಗಳು

| | ಮನ್ವಂತರಗಳ ಹೆಸರುಗಳು | ಇಂದ್ರರ ಹೆಸರುಗಳು |
|---|---|---|
| 1. | ಸ್ವಾಯಂಭುವ | ಯಜ್ಞ |
| 2. | ಸ್ವಾರೋಚಿಷ | ರೋಚನ |

| | | |
|---|---|---|
| 3. | ಉತ್ತಮ | ಸತ್ಯಜಿತ್ |
| 4. | ತಾಮಸ | ತ್ರಿಶಿಖ |
| 5. | ರೈವತ | ವಿಭು |
| 6. | ಚಾಕ್ಷುಷ | ಮಂದ್ರದ್ಯುಮ್ನ |
| 7. | ವೈವಸ್ವತ | ಪುರಂದರ |
| 8. | ಸೂರ್ಯಸಾವರ್ಣಿ | ಬಲಿ |
| 9. | ದಕ್ಷಸಾವರ್ಣಿ | ಅದ್ಭುತ |
| 10. | ಬ್ರಹ್ಮಸಾವರ್ಣಿ | ಶಂಭು |
| 11. | ಧರ್ಮಸಾವರ್ಣಿ | ವಿಧೃತ |
| 12. | ರುದ್ರಸಾವರ್ಣಿ | ಋತುಧಾಮನ್ |
| 13. | ವೇದಸಾವರ್ಣಿ | ದಿವಸ್ಪತಿ |
| 14. | ಇಂದ್ರಸಾವರ್ಣಿ | ಶುಚಿ |

ಹೀಗೆ ಹದಿನಾಲ್ಕು ಮನ್ವಂತರಗಳಿಗೆ ಕ್ರಮವಾಗಿ ಹದಿನಾಲ್ಕು ಇಂದ್ರರುಗಳೆಂದು ಹೇಳಲ್ಪಟ್ಟಿದೆ. 98-99

### ಸ್ವಾಯಂಭುವಾದಿ ಹದಿನಾಲ್ಕು ಜನ ಮನುಗಳ ಮನ್ವಂತರಗಳಲ್ಲಿ ಬರುವ ಹರಿನಾಮಗಳು

(ಭಾಗವತದಲ್ಲಿ)

| | ಮನ್ವಂತರಗಳ ಹೆಸರುಗಳು | ಹರಿನಾಮಗಳು |
|---|---|---|
| 1. | ಸ್ವಾಯಂಭುವ | ಯಜ್ಞ |
| 2. | ಸ್ವಾರೋಚಿಷ | ವಿಭು |
| 3. | ಉತ್ತಮ | ಸತ್ಯಸೇನ |
| 4. | ತಾಮಸ | ಹರಿ |
| 5. | ರೈವತ | ವೈಕುಂಠ |
| 6. | ಚಾಕ್ಷುಷ | ಅಜಿತ |

| | | |
|---|---|---|
| 7. | ವೈವಸ್ವತ | ವಾಮನ |
| 8. | ಸೂರ್ಯಸಾವರ್ಣಿ | ಸಾರ್ವಭೌಮ |
| 9. | ದಕ್ಷಸಾವರ್ಣಿ | ಋಷಭ |
| 10. | ಬ್ರಹ್ಮಸಾವರ್ಣಿ | ವಿಷ್ವಕ್ಸೇನ |
| 11. | ಧರ್ಮಸಾವರ್ಣಿ | ಧರ್ಮಸೇತು |
| 12. | ರುದ್ರಸಾವರ್ಣಿ | ಸ್ವಧಾಮನ್ |
| 13. | ವೇದಸಾವರ್ಣಿ | ಯೋಗೀಶ್ವರ |
| 14. | ಇಂದ್ರಸಾವರ್ಣಿ | ಅಪಹರ್ತಾ |

ಹೀಗೆ ಹದಿನಾಲ್ಕು ಜನ ಹರಿಗಳು ಭಾಗವತದಲ್ಲಿ ಸ್ಮೃತರಾಗಿದ್ದಾರೆ. **100-101**

**136B/1**

## ಪರ್ಜನ್ಯಧ್ಯಾನ

**(ಶೈವಾಗಮದಲ್ಲಿ)**

ಪರ್ಜನ್ಯವೆಂಬುದು ಆನೆಯ ಮೂರು ಮುಖಗಳಿಂದ ಕೂಡಿದ ದೇವತೆ. ಈ ಪರ್ಜನ್ಯದೇವನು ಎಲ್ಲ ಜೀವಿಗಳಿಗೂ ವರವನ್ನು ಕೊಡುತ್ತಾನೆ. ತನ್ನ ಹತ್ತು ಕೈಗಳಲ್ಲಿ ನೀರು, ಶೋಷಕ, ಕೊಡಲಿ, ಕಮಲ, ಚಿಂತಾರತ್ನ, ಮಹಾಶುಚಿ ಅಂದರೆ ಬೆಂಕಿ, ಹಗ್ಗ, ಚಕ್ರ, ಚಿಗುರು, ಕಮಂಡಲುಗಳನ್ನು ಹಿಡಿದಿದ್ದಾನೆ. **102-103**

**(ದೇಹದ ಬಣ್ಣ ಬಿಳಿ)**

**136B/2**

## ಬ್ರಹ್ಮಾಸ್ತ್ರಧ್ಯಾನ

**(ಬ್ರಹ್ಮಾಸ್ತ್ರಕಲ್ಪದಲ್ಲಿ)**

ಎಡಬಲಗಳಲ್ಲಿ ಗದೆಯಿಂದ ಶತ್ರುಗಳನ್ನು ಪೀಡಿಸುತ್ತಿರುವ, ಉದ್ದವಾದ ನಾಲಗೆಯುಳ್ಳ, ಹಳದಿಯ ಬಟ್ಟೆಯನ್ನು ತೊಟ್ಟಿರುವ, ಬಗಲಾಮುಖಿವುಳ್ಳ, ಬ್ರಹ್ಮಾಸ್ತ್ರದೇವತೆಯನ್ನು ನಾನು ಸ್ಮರಿಸುತ್ತೇನೆ. **104**

**(ದೇಹದ ಬಣ್ಣ ಹಳದಿ)**

**136B/3**

## ಕಾಮಧೇನುವಿನ ಧ್ಯಾನ

**(ನೃಸಿಂಹಪ್ರಾಸಾದದಲ್ಲಿ)**

ಕಾಮಧೇನುವಿಗೆ ಹಸುವಿನ ಮುಖ, ಬಿಳಿಯ ಬಣ್ಣದ ದೇಹವನ್ನು ಹೊಂದಿದೆ. ಹೆಣ್ಣಿನ ಶರೀರ. ಎಲ್ಲ ಆಭರಣಗಳನ್ನು ಧರಿಸಿಕೊಂಡಿದೆ. ಒಂದು ಕೈನ ಮುಷ್ಟಿಯಲ್ಲಿ ಹುಲ್ಲನ್ನು, ಮತ್ತೊಂದು ಕೈನಲ್ಲಿ ಸಣ್ಣ ಕಲಶವನ್ನು ಹಿಡಿದುಕೊಂಡಿದೆ. ಈ ಕಾಮಧೇನುವು ಎಲ್ಲರಿಗೂ ಭೂತಿಯನ್ನು ಅಂದರೆ ಸಂಪದಾದಿಗಳನ್ನು ಮತ್ತು ಪುಷ್ಟಿಯನ್ನು ಕೊಡುವ ಹಸುವಾಗಿದೆ. 105

(ದೇಹದ ಬಣ್ಣ ಬಿಳಿ)

136B/4 **ಕಾಮಧೇನುವಿನ ಮತ್ತೊಂದು ಬಗೆಯ ಧ್ಯಾನ**

**(ಪ್ರಪಂಚಸಾರದಲ್ಲಿ)**

ಕಾಮಧೇನುವಿಗೆ ಹೆಣ್ಣಿನ ರೂಪ ಮತ್ತು ಹೆಣ್ಣಿನ ಮುಖವಿದೆ. ಕುದುರೆಯ ಕತ್ತು. ಮೇಲೆ ನಿಂತಿರುವ ಕಿವಿಗಳು. ಇದಕ್ಕೆ ಮೂರು ಕಣ್ಣುಗಳು, ಮೂರು ಕೊಂಬುಗಳು ಇವೆ. ಹಂಸದ ರೆಕ್ಕೆಗಳಂತೆ ರೆಕ್ಕೆಗಳಿವೆ. ಇದಕ್ಕೆ ಎರಡು ಬಾಲಗಳು. ಹಣೆಯ ಮಧ್ಯದಲ್ಲಿ ಗುರುತು ಇದೆ. ಇದರ ಬಾಲ ನವಿಲು ಗರಿಯಂತೆ ಇದೆ. ಇದಕ್ಕೆ ಐದು ಕೆಚ್ಚಲುಗಳಿವೆ. ಹಸುವಿನ ಪಾದಗಳಂತೆ ಇದರ ಪಾದಗಳಿವೆ. ಇದು ಕಾಮಧೇನುವಿನ ಸ್ವರೂಪ. 106-107

(ಇದರ ದೇಹದ ಬಣ್ಣ ಚಿನ್ನದಂತೆ ಹೊಂಬಣ್ಣವೆಂದು ಪ್ರಸಿದ್ಧವಾಗಿದೆ)

137 **ಒಂಭತ್ತು ಜನ ಚಿರಂಜೀವಿಗಳ ಧ್ಯಾನ**

**(ಶೈವಾಗಮದಲ್ಲಿ ಧ್ಯಾನ ಮತ್ತು ಪಾದ್ಮಪುರಾಣದಲ್ಲಿ ಬಣ್ಣಗಳ ಹೆಸರುಗಳು)**

| | ಚಿರಂಜೀವಿಗಳ ಹೆಸರು | ಬಣ್ಣಗಳ ಹೆಸರು | |
|---|---|---|---|
| 1. | ಅಶ್ವತ್ಥಾಮನ್ | ಬಿಳಿಯ ಬಣ್ಣ | |
| 2. | ಮಹಾಬಲಿ | ಕಪ್ಪು ಬಣ್ಣ | |
| 3. | ವ್ಯಾಸ | ಕಪ್ಪು ಬಣ್ಣ | |
| 4. | ಮಾರುತಿ | ಸ್ಫಟಿಕದಂತೆ ಬಿಳಿಯ ಬಣ್ಣ | 108 |
| 5. | ವಿಭೀಷಣ | ಕಪ್ಪು ಬಣ್ಣ | |
| 6. | ಕೃಪ | ಬಿಳಿಯ ಬಣ್ಣ | |
| 7. | ಪರಶುರಾಮ | ಚಿನ್ನದಂತೆ ಹೊಂಬಣ್ಣ | |
| 8. | ಮಾರ್ಕಂಡೇಯ | ಬಿಳಿಯ ಬಣ್ಣ | |
| 9. | ಪ್ರಹ್ಲಾದ | ಚಿನ್ನದಂತೆ ಹೊಂಬಣ್ಣ | 109-109A |

137A/1

## ಅಶ್ವತ್ಥಾಮನ ಧ್ಯಾನ

(ಶೈವಾಗಮದಲ್ಲಿ)

ಬ್ರಹ್ಮಸೂತ್ರವಾದ ಜನಿವಾರವನ್ನು ಭುಜದಲ್ಲಿ ಹಾಕಿಕೊಂಡು ಕಂಗೊಳಿಸುತ್ತಿರುವ, ಹೊಳೆಯುತ್ತಿರುವ ಕೃಷ್ಣಾಜಿನವನ್ನು ಬಟ್ಟೆಯನ್ನಾಗಿ ತೊಟ್ಟುಕೊಂಡಿರುವ, ಚಿರಂಜೀವಿಯಾದ, ಅಶ್ವತ್ಥಾಮನು ನನಗೆ ದೀರ್ಘಾಯುಸ್ಸನ್ನು ಕೊಡಲಿ. 110

(ಇವನ ದೇಹದ ಬಣ್ಣ ಬಿಳಿ)

137A/2

## ಬಲಿಯ ಧ್ಯಾನ

(ಶೈವಾಗಮದಲ್ಲಿ)

ಪಾತಾಲವಾಸಿಯಾದ, ಬಿಲ್ಲುಬಾಣಗಳನ್ನು ಧರಿಸಿರುವ, ತಲೆಯಲ್ಲಿ ವಿಷ್ಣುವಿನ ಪಾದಚಿಹ್ನೆಯನ್ನು ಹೊಂದಿರುವ, ಚಿರಂಜೀವಿಯಾದ, ದೊರೆಯಾದ ಬಲಿಯು ಪ್ರಸನ್ನಗೊಳ್ಳಲಿ. 111

(ಇವನ ದೇಹದ ಬಣ್ಣ ಕಪ್ಪು)

ಇವನ ಹೆಂಡತಿ ವಿಂಧ್ಯಾವಳಿ.

137A/3

## ವ್ಯಾಸನ ಧ್ಯಾನ

(ಶೈವಾಗಮದಲ್ಲಿ)

ಸಕಲಧರ್ಮಗಳನ್ನೂ ತಿಳಿಸಿಕೊಡುವ, ಧರ್ಮೋಪದೇಶಕನಾದ, ಮುನಿಶ್ರೇಷ್ಠರಿಂದ ಸ್ತುತನಾದ, ತಲೆಯಲ್ಲಿ ಜಟೆಯನ್ನು ಕಟ್ಟಿರುವ, ಚಿರಂಜೀವಿಯಾದ ವ್ಯಾಸನು ನನಗೆ ದೀರ್ಘಾಯುಸ್ಸನ್ನು ನೀಡಲಿ. 112

(ಇವನ ದೇಹದ ಬಣ್ಣ ಕಪ್ಪು)

137A/4

## ಹನುಮಂತನ ಧ್ಯಾನ

(ಶೈವಾಗಮದಲ್ಲಿ)

ರಾಮನ ಪಾದಕಮಲದ ಸನಿಹದಲ್ಲಿರುವ, ಉತ್ತಮ ಬ್ರಹ್ಮಚಾರಿಯಾದ, ಶುಚಿರ್ಭೂತನಾದ, ಸಂಜೀವನಪರ್ವತವನ್ನು ಅಪಹರಿಸಿಕೊಂಡು ಬಂದಂತಹ, ಹನುಮಂತನು ಈ ಪ್ರಪಂಚದಲ್ಲಿ ನನಗೆ ದೀರ್ಘಾಯುಸ್ಸನ್ನು ಕೊಡಲಿ. 113

(ಇವನ ದೇಹದ ಬಣ್ಣ ಸ್ಫಟಿಕದಂತೆ ಬಿಳಿ)

137A/5

## ವಿಭೀಷಣನ ಧ್ಯಾನ

(ಶೈವಾಗಮದಲ್ಲಿ)

ಧರ್ಮಪರನಾದ, ರಾಮಾರ್ಚನಪರಾಯಣನಾದ, ಚಿರಂಜೀವಿಯಾದ, ಜಿತೇಂದ್ರಿಯನಾದ, ವಿಭೀಷಣನು ನನಗೆ ಚಿರಂಜೀವಿತ್ವವನ್ನು ನೀಡಲಿ. 114

(ಇವನ ದೇಹದ ಬಣ್ಣ ಕಪ್ಪು)

ಇವನ ಹೆಂಡತಿ ಸರಮಾ.

137A/6

## ಕೃಪನ ಧ್ಯಾನ

(ಶೈವಾಗಮದಲ್ಲಿ)

ದಯಾಸಮುದ್ರನಾದ, ತಪಸ್ವಿಯಾದ, ನಾರುಬಟ್ಟೆಗಳನ್ನು ತೊಟ್ಟಿರುವ, ಪ್ರಸನ್ನಚಿತ್ತನಾದ, ಕೃಪನು ನನ್ನ ಜೀವನಪರ್ಯಂತ ನನಗೆ ರೋಗವಿಲ್ಲದಿರುವಿಕೆಯನ್ನು ಅಂದರೆ ಆರೋಗ್ಯವನ್ನು ವಿತರಿಸಲಿ. 115

(ಇವನ ದೇಹದ ಬಣ್ಣ ಬಿಳಿ)

137B/1

## ಪರಶುರಾಮನ ಧ್ಯಾನ

(ಶೈವಾಗಮದಲ್ಲಿ)

ಕರಕಮಲದಲ್ಲಿ ಕೊಡಲಿಯನ್ನು ಹಿಡಿದು ಕಂಗೊಳಿಸುತ್ತಿರುವ, ಜಪಾಮಂಡಲದಿಂದ ಮಂಡಿತನಾದ, ಭೃಗುವಂಶದಲ್ಲಿ ಹುಟ್ಟಿದ, ಚಿರಂಜೀವಿಯಾದ ಪರಶುರಾಮನು ನನಗೆ ಚಿರಂಜೀವಿತನವನ್ನು ನೀಡಲಿ. 116

(ಇವನ ದೇಹದ ಬಣ್ಣ ಚಿನ್ನದಂತೆ ಹೊಂಬಣ್ಣ)

137B/2

## ಪ್ರಹ್ಲಾದನ ಧ್ಯಾನ

(ಶೈವಾಗಮದಲ್ಲಿ)

ವಿಷ್ಣುಭಕ್ತನಾದ, ಮಹಾಬುದ್ಧಿಶಾಲಿಯಾದ, ಎರಡು ತೋಳುಗಳನ್ನುಳ್ಳ, ರಾಕ್ಷಸಶ್ರೇಷ್ಠನಾದ, ಮಹಾಸೌಮ್ಯನಾದ, ಚಿರಂಜೀವಿಯಾದ, ಪ್ರಹ್ಲಾದನನ್ನು ನಾನು ಧ್ಯಾನಿಸುತ್ತೇನೆ. 117

(ಇವನ ದೇಹದ ಬಣ್ಣ ಚಿನ್ನದಂತೆ ಹೊಂಬಣ್ಣ)

137B/3

## ಮಾರ್ಕಂಡೇಯನ ಧ್ಯಾನ

(ಶೈವಾಗಮದಲ್ಲಿ)

ಶ್ರೀಮಂತನಾದ, ಶಾಂತಮನಸ್ಸುಳ್ಳ, ಶಿವಪೂಜಾಪರಾಯಣನಾದ, ವೇದಗಳ ಮತ್ತು ಶಾಸ್ತ್ರಗಳ ನಿಜವಾದ ಅರ್ಥವನ್ನು ತಿಳಿದವನಾದ, ಮಾರ್ಕಂಡೇಯನನ್ನು ನಾನು ಭಜಿಸುತ್ತೇನೆ. **118**

(ಇವನ ದೇಹದ ಬಣ್ಣ ಬಿಳಿ)

## ಅಷ್ಟವಸುಗಳ ಬಣ್ಣ ಮತ್ತು ಲಕ್ಷಣ

(ಕಾರಣಾಗಮದಲ್ಲಿ)

1. ಧ್ರುವ - ಹಳದಿಬಣ್ಣ 2. ಅಧ್ವರ - ಶ್ಯಾಮವರ್ಣ 3. ಸೋಮ - ಬಿಳಿ 4. ಅನಿಲ - ಹಸುರು 5. ಅಪ್ಪುಗಳು - ಬಿಳಿ 6. ಅನಲ - ಕೆಂಪು 7. ಪ್ರತ್ಯೂಷ - ಬಿಳಿ 8. ಪ್ರಭಾಸ - ಬಿಳಿ. ಹೀಗೆ ಅಷ್ಟವಸುಗಳ ಬಣ್ಣಗಳು ಹೇಳಲ್ಪಟ್ಟಿವೆ.

ಅಷ್ಟವಸುಗಳನ್ನು ಪ್ರಸನ್ನರು, ಸೌಮ್ಯರು, ವರಗಳನ್ನು ಕೊಡುವವರು, ಶಕ್ತಿ ಎಂಬ ಆಯುಧ-ಗಳನ್ನು ಕೈಗಳಲ್ಲಿ ಹಿಡಿದಿರುವವರು, ಕಮಲಾಸನದಲ್ಲಿ ಕುಳಿತಿರುವವರೂ ಆಗಿರುವಂತೆ ಸದಾ ಚಿತ್ರಿಸಬೇಕು. **119-120A**

ಮೇಲೆ ಹೇಳಿದ ಶ್ಲೋಕದ ಪ್ರಕಾರ ಈ ಅಷ್ಟವಸುಗಳ ಆಕಾರ ಒಂದೇ ಆಗಿದೆ. ಆದರೆ ಶೈವಾಗಮದ ಪ್ರಕಾರ ಇವರ ಆಕಾರ ಭಿನ್ನವಾಗಿರುವುದರಿಂದ ಅದರ ಪ್ರಕಾರ ಚಿತ್ರಗಳನ್ನು ಬರೆಯಲಾಗಿದೆ ಮತ್ತು ಲಕ್ಷಣಗಳನ್ನು ವರ್ಣಿಸಲಾಗಿದೆ. ಕಾರಣಾಗಮದ ಅನುಸಾರ ಅವರ ಬಣ್ಣಗಳನ್ನು ಹೇಳಲಾಗಿದೆ.

137B/4 **ಧ್ರುವವಸುವಿನ ಧ್ಯಾನ**

(ಶೈವಾಗಮದಲ್ಲಿ)

ಅಕ್ಷಮಾಲೆಯನ್ನು ಕೈಯಲ್ಲಿ ಹಿಡಿದಿರುವ, ಭುಜಮಧ್ಯದಲ್ಲಿ ಬ್ರಹ್ಮಸೂತ್ರವನ್ನು ತೊಟ್ಟು ಕಂಗೊಳಿಸುತ್ತಿರುವ, ಧ್ರುವನೆಂಬ ವಸುವನ್ನು ಸ್ಥಿರವಾದ ಕೀರ್ತಿಗಾಗಿ ಸದಾ ಸಂತೋಷದಿಂದ ಚಿಂತಿಸುತ್ತೇನೆ. **121**

(ಇವನ ದೇಹದ ಬಣ್ಣ ಹಳದಿ)

137B/5 **ಅಧ್ವರವಸುವಿನ ಧ್ಯಾನ**

(ಶೈವಾಗಮದಲ್ಲಿ)

ಸ್ರುಕ್ಕು ಮತ್ತು ಸ್ರುವಗಳನ್ನು ಕೈಗಳಲ್ಲಿ ಹಿಡಿದಿರುವ, ಹುಲಿಯ ಚರ್ಮವನ್ನು ತೊಟ್ಟಿರುವ, ಶುಚಿವಂತನಾದ, ಅಗ್ನಿಯ ಸೇವೆಯಲ್ಲಿ ನಿರತನಾದ, ಅಧ್ವರವಸುವನ್ನು ಪ್ರತಿದಿನವೂ ಚಿಂತಿಸುತ್ತೇನೆ. **122**

(ಇವನ ದೇಹದ ಬಣ್ಣ ಶ್ಯಾಮಲವರ್ಣ)

138A/1 **ಸೋಮವಸುವಿನ ಧ್ಯಾನ**

(ಶೈವಾಗಮದಲ್ಲಿ)

ಜಗತ್ತಿಗೆ ಆನಂದವನ್ನುಂಟುಮಾಡುವ, ಅಮೃತವನ್ನು ಹೊರಸೂಸುವ ಕಣ್ಣುಗಳನ್ನುಳ್ಳ, ರತ್ನಸಿಂಹಾಸನದಲ್ಲಿ ಕುಳಿತಿರುವ, ಸೋಮವಸುವನ್ನು ಹೃದಯದಲ್ಲಿ ಭಾವಿಸುತ್ತೇನೆ. 123

(ಇವನ ದೇಹದ ಬಣ್ಣ ಶುದ್ಧ ಬಿಳಿ)

138A/2 **ಆಪವಸುವಿನ ಧ್ಯಾನ**

(ಶೈವಾಗಮದಲ್ಲಿ)

ಸಕಲಪಾಪಗಳನ್ನು ನಾಶಮಾಡುವ, ಸಮುದ್ರದಲ್ಲಿ ಹುಟ್ಟಿದ, ಚಿನ್ನದಿಂದ ತುಂಬಿರುವ, ಸಮುದ್ರಕ್ಕೆ ಹೋಗಿ ಸೇರುತ್ತಿರುವ, ಆಪವಸುಗಳು ಶುಭವನ್ನು ಕೊಡುವಂತಹವುಗಳಾಗಲಿ. 124

(ಇವನ ದೇಹದ ಬಣ್ಣ ಬಿಳಿ)

138A/3 **ಅನಿಲವಸುವಿನ ಧ್ಯಾನ**

(ಶೈವಾಗಮದಲ್ಲಿ)

ಲೋಕಪಾವನನಾದ, ಸಕಲದೇವತಾಸಮೂಹದಿಂದ ಪೂಜಿಸಲ್ಪಡುವ ಪಾದಕಮಲಗಳುಳ್ಳ, ಅನಿಲವಸುವು ಸದಾ ನನ್ನ ಮಂಗಳಕ್ಕೆ ಆಗಲಿ. 125

(ಇವನ ದೇಹದ ಬಣ್ಣ ಹಸುರು)

138A/4 **ಅನಲವಸುವಿನ ಧ್ಯಾನ**

(ಶೈವಾಗಮದಲ್ಲಿ)

ಆಡಿನ ಮೇಲೆ ಕುಳಿತಿರುವ, ಶುಭಗಳನ್ನು ನೀಡುವ, ಸ್ವಾಹಾದೇವಿಯೊಡನಿರುವ, ತಲೆಯಲ್ಲಿ ಕಿರೀಟವನ್ನು ಧರಿಸಿ ಉಜ್ವಲವಾಗಿ ಹೊಳೆಯುತ್ತಿರುವ, ಅನಲವಸುವನ್ನು ನಾನು ಮನಸ್ಸಿನಲ್ಲಿ ಭಾವಿಸುತ್ತೇನೆ. 126

(ಇವನ ದೇಹದ ಬಣ್ಣ ಕೆಂಪು)

138A/5 **ಪ್ರತ್ಯೂಷವಸುವಿನ ಧ್ಯಾನ**

(ಶೈವಾಗಮದಲ್ಲಿ)

ಬಿಳಿಯ ಬಟ್ಟೆಗಳನ್ನು ತೊಟ್ಟಿರುವ, ಬಿಳಿಯ ದೇಹದವನಾದ, ಮೈಗೆಲ್ಲ ಶ್ರೀಗಂಧವನ್ನು

ಬಳಿದುಕೊಂಡಿರುವ, ತೊಂದರೆಗಳನ್ನು ಬುಡಸಹಿತವಾಗಿ ನಾಶಮಾಡಲು ಕಾರಣನಾದ, ಪ್ರತ್ಯೂಷ ವಸುವನ್ನು ಮುಂಜಾನೆಯಲ್ಲಿ ಅಧಿಕವಾಗಿ ಚಿಂತಿಸುತ್ತೇನೆ. 127

(ಇವನ ದೇಹದ ಬಣ್ಣ ಬಿಳಿ)

138A/6 **ಪ್ರಭಾವಸುವಿನ ಧ್ಯಾನ**

**(ಶೈವಾಗಮದಲ್ಲಿ)**

ಸಂಪೂರ್ಣವಾಗಿ ಕಾಂತಿಯಿಂದ ಬೆಳಗುತ್ತಿರುವ ಶರೀರವುಳ್ಳ, ಕೈನಲ್ಲಿ ಜಪಮಣಿಯನ್ನು ಹಿಡಿದು ಕಂಗೊಳಿಸುತ್ತಿರುವ, ಹುಲಿಯ ಚರ್ಮವನ್ನು ಮೈಗೆ ಧರಿಸಿರುವ, ಪ್ರಭಾಸವಸುವನ್ನು ನಾನು ಮನಸ್ಸಿನಲ್ಲಿ ಭಾವಿಸುತ್ತೇನೆ. 128

(ಇವನ ದೇಹದ ಬಣ್ಣ ಅಚ್ಚಬಿಳಿ)

138B **ಶೈವಾಗಮದಲ್ಲಿ ಹೇಳಿರುವಂತೆ ಸಪ್ತಮರುತ್ತುಗಳ ಸ್ವರೂಪಗಳು**

**(ಪದ್ಮಪುರಾಣ ಮತ್ತು ಕಾರಣಾಗಮದಲ್ಲಿ ಹೇಳಿರುವಂತೆ ಸಪ್ತಮರುತ್ತುಗಳ ಬಣ್ಣಗಳು)**

ಉಳಿದ ಲಕ್ಷಣಾದಿಗಳು ದಿಕ್ಪಾಲಕನಾದ ವಾಯುವಿನಂತೆ.

ಬೇರೊಂದು ಗ್ರಂಥವಾದ ಮಯೂಖದಲ್ಲಿ ಸಪ್ತಮರುತ್ತುಗಳು ಸದಾ ಖಡ್ಗಮೃಗದ ಚರ್ಮವನ್ನು ಧರಿಸಿರುತ್ತಾರೆ ಎಂದು ತಿಳಿಸಿದೆ. ಇವರ ಹೆಸರುಗಳು ಶೈವಾಗಮದಲ್ಲಿ ಬಂದಿವೆ. ಇವರು ಏಳೂ ಜನರೂ ಒಟ್ಟಾಗಿ ಸಪ್ತಮರುತ್ತುಗಳೆಂದು ಪ್ರಸಿದ್ಧರಾಗಿದ್ದಾರೆ.

ಆವಹ, ವಿವಹ, ಉದ್ವಹ, ಸಂವಹ, ನಿವಹ, ಅನುವಹ ಮತ್ತು ಪ್ರವಹ ಎಂಬುದಾಗಿ ಈ ಏಳು ಜನರೂ ಒಟ್ಟಾಗಿ ಸಪ್ತಮರುತ್ತುಗಳೆಂದು ಪ್ರಸಿದ್ಧರಾಗಿದ್ದಾರೆ. ಸಪ್ತಮರುತ್ತುಗಳಲ್ಲಿ ಒಬ್ಬೊಬ್ಬನೂ ಏಳು ಏಳು ಜನರ ಗುಂಪನ್ನು ಹೊಂದಿದ್ದಾನೆ.

ಈ ಸಪ್ತಮರುತ್ತುಗಳ ಬಣ್ಣಗಳು ಪಾದ್ಮಪುರಾಣದಲ್ಲಿ ಮತ್ತು ಕಾರಣಾಗಮದಲ್ಲಿ ಹೇಳಿರುವಂತೆ - 1. ಆವಹ - ಧೂಮ್ರವರ್ಣ 2. ವಿವಹ - ಕೆಂಪು ಬಣ್ಣ 3. ಉದ್ವಹ - ಹಳದಿ 4. ಸಂವಹ - ಶ್ಯಾಮವರ್ಣ 5. ನಿವಹ - ಬಿಳಿ 6. ಅನುವಹ - ಕಪ್ಪು 7. ಪ್ರವಹ - ಕೆಂಪು. ಇವು ಕ್ರಮವಾಗಿ ಸಪ್ತಮರುತ್ತುಗಳ ಬಣ್ಣಗಳು.

## ಸಪ್ತಮರುತ್ತುಗಳಲ್ಲಿ ಪ್ರತ್ಯೇಕ ಮರುದ್ದೇವತೆಯ ಧ್ಯಾನ

138B/1 **ಆವಹಮರುದ್ದೇವತೆಯ ಧ್ಯಾನ**

**(ಶೈವಾಗಮದಲ್ಲಿ)**

ಮರುದ್ದೇವತೆಗಳಲ್ಲಿ ಶ್ರೇಷ್ಠನಾದ, ಸಕಲಲೋಕಗಳಲ್ಲೂ ಸಂಚರಿಸುವವನಾದ, ಅತ್ಯಂತ

ವೇಗಶಾಲಿಯಾದ, ಗರುಡನ ವೇಗದಂತೆ ವೇಗವುಳ್ಳ, ಆವಹಮರುದ್ದೇವತೆಯು ಸದಾ ನನಗೆ ಸುಖವನ್ನುಂಟುಮಾಡಲಿ. 129

(ದೇಹದ ಬಣ್ಣ ಧೂಮ್ರ ಅಂದರೆ ಕಪ್ಪುಕೆಂಪು ಮಿಶ್ರಬಣ್ಣ)

138B/2 ವಿವಹಮರುದ್ದೇವತೆಯ ಧ್ಯಾನ

(ಶೈವಾಗಮದಲ್ಲಿ)

ಅತ್ಯಧಿಕ ಬೀಸುವಿಕೆಯಿಂದ ಎಲ್ಲ ಲೋಕಗಳನ್ನೂ ಭಗ್ನಗೊಳಿಸುತ್ತಾ, ಆಕಾಶಮಧ್ಯದಲ್ಲಿ ಸಂಚರಿಸುವ ವಿವಹಮರುದ್ದೇವತೆಯು ನನಗೆ ಸಂಪತ್ತುಗಳನ್ನು ಕೊಡುವಂತಹವನಾಗಲಿ. 130

(ದೇಹದ ಬಣ್ಣ ಕೆಂಪು)

138B/3 ಉದ್ವಹಮರುದ್ದೇವತೆಯ ಧ್ಯಾನ

(ಶೈವಾಗಮದಲ್ಲಿ)

ಸಮುದ್ರಗಳನ್ನು ಮೇಲಕ್ಕೆ ಉಕ್ಕಿಸುತ್ತಾ, ಬೆಟ್ಟಗಳನ್ನು ಬುಡಸಹಿತ ಕಿತ್ತುಹಾಕುತ್ತಾ, ಜಗತ್ತನ್ನು ಕ್ಷೋಭೆಗೊಳಿಸುತ್ತಾ, ಬೀಸುತ್ತಿರುವ ಉದ್ವಹಮರುದ್ದೇವತೆಯು ಯಾವಾಗಲೂ ನನ್ನಿಂದ ಸೇವಿಸಲ್ಪಡುತ್ತಾನೆ. 131

(ದೇಹದ ಬಣ್ಣ ಹಳದಿ)

138B/4 ಸಂವಹಮರುದ್ದೇವತೆಯ ಧ್ಯಾನ

(ಶೈವಾಗಮದಲ್ಲಿ)

ಜಗತ್ತಿಗೆ ಆನಂದವನ್ನುಂಟುಮಾಡುವ, ಮೆಲ್ಲಮೆಲ್ಲನೆ ಬೀಸುತ್ತಾ ಗಂಧವನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಕೊಂಡೊಯ್ಯುವ, ನೀರಿನ ಹನಿಗಳನ್ನು ಜೊತೆಯಲ್ಲಿ ತೆಗೆದುಕೊಂಡು ಬೀಸುವ ಸಂವಹಮರುದ್ದೇವತೆಯು ನನಗೆ ಸುಖವನ್ನು ನೀಡುವವನಾಗಲಿ. 132

(ದೇಹದ ಬಣ್ಣ ಮೋಡದಂತೆ ಕಪ್ಪು)

138B/5 ನಿವಹಮರುದ್ದೇವತೆಯ ಧ್ಯಾನ

(ಶೈವಾಗಮದಲ್ಲಿ)

ಅತ್ಯಂತ ಭೀಕರವಾಗಿ ಬೀಸುವುದರಿಂದ ಎಲ್ಲ ಪರ್ವತಗಳನ್ನೂ ಬುಡಸಹಿತ ಕಿತ್ತು ದೂರ ಓಡಿಸಿದಂತಹ, ವಾಯುಶ್ರೇಷ್ಠನಾದ ನಿವಹನನ್ನು ನಾನು ಶಿರಬಾಗಿ ನಮಸ್ಕರಿಸುತ್ತೇನೆ. 133

(ದೇಹದ ಬಣ್ಣ ಬಿಳಿ)

138B/6 **ಅನುವಹಮರುದ್ದೇವತೆಯ ಧ್ಯಾನ**

**(ಶೈವಾಗಮದಲ್ಲಿ)**

ಪ್ರತಿಕೂಲವಾಗಿ ಬೀಸುತ್ತಾ, ಮೂರುಲೋಕಗಳನ್ನೂ ತಿರುಗಿಸುತ್ತಿರುವ, ಮರುತ್ತುಗಳಲ್ಲಿ ಸರ್ವಶ್ರೇಷ್ಠ-ನಾದ, ಅನುವಹ ಎಂಬ ಹೆಸರಿನ ಮರುದ್ದೇವತೆಯನ್ನು ನಾನು ನಿತ್ಯವೂ ಆಶ್ರಯಿಸುತ್ತೇನೆ. **134**

**(ದೇಹದ ಬಣ್ಣ ಕಪ್ಪು)**

138B/7 **ಪ್ರವಹಮರುದ್ದೇವತೆಯ ಧ್ಯಾನ**

**(ಶೈವಾಗಮದಲ್ಲಿ)**

ಪ್ರಾಣ, ಅಪಾನ ಮೊದಲಾದ ರೂಪಗಳಿಂದ ಜಗತ್ತನ್ನು ವ್ಯಾಪಿಸಿಕೊಂಡು ಜೀವಿಗಳನ್ನು ಬದುಕಿಸುತ್ತಿರುವ, ಪ್ರವಹವೆಂಬ ಹೆಸರಿನ ಮರುದ್ದೇವತೆಯು ಪ್ರಾಣಿಸಮೂಹಗಳಿಂದ ಸೇವಿಸಲ್ಪಡಲಿ. **135**

**(ದೇಹದ ಬಣ್ಣ ನಸುಗೆಂಪು)**

139A **ಕಾರಣಾಗಮದಲ್ಲಿ ಹೇಳಿರುವಂತೆ ನಲವತ್ತೊಂಬತ್ತು ಜನ ಮರುದ್ದೇವತೆಗಳ ಹೆಸರುಗಳು**

ಮಯೂಖದಲ್ಲಿ ಹೇಳಿರುವಂತೆ ಇವರ ಸ್ವರೂಪಗಳು -

1. ಪ್ರಾಣ 2. ಅಪಾನ 3. ವ್ಯಾನ 4. ಉದಾನ 5. ಸಮಾನ 6. ನಾಗ 7. ಕೃಕರ 8. ಕೂರ್ಮ 9. ದೇವದತ್ತ 10. ಧನಂಜಯ 11. ಪ್ರವಹ 12. ವಿವಹ 13. ಶಂಭು 14. ಸಂವಹ 15. ಅನುವಹ 16. ಉರ್ವಹ 17. ಆವಹ 18. ಶಂಖಿ 19. ಕಾಲ 20. ನಿವಹ 21. ಶಾಸ 22. ಅನಿಲ 23. ಅನಲ 24. ಪ್ರತಿಭಾ 25. ಕುಮುದ 26. ಕಾಂತ 27. ಸಿಬಿ 28. ಶ್ವೇತ 29. ರಕ್ತ 30. ಕೃಷ್ಣ 31. ಜಿತ 32. ಅಜಿತ 33. ಜಂಝಾ 34. ದ್ಯೋತ 35. ಕ್ರತು 36. ಸಿದ್ಧ 37. ಪಿಂಗ 38. ಶುಚಿ 39. ಸೌಮ್ಯ 40. ಮಾರುತ 41. ಹನು 42. ಕಂಪನ 43. ಮಂಡೂಕ 44. ಭೀಮ 45. ಕಪಿ 46. ಸಂವರ್ತಕ 47. ಜಡ 48. ಅತಿಜಡ 49. ಸಂತತ.

139A/1 **ಇವರೆಲ್ಲರ ಸ್ವರೂಪ**

**(ಮಯೂಖದಲ್ಲಿ)**

ಈ ನಲವತ್ತೊಂಭತ್ತು ಜನ ಮರುದ್ದೇವತೆಗಳು ಇಂದ್ರನ ತಮ್ಮಂದಿರು. ಇವರೆಲ್ಲರೂ ಸೂರ್ಯನಂತೆ ತೇಜಸ್ಸುಳ್ಳವರು. ತಲೆಯಲ್ಲಿ ಕಿರೀಟವನ್ನು ಧರಿಸಿದ್ದಾರೆ. ಭುಜಗಳಿಗೆ ಭುಜಕೀರ್ತಿಗಳನ್ನೂ, ಕೈಗಳಿಗೆ ಬಳೆಗಳನ್ನೂ ತೊಟ್ಟಿದ್ದಾರೆ. ಅಲ್ಲದೆ ಇನ್ನೂ ಅನೇಕ ಆಭರಣಗಳನ್ನು

ಅಲಂಕರಿಸಿಕೊಂಡಿದ್ದಾರೆ. ಸದಾ ಕೈಗಳಲ್ಲಿ ಖಡ್ಗಗಳನ್ನು ಹಿಡಿದು, ಮೈಗೆ ಚರ್ಮವನ್ನು ತೊಟ್ಟುಕೊಂಡು, ಯಾವಾಗಲೂ ಇಂದ್ರನ ಸೇವಕರಾಗಿದ್ದಾರೆ. ಇವರ ಬಣ್ಣ ಮತ್ತು ಆಕಾರಗಳು ಮುಖ್ಯರಾದ ಸಪ್ತಮರುತ್ತುಗಳಂತೆ. **136-137**

ಈ ನಲವತ್ತೊಂಭತ್ತು ಜನ ಮರುದ್ದೇವತೆಗಳ ರೂಪಗಳು ಒಂದೇ ಆಗಿವೆ. ಆದ್ದರಿಂದ ಇವರೆಲ್ಲರ ಸ್ವರೂಪವು ಒಂದೇ ಎಂದು ತಿಳಿಸಲು ಒಂದೇ ಚಿತ್ರವನ್ನು ಬರೆಯಲಾಗಿದೆ. ಮುಖ್ಯ ಸಪ್ತಮರುತ್ತುಗಳ ಬಣ್ಣದಂತೆ ಏಳು ಏಳು ಮರುದ್ದೇವತೆಗಳ ಗುಂಪುಗಳ ಬಣ್ಣಗಳನ್ನು ತಿಳಿಯಬೇಕು.

1. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೃಕರ - ಈ ಏಳು ಜನರ ಬಣ್ಣ ಧೂಮ್ರ.
2. ಕೂರ್ಮ, ದೇವದತ್ತ, ಧನಂಜಯ, ಪ್ರವಹ, ವಿವಹ, ಶಂಭು, ಸಂವಹ - ಈ ಏಳು ಜನರ ದೇಹದ ಬಣ್ಣ ಅಚ್ಚಗೆಂಪು.
3. ಅನುವಹ, ಉರ್ವಹ, ಆವಹ, ಶಂಖ, ಕಾಲ, ನಿವಹ, ಶಾಸ - ಈ ಏಳು ಜನರ ದೇಹದ ಬಣ್ಣ ಮೋಡದಂತಹ ಕಪ್ಪು.
4. ಅನಿಲ, ಅನಲ, ಪ್ರತಿಭಾ, ಕುಮುದ, ಕಾಂತ, ಸಿಬಿ, ಶ್ವೇತ - ಈ ಏಳು ಜನರ ದೇಹದ ಬಣ್ಣ ಕಪ್ಪು.
5. ರಕ್ತ, ಕೃಷ್ಣ, ಜಿತ, ಅಜಿತ, ಜಂಝಾ, ದ್ಯೋತ, ಕ್ರತು - ಈ ಏಳು ಜನರ ದೇಹದ ಬಣ್ಣ ನಸುಗೆಂಪು.
6. ಸಿದ್ಧ, ಪಿಂಗ, ಶುಚಿ, ಸೌಮ್ಯ, ಮಾರುತ, ಹನು, ಕಂಪನ - ಈ ಏಳು ಜನರ ದೇಹದ ಬಣ್ಣವನ್ನು ಹೇಳಿಲ್ಲ.
7. ಮಂಡೂಕ, ಭೀಮ, ಕಪಿ, ಸಂವರ್ತಕ, ಜಡ, ಅತಿಜಡ, ಸಂತತ - ಈ ಏಳು ಜನರ ದೇಹದ ಬಣ್ಣವನ್ನು ಹೇಳಿಲ್ಲ.

ಹೀಗೆ ನಲವತ್ತೊಂಭತ್ತು ಜನರು ಪ್ರತ್ಯೇಕ ಮರುದ್ದೇವತೆಗಳು.

## 139A/2 ಸ್ಮಾರ್ತಪ್ರಯೋಗದಲ್ಲಿ ಹೇಳಿರುವಂತೆ ವಿಶ್ವೇದೇವತೆಗಳ ಹೆಸರುಗಳು

### ಭಟ್ಟಭಾಸ್ಕರೀಯದಲ್ಲಿ ಹೇಳಿರುವಂತೆ ಅವರ ಸ್ವರೂಪ

### ವಿಶ್ವೇದೇವತೆಗಳ ಹೆಸರುಗಳು

1. ಕ್ರತು 2. ದಕ್ಷ 3. ವಸು 4. ಸತ್ಯ 5. ಕಾಲ 6. ಕಾಮ 7. ಧನುಸ್ 8. ಪುರೂರವಸ್ 9. ರುದ್ರ 10. ರುಚಿಕ 11. ಆರ್ದ್ರವ 12. ಧನುಸ್ 13. ವಿಲೋಚನ ಎಂಬುದಾಗಿ ವಿಶ್ವೇದೇವರು ಹದಿಮೂರು

ಜನರೆಂದು ಸ್ಮಾರ್ತಪ್ರಯೋಗದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. 138-139

## ಭಟ್ಟಭಾಸ್ಕರೀಯದಲ್ಲಿ ವಿಶ್ವೇದೇವತೆಗಳ ಸ್ವರೂಪ

ವಿಶ್ವೇದೇವತೆಗಳೆಲ್ಲರೂ ಬಲದ ಕೈನಲ್ಲಿ ಬಾಣವನ್ನು ಹಿಡಿದಿರುವಂತೆಯೂ, ಎಡದ ಕೈನಲ್ಲಿ ಶರಾಸನವನ್ನು ಹಿಡಿದಿರುವಂತೆಯೂ ಚಿತ್ರಿಸಬೇಕು. 140

## ಪ್ರಕಾರಾಂತರದಲ್ಲಿ ಹತ್ತು ಜನ ವಿಶ್ವೇದೇವತೆಗಳ ಹೆಸರುಗಳು

(ಭಟ್ಟಭಾಸ್ಕರೀಯದಲ್ಲಿ)

1. ಕ್ರತು 2. ದಕ್ಷ 3. ವಸು 4. ಸತ್ಯ 4. ಕಾಲ 6. ಕಾಮ 7. ವಿಲೋಚನ 8. ಪುರೂರವಸ್ 9. ಆರ್ದ್ರವ 10. ರುದ್ರ - ಹೀಗೆ ವಿಶ್ವೇದೇವರು ಹತ್ತು ಜನರೆಂದು ಸ್ಮೃತರಾಗಿದ್ದಾರೆ. 141

ಮೇಲೆ ಹೇಳಿದ ಶ್ಲೋಕಗಳ ಪ್ರಕಾರ ಹದಿಮೂರೂ ಜನ ವಿಶ್ವೇದೇವರಿಗೂ ಒಂದೇ ರೀತಿಯ ರೂಪವಿರುವುದರಿಂದ ಒಂದೇ ಚಿತ್ರವನ್ನು ಬರೆಯಲಾಗಿದೆ. ಅಲ್ಲದೆ ಬೇರೊಂದು ಗ್ರಂಥದ ಅನುಸಾರ ಮತ್ತೊಂದು ರೀತಿಯ ವಿಶ್ವೇದೇವರ ಸ್ವರೂಪವನ್ನು ಹೇಳುವ ಶ್ಲೋಕವನ್ನೂ ಬರೆಯಲಾಗಿದೆ.

(ವಿಶ್ವೇದೇವರ ದೇಹದ ಬಣ್ಣ ಬಿಳಿ)

139B/1 ಭಟ್ಟಭಾಸ್ಕರೀಯ, ಶಿಂಗಭೂಪಾಲೀಯ, ಶೈವಾಗಮ, ನೃಸಿಂಹಪ್ರಾಸಾದ, ಮಯೂಖ ಮತ್ತು ದಾನಖಂಡಗಳಲ್ಲಿ ಅಷ್ಟದಿಕ್ಪಾಲಕರ ಧ್ಯಾನ

## ಇಂದ್ರನ ಧ್ಯಾನ

(ಭಟ್ಟಭಾಸ್ಕರೀಯದಲ್ಲಿ)

ಸಾವಿರ ಕಣ್ಣುಗಳುಳ್ಳ, ಹಳದಿಯ ಬಣ್ಣವನ್ನು ಹೊಂದಿರುವ, ನಾಲ್ಕು ಕೈಗಳುಳ್ಳ, ಬಲಗಡೆಯ ಕೈಯಲ್ಲಿ ಅಭಯಮುದ್ರೆಯನ್ನು, ಎಡಗಡೆಯ ಕೈಯಲ್ಲಿ ವರದಮುದ್ರೆಯನ್ನು, ಬಲಗಡೆಯ ಮತ್ತೊಂದು ಕೈಯಲ್ಲಿ ವಜ್ರಾಯುಧವನ್ನು, ಎಡಗಡೆಯ ಇನ್ನೊಂದು ಕೈಯಲ್ಲಿ ಅಂಕುಶವನ್ನು ಹಿಡಿದಿರುವ, ರತ್ನಗಳಿಂದ, ಕೌಸ್ತುಭಮಣಿಯಿಂದ, ಮಾಣಿಕ್ಯಗಳಿಂದ ಹಾಗೂ ದಿವ್ಯಾಭರಣಗಳಿಂದ ಭೂಷಿತನಾದ, ಕಿವಿಗಳಲ್ಲಿ ಕುಂಡಲಗಳನ್ನು ಕುತ್ತಿಗೆಯಲ್ಲಿ ಯಜ್ಞೋಪವೀತವನ್ನು ಧರಿಸಿರುವ, ದಿವ್ಯ ತೇಜಸ್ಸಿನಿಂದ ಕೂಡಿರುವ, ಐರಾವತವೆಂಬ ಆನೆಯನ್ನೇರಿ ಕುಳಿತಿರುವ, ಶಚೀದೇವಿಯ ಕಾಂತನಾದ ಇಂದ್ರನನ್ನು ನಾನು ನಮಸ್ಕರಿಸುತ್ತೇನೆ. 142-144

(ದೇಹದ ಬಣ್ಣ ಚಿನ್ನದಂತೆ ಹಳದಿ)

139B/2

## ಅಗ್ನಿಯ ಧ್ಯಾನ

(ಶಿಂಗಭಟ್ಟೀಯಪ್ರಯೋಗದಲ್ಲಿ)

ಏಳು ಕೈಗಳನ್ನು, ನಾಲ್ಕು ಕೊಂಬುಗಳನ್ನು, ಏಳು ನಾಲಿಗೆಗಳನ್ನು, ಎರಡು ತಲೆಗಳನ್ನು, ಮೂರು ಪಾದಗಳನ್ನು ಹೊಂದಿರುವ, ಪ್ರಸನ್ನ ಮುಖವನ್ನು ಹೊಂದಿರುವ, ಸುಖವಾದ ಆಸನದಲ್ಲಿ ಕುಳಿತಿರುವ, ನಿರ್ಮಲವಾದ ಮುಗುಳ್ನಗೆಯುಳ್ಳ, ಬಲಭಾಗದಲ್ಲಿ ಸ್ವಾಹಾದೇವಿ, ಎಡಭಾಗದಲ್ಲಿ ಸ್ವಧಾದೇವಿ ಯರೊಡನೆ ಕೂಡಿರುವ, ಬಲಭಾಗದ ಕೈಗಳಿಂದ ಶಕ್ತ್ಯಾಯುಧ, ಅನ್ನದ ಪಾತ್ರೆ, ಸ್ರುಕ್ ಮತ್ತು ಸ್ರುವಗಳನ್ನು ಹಿಡಿದುಕೊಂಡಿರುವ, ಎಡಭಾಗದ ಕೈಗಳಿಂದ ಈಟಿ, ಬೀಸಣಿಗೆ ಮತ್ತು ತುಪ್ಪದ ಪಾತ್ರೆಗಳನ್ನು ಹಿಡಿದಿರುವ, ಟಗರನ್ನೇರಿ ಕುಳಿತಿರುವ, ತಲೆಯಲ್ಲಿ ಜಟೆಯನ್ನು ಕಟ್ಟಿರುವ, ಬಿಳಿಯ ಬಣ್ಣದವನಾದ, ಮಹತ್ತರವಾದ ಓಜಸ್ಸುಳ್ಳ, ಹೊಗೆಯನ್ನು ಭಾವುಟವನ್ನಾಗಿ ಉಳ್ಳ, ಕೆಂಪಾದ ಕಣ್ಣುಗಳುಳ್ಳ, ಏಳು ಜ್ವಾಲೆಗಳುಳ್ಳ, ಎಲ್ಲ ಕಾಮನೆಗಳನ್ನು ಕೊಡುವ, ಪ್ರತಿಷ್ಠಿತವಾದ ಅಗ್ನಿಯನ್ನು ತನ್ನ ಎದುರಿನಲ್ಲಿ ಈ ರೀತಿಯಲ್ಲಿ ಧ್ಯಾನಿಸಬೇಕು. **145-148**

(ಇವನ ದೇಹದ ಬಣ್ಣ ಔಚಿತ್ಯಾನುಸಾರ ಕೆಂಪು)

139B/3

## ಯಮನ ಧ್ಯಾನ

(ಶೈವಾಗಮದಲ್ಲಿ ಮತ್ತು ನೃಸಿಂಹಪ್ರಾಸಾದದಲ್ಲಿ)

ಭಯಂಕರವಾದ ಕೋಣವನ್ನೇರಿ ಕುಳಿತಿರುವ, ಕಾಲದಂಡವನ್ನು ಹಿಡಿದಿರುವ, ಕಪ್ಪು ಬಣ್ಣದವನಾದ, ಪಾಶವನ್ನು ಕೈಯಲ್ಲಿ ಹಿಡಿದಿರುವ, ಯಮನನ್ನು ನಾನು ನಮಸ್ಕರಿಸುತ್ತೇನೆ. **149**

ಇಳಾಪ್ರಿಯನಾದ ಯಮನು ದಂಡವನ್ನು ಹಿಡಿದಿದ್ದಾನೆ. ಇವನ ವಾಹನ ಕೋಣ. ಕೆಂಪು ಬಣ್ಣದ ದೇಹ ಇವನದು. ಇವನು ಲೋಕದ ಜನರಿಗೆ ಅವರವರ ಕರ್ಮಗಳಿಗನುಸಾರ ಫಲಗಳನ್ನು ನೀಡುತ್ತಾನೆ. **150**

(ಜನರ ಪಾಪ ಮತ್ತು ಪುಣ್ಯಗಳಿಗನುಸಾರ
ಇವನ ದೇಹದ ಬಣ್ಣ ನಸುಗಪ್ಪು ಮತ್ತು ಕೆಂಪು)

139B/4

## ನಿರ್ಋತಿಯ ಧ್ಯಾನ

(ಮಯೂಖ ಮತ್ತು ದಾನಖಂಡದಲ್ಲಿ)

ನಿರ್ಋತಿಯು ಖಡ್ಗಮೃಗದ ಚರ್ಮವನ್ನು ಧರಿಸಿದ್ದಾನೆ. ಇವನ ದೇಹದ ಬಣ್ಣ ನೀಲಿ. ಇವನು ನರವಾಹನನು. ಊರ್ಧ್ವಕೇಶ ಅಂದರೆ ಅವನ ತಲೆಕೂದಲುಗಳು ಮೇಲ್ಮುಖವಾಗಿವೆ. ವಿರೂಪಾಕ್ಷ.

ನೋಡಲು ಭಯಂಕರನು. ಇವನು ಕಾಲಿಕೆಯ ಪ್ರಿಯನು. 151

(ಇವನ ದೇಹದ ಬಣ್ಣ ನೀಲಿ)

140A/1 ವರುಣನ ಧ್ಯಾನ

(ಮಯೂಖ ಮತ್ತು ಭಟ್ಟಭಾಸ್ಕರದಲ್ಲಿ)

ವರುಣನು ನಾಗಪಾಶವನ್ನು ಧರಿಸಿದ್ದಾನೆ. ರತ್ನಗಳನ್ನು ಅಲಂಕರಿಸಿಕೊಂಡಿದ್ದಾನೆ. ಇವನು ಪದ್ಮಿನಿಯ ಪ್ರಿಯನು. ಅಂದರೆ ಕಮಲಗಳ ಪ್ರಿಯನು. ಇವನ ಹೆಂಡತಿ ಪದ್ಮಿನಿ. ವರುಣನು ಜಲಾಧಿಪತಿ. ಚಿನ್ನದಂತೆ ಹೊಂಬಣ್ಣದ ದೇಹ ಇವನದು. ಇವನ ವಾಹನ ಮೊಸಳೆ. 152

(ಇವನ ದೇಹದ ಬಣ್ಣ ಚಿನ್ನದಂತೆ ಹಳದಿ)

140A/2 ವಾಯುವಿನ ಧ್ಯಾನ

(ಭಟ್ಟಭಾಸ್ಕರೀಯ ಮತ್ತು ಮಯೂಖದಲ್ಲಿ)

ವಾಯುವು ಜಗತ್ತಿನ ಪ್ರಾಣಬಂಧುವಾಗಿದ್ದಾನೆ. ಕೃಷ್ಣಮೃಗದ ಚರ್ಮದ ಮೇಲೆ ಕುಳಿತಿದ್ದಾನೆ. ಚಿನ್ನದ ದಂಡ ಇವನ ಧ್ವಜ. ಅಂದರೆ ಇವನ ಬಾವುಟದಲ್ಲಿ ಚಿನ್ನದ ದಂಡವಿದೆ. ಬಣ್ಣದಲ್ಲಿ ನಸುಗಪ್ಪು ಇವನು. ಮೋಹನಿಯ ಪ್ರಿಯನು. 153

(ಇವನ ದೇಹದ ಬಣ್ಣ ನಸುಗಪ್ಪು)

140A/3 ಕುಬೇರನ ಧ್ಯಾನ

(ಮಯೂಖ ಮತ್ತು ಭಟ್ಟಭಾಸ್ಕರೀಯದಲ್ಲಿ)

ಕುಬೇರನು ಕುದುರೆಯನ್ನೇರಿದ್ದಾನೆ. ಕೈನಲ್ಲಿ ಭರ್ಜಿಯನ್ನು ಹಿಡಿದಿದ್ದಾನೆ. ಇವನು ಚಿತ್ರಿನಿಯ ಪ್ರಿಯನು. ನಿಧಿಗಳ ಒಡೆಯ. ಚಿನ್ನದಂತೆ ಹೊಂಬಣ್ಣವುಳ್ಳವನು. ಎಲ್ಲರಿಗೂ ಧನವನ್ನು ಕೊಡುವವನು. ರೂಪವಂತನು ಮತ್ತು ಪ್ರಭುವು. 154

(ಇವನ ದೇಹದ ಬಣ್ಣ ಚಿನ್ನದಂತೆ ಹಳದಿ)

140A/4 ಈಶಾನನ ಧ್ಯಾನ

(ಮಯೂಖ ಮತ್ತು ಭಟ್ಟಭಾಸ್ಕರೀಯದಲ್ಲಿ)

ಈಶಾನನು ಶುದ್ಧವಾದ ಸ್ಫಟಿಕದಂತೆ ಪರಿಶುಭ್ರನಾಗಿದ್ದಾನೆ. ಗೌರಿಯ ಒಡೆಯನು. ಎತ್ತು ಇವನ ವಾಹನ. ವರದಮುದ್ರೆ, ಅಭಯಮುದ್ರೆ, ತ್ರಿಶೂಲ ಮತ್ತು ಅಕ್ಷಮಾಲೆಗಳನ್ನು ಕೈಗಳಲ್ಲಿ ಹಿಡಿದಿದ್ದಾನೆ. ಎಲ್ಲರಿಗೂ ಒಡೆಯನಾದ್ದರಿಂದ ಪರಮೇಶ್ವರನಾಗಿದ್ದಾನೆ. 155

(ಇವನ ದೇಹದ ಬಣ್ಣ ಬಿಳಿ)

140B ಮಯೂಖದಲ್ಲಿ ಹೇಳಿರುವಂತೆ ಅಷ್ಟದಿಗ್ಗಜಗಳ ಸ್ವರೂಪಗಳು ಹಾಗೂ ಆಗ್ನೇಯಪುರಾಣದಲ್ಲಿ ಹೇಳಿರುವಂತೆ ದಿಗ್ಗಜಪತ್ನಿಯರ ಹೆಸರುಗಳು

## ದಿಗ್ಗಜಗಳ ಸ್ವರೂಪಗಳು

(ಮಯೂಖದಲ್ಲಿ)

ಎಂಟು ದಿಗ್ಗಜಗಳಲ್ಲಿ ಐರಾವತವೆಂಬ ಆನೆಯು ಶುಭ್ರವಾದ ಕಾಂತಿಯುಳ್ಳದ್ದು. ಇದಕ್ಕೆ ನಾಲ್ಕು ದಂತಗಳಿವೆ. ಇದು ಅತ್ಯಂತ ಮಹಿಮೆಯುಳ್ಳದ್ದು. ಪುಷ್ಪದಂತವೆಂಬ ಆನೆಯು ಬೃಹತ್ತಾಗಿದೆ. ಇದಕ್ಕೆ ಆರು ದಂತಗಳು. ಇದರ ದಂತಗಳು ಹೂವಿನಂತೆ ಸುಂದರವಾಗಿವೆ. ಉಳಿದ ದಿಗ್ಗಜಗಳು ಸಾಮಾನ್ಯ ಆನೆಗಳಂತೆ ಇವೆಯೆಂದು ಸ್ಮೃತವಾಗಿವೆ. 156-156A

## ಎಂಟು ದಿಕ್ಕುಗಳನ್ನು ಹೊತ್ತುಕೊಂಡಿರುವ ದಿಗ್ಗಜಗಳ ಹೆಸರುಗಳು

(ಆಗ್ನೇಯಪುರಾಣದಲ್ಲಿ)

1. ಐರಾವತ 2. ಪುಂಡರೀಕ 3. ವಾಮನ 4. ಕುಮುದ 5. ಅಂಜನ 6. ಪುಷ್ಪದಂತ 7. ಸಾರ್ವಭೌಮ 8. ಸುಪ್ರತೀಕ ಎಂದು ದಿಗ್ಗಜಗಳು ಎಂಟು. 157

## ದಿಗ್ಗಜಗಳ ಪತ್ನಿಯರ ಹೆಸರುಗಳು

(ಆಗ್ನೇಯಪುರಾಣದಲ್ಲಿ)

| | ದಿಗ್ಗಜಗಳು | ದಿಗ್ಗಜಗಳ ಹೆಂಡತಿಯರ ಹೆಸರುಗಳು | |
|---|---|---|---|
| 1. | ಐರಾವತ | ಅಭ್ರಮು | |
| 2. | ಪುಂಡರೀಕ | ಕಪಿಲಾ | |
| 3. | ವಾಮನ | ಪಿಂಗಲಾ | |
| 4. | ಕುಮುದ | ಅನುಪಮಾ | |
| 5. | ಅಂಜನ | ತಾಮ್ರಪರ್ಣೀ | |
| 6. | ಪುಷ್ಪದಂತ | ಸುದಂತೀ | |
| 7. | ಸಾರ್ವಭೌಮ | ಅಂಜನಾ | |
| 8. | ಸುಪ್ರತೀಕ | ಅಂಜನಾವತೀ | 158 |

140B/1 ಇಂದ್ರನ ದಿಗ್ಗಜ ಐರಾವತ. ಪೂರ್ವದಿಕ್ಕಿನ ಆನೆ. ಇದರ ಬಣ್ಣ ಅಚ್ಚ ಬಿಳಿ. ಇದಕ್ಕೆ ನಾಲ್ಕು ದಂತಗಳು. ಹೆಂಡತಿಯ ಹೆಸರು ಅಭ್ರಮು.

140B/2 ಅಗ್ನಿಯ ದಿಗ್ಗಜ ಪುಂಡರೀಕ. ಆಗ್ನೇಯ ದಿಕ್ಕಿನ ಆನೆ. ಇದರ ಬಣ್ಣ ಬೂದು, ಹೆಂಡತಿ ಕಪಿಲಾ.

140B/3 ಯಮನ ದಿಗ್ಗಜ ವಾಮನ. ದಕ್ಷಿಣ ದಿಕ್ಕಿನ ಆನೆ. ಇದರ ಬಣ್ಣ ಬೂದು. ಹೆಂಡತಿ ಪಿಂಗಲಾ.

140B/4 ನಿರ್ಋತಿಯ ದಿಗ್ಗಜ ಕುಮುದ. ನೈರ್ಋತ್ಯ ದಿಕ್ಕಿನ ಆನೆ. ಇದರ ಬಣ್ಣ ಬೂದು. ಹೆಂಡತಿ ಅನುಪಮಾ.

140B/5 ವರುಣನ ದಿಗ್ಗಜ ಅಂಜನ. ಪಶ್ಚಿಮ ದಿಕ್ಕಿನ ಆನೆ. ಇದರ ಬಣ್ಣ ಬೂದು. ಹೆಂಡತಿ ತಾಮ್ರಪರ್ಣೀ.

140B/6 ವಾಯುವಿನ ದಿಗ್ಗಜ ಪುಷ್ಪದಂತ. ವಾಯವ್ಯದಿಕ್ಕಿನ ಆನೆ. ಇದರ ಬಣ್ಣ ನೀಲಿ. ಇದಕ್ಕೆ ಆರು ದಂತಗಳು. ಹೆಂಡತಿ ಸುದಂತೀ.

140B/7 ಕುಬೇರನ ದಿಗ್ಗಜ ಸಾರ್ವಭೌಮ. ಉತ್ತರ ದಿಕ್ಕಿನ ಆನೆ. ಇದರ ಬಣ್ಣ ಬೂದು. ಹೆಂಡತಿ ಅಂಜನಾ.

140B/8 ಈಶಾನನ ದಿಗ್ಗಜ ಸುಪ್ರತೀಕ. ಈಶಾನ್ಯದಿಕ್ಕಿನ ಆನೆ. ಇದರ ಬಣ್ಣ ಬೂದು. ಹೆಂಡತಿ ಅಂಜನಾವತೀ.

## ಅಷ್ಟದಿಙ್ನಾಗಗಳ ಸ್ವರೂಪಗಳು

### (ಎಂಟು ದಿಕ್ಕುಗಳಲ್ಲಿ ನೆಲಸಿರುವ ನಾಗಗಳ ಸ್ವರೂಪಗಳು)

### (ನೃಸಿಂಹಪ್ರಾಸಾದದಲ್ಲಿ)

1. ಅನಂತ 2. ವಾಸುಕಿ 3. ತಕ್ಷ 4. ಕರ್ಕೋಟ 5. ಪದ್ಮಕ 6. ಮಹಾಪದ್ಮ 7. ಶಂಖ 8. ಕುಲಿಕ - ಈ ಎಂಟು ಜನರು ಎಂಟು ನಾಗಕುಲಗಳ ಮುಖ್ಯರು. 159

ಇವರ ಸ್ವರೂಪಗಳು ಹೀಗಿವೆ -

1. ಅನಂತ ಮತ್ತು ಕುಲಿಕರು ಬ್ರಾಹ್ಮಣರು. ಇವರು ಬಿಳಿಯ ಬಣ್ಣದ ದೇಹದವರೆಂದು ಉದಾಹೃತರಾಗಿದ್ದಾರೆ. ಇವರಿಬ್ಬರೂ ಪ್ರತ್ಯೇಕವಾಗಿ ಒಂದು ಸಾವಿರ ಹೆಡೆಗಳಿಂದ ಅಲಂಕೃತ-ರಾಗಿದ್ದಾರೆ. 160
2. ವಾಸುಕಿ ಮತ್ತು ಶಂಖಪಾಲರು ಕ್ಷತ್ರಿಯರು. ಇವರು ಕೆಂಪುಬಣ್ಣದ ದೇಹವನ್ನು ಉಳ್ಳವರು. ಇವರಿಬ್ಬರಲ್ಲಿ ಒಬ್ಬೊಬ್ಬರೂ ಪ್ರತ್ಯೇಕವಾಗಿ ಏಳು ನೂರು ಹೆಡೆಗಳಿಂದ ಕೂಡಿ ಕಂಗೊಳಿಸುತ್ತಿದ್ದಾರೆ. 161
3. ತಕ್ಷಕ ಮತ್ತು ಮಹಾಪದ್ಮರು ವೈಶ್ಯಜಾತಿಯವರೆಂದು ಉದಾಹೃತರಾಗಿದ್ದಾರೆ. ಇವರು ಹಳದಿಬಣ್ಣದ ದೇಹದವರು. ಒಬ್ಬೊಬ್ಬರೂ ಪ್ರತ್ಯೇಕವಾಗಿ ಐನೂರು ಹೆಡೆಗಳನ್ನು ಹೊಂದಿದ್ದಾರೆ. 162
4. ಪದ್ಮ ಮತ್ತು ಕರ್ಕೋಟಕರು ಶೂದ್ರರು. ಇವರು ನೀಲಿಯ ಬಣ್ಣದ ದೇಹವುಳ್ಳವರೆಂದು ಉದಾಹೃತರಾಗಿದ್ದಾರೆ. ಒಬ್ಬೊಬ್ಬರೂ ಪ್ರತ್ಯೇಕವಾಗಿ ಮುನ್ನೂರು ಹೆಡೆಗಳನ್ನು ಹೊಂದಿ ವಿಖ್ಯಾತರಾಗಿದ್ದಾರೆಂದು ವಾಸ್ತವವಾಗಿ ತಿಳಿಯಬೇಕು. 163

141A/1 ಪೂರ್ವದಿಕ್ಕಿಗೆ ಅಧಿಪತಿ ಇಂದ್ರ. ಈ ದಿಕ್ಕಿನ ನಾಗ ಅನಂತ. ಬ್ರಾಹ್ಮಣ ಜಾತಿ. ಒಂದು ಸಾವಿರ ಹೆಡೆಗಳು. ಬಿಳಿಯ ಬಣ್ಣ.

141A/2 ಆಗ್ನೇಯ ದಿಕ್ಕಿಗೆ ಅಧಿಪತಿ ಅಗ್ನಿ. ಈ ದಿಕ್ಕಿನ ನಾಗ ವಾಸುಕಿ. ಕ್ಷತ್ರಿಯ ಜಾತಿ. ಏಳು ನೂರು ಹೆಡೆಗಳು. ಕೆಂಪು ಬಣ್ಣ.

141A/3 ದಕ್ಷಿಣ ದಿಕ್ಕಿಗೆ ಅಧಿಪತಿ ಯಮ. ಈ ದಿಕ್ಕಿನ ನಾಗ ತಕ್ಷಕ. ವೈಶ್ಯ ಜಾತಿ. ಐನೂರು ಹೆಡೆಗಳು. ಹಳದಿ ಬಣ್ಣ.

141A/4 ನೈರ್ಋತ್ಯ ದಿಕ್ಕಿಗೆ ಅಧಿಪತಿ ನಿರ್ಋತಿ. ಈ ದಿಕ್ಕಿನ ನಾಗ ಕಾರ್ಕೋಟಕ. ಶೂದ್ರ ಜಾತಿ. ಮುನ್ನೂರು ಹೆಡೆಗಳು. ನೀಲಿಯ ಬಣ್ಣ.

141A/5 ಪಶ್ಚಿಮ ದಿಕ್ಕಿಗೆ ಅಧಿಪತಿ ವರುಣ. ಈ ದಿಕ್ಕಿನ ನಾಗ ಪದ್ಮಕ. ಶೂದ್ರ ಜಾತಿ. ಮುನ್ನೂರು ಹೆಡೆಗಳು. ನೀಲಿಯ ಬಣ್ಣ.

141A/6 ವಾಯವ್ಯ ದಿಕ್ಕಿಗೆ ಅಧಿಪತಿ ವಾಯು. ಈ ದಿಕ್ಕಿನ ನಾಗ ಮಹಾಪದ್ಮ. ವೈಶ್ಯ ಜಾತಿ. ಐನೂರು ಹೆಡೆಗಳು. ಹಳದಿಯ ಬಣ್ಣ.

141A/7 ಉತ್ತರ ದಿಕ್ಕಿಗೆ ಅಧಿಪತಿ ಕುಬೇರ. ಈ ದಿಕ್ಕಿನ ನಾಗ ಶಂಖಪಾಲ. ಕ್ಷತ್ರಿಯ ಜಾತಿ. ಏಳು ನೂರು ಹೆಡೆಗಳು. ಕೆಂಪು ಬಣ್ಣ.

141A/8 ಈಶಾನ್ಯ ದಿಕ್ಕಿಗೆ ಅಧಿಪತಿ ಈಶಾನ. ಈ ದಿಕ್ಕಿಗೆ ನಾಗ ಕುಲಿಕ. ಬ್ರಾಹ್ಮಣ ಜಾತಿ. ಒಂದು ಸಾವಿರ ಹೆಡೆಗಳು. ಬಿಳಿಯ ಬಣ್ಣ.

141B/1

### ತ್ರಿಮುಖಾಗ್ನಿಧ್ಯಾನ

(ಮಂತ್ರದೇವತಾಪ್ರಕಾಶಿಕೆಯಲ್ಲಿ)

(ಆರ್ಯಾವೃತ್ತ)

ಶಕ್ತ್ಯಾಯುಧ, ಸ್ವಸ್ತಿಕಚಿಹ್ನೆ, ಪಾಶ, ಅಂಕುಶ, ವರದಮುದ್ರೆ, ಅಭಯಮುದ್ರೆಗಳನ್ನು ಧರಿಸಿರುವ, ಮೂರು ಮುಖಗಳುಳ್ಳ, ಕಿರೀಟ ಮೊದಲಾದ ವಿವಿಧ ಆಭರಣಗಳನ್ನು ಅಲಂಕರಿಸಿಕೊಂಡಿರುವ, ಪ್ರಸನ್ನನಾದ ಅಗ್ನಿಯು ನಿಮ್ಮನ್ನು ಬಹುಕಾಲ ಕಾಪಾಡಲಿ. 164

(ಅಷ್ಟದಿಕ್ಪಾಲಕರಲ್ಲಿ ಒಬ್ಬನಾದ ಅಗ್ನಿಯ ಬಣ್ಣದಂತೆ
ಈ ಮೂರು ಮುಖದ ಅಗ್ನಿಯ ಬಣ್ಣ ಕೆಂಪು)

141B/2 **ಊರ್ಧ್ವದಿಗಧಿಪತಿಬ್ರಹ್ಮನ ಧ್ಯಾನ**

**(ಹೇಮಾದ್ರಿಯ ದಾನಖಂಡದಲ್ಲಿ)**

ಕಮಲದಲ್ಲಿ ಹುಟ್ಟಿದ, ಮೂರು ವೇದಗಳ ಸ್ವರೂಪನಾದ, ವೇದಗಳಿಗೆ ಆವಾಸಸ್ಥಾನನಾದ, ಎಲ್ಲರಿಗೂ ಪಿತಾಮಹನೆನಿಸಿರುವ, ಯಜ್ಞಗಳ ಆಚರಣೆಯಲ್ಲಿ ದಕ್ಷನಾದ, ನಾಲ್ಕು ಮುಖಗಳುಳ್ಳ, ಪ್ರಸಿದ್ಧನಾದ ಈ ಬ್ರಹ್ಮನು, ನಿತ್ಯವೂ ಪ್ರಸನ್ನನಾಗಲಿ. **165**

**(ಔಚಿತ್ಯಾನುಸಾರ ಇವನ ದೇಹದ ಬಣ್ಣ ಪಾದರಿಯ ಹೂವಿನಂತೆ ನಸುಗೆಂಪು ಬಣ್ಣ)**

141B/3 **ಅಧೋದಿಗಧಿಪತಿಅನಂತಮೂರ್ತಿಯ ಧ್ಯಾನ**

**(ಹೇಮಾದ್ರಿಯ ದಾನಖಂಡದಲ್ಲಿ)**

ಯಾವ ಈ ಅನಂತನು, ಚರಾಚರಾತ್ಮಕವಾದ ಬ್ರಹ್ಮಾಂಡವನ್ನು ಹೂವಿನಂತೆ ತಲೆಯ ಮೇಲಿಟ್ಟುಕೊಂಡು ಧರಿಸಿದ್ದಾನೋ, ಅಂತಹ ಪ್ರಸಿದ್ಧನಾದ, ಅನಂತನಿಗೆ ನಿತ್ಯವೂ ನಮಸ್ಕಾರ, ಸದಾ ನಮಸ್ಕಾರ. **166**

**(ಔಚಿತ್ಯಕ್ಕನುಗುಣವಾಗಿ ಇವನ ದೇಹದ ಬಣ್ಣ ಬಿಳಿ)**

141B/4 **ನೃಸಿಂಹಪ್ರಾಸಾದದಲ್ಲಿ ಹೇಳಿರುವಂತೆ ಹತ್ತುದಿಕ್ಕುಗಳ ಸ್ವರೂಪ**

**ಪೂರ್ವದಿಕ್ಕಿನ ಸ್ವರೂಪ**

ಪೂರ್ವ ದಿಗಂಗನೆಯು ಬಾಲೆಯಾಗಿದ್ದು, ಆನೆಯಂತೆ ನಡಿಗೆಯುಳ್ಳವಳು. ಈ ದಿಕ್ಕು ಕೆಂಪು ಬಣ್ಣದಿಂದ ಕೂಡಿರಬೇಕು.

**(ದಿಕ್ಕಿನ ಬಣ್ಣ ಕೆಂಪು)**

141B/5 **ಆಗ್ನೇಯದಿಕ್ಕಿನ ಸ್ವರೂಪ**

**(ನೃಸಿಂಹಪ್ರಾಸಾದದಲ್ಲಿ)**

ಕಾರಂಡವು ಒಂದು ಬಗೆಯ ನೀರು ಹಕ್ಕಿ. ಆಗ್ನೇಯ ದಿಗಂಗನೆಯು ಕಾರಂಡಪಕ್ಷಿಯಂತೆ ನಡಿಗೆಯುಳ್ಳವಳು. ದೊಡ್ಡ ಶರೀರ ಇವಳದು. ಕಮಲದ ಹೋಲಿಕೆಯುಳ್ಳವಳು. ಪೂರ್ವ-ದಕ್ಷಿಣ ದಿಕ್ಕುಗಳ ಮಧ್ಯದ ದಿಕ್ಕು ಆಗ್ನೇಯದಿಕ್ಕು. **167**

**(ಕಮಲದ ಬಣ್ಣ)**

142A/1 **ದಕ್ಷಿಣದಿಕ್ಕಿನ ಸ್ವರೂಪ**

**(ನೃಸಿಂಹಪ್ರಾಸಾದದಲ್ಲಿ)**

ದಕ್ಷಿಣದಿಗ್ದೇವತೆಯು ಹದ್ದಿನ ಮೇಲೆ ಕುಳಿತಿದ್ದಾಳೆ. ಹಳದಿಯ ದೇಹಕಾಂತಿಯುಳ್ಳವಳು. ಹದ್ದಿನ ಮುಖವುಳ್ಳವಳು. ಯೌವನಕ್ಕೆ ಕಾಲಿಟ್ಟಿದ್ದಾಳೆ.

(ಇವಳ ದೇಹದ ಬಣ್ಣ ಹಳದಿ)

142A/2 **ನೈರ್ಋತ್ಯದಿಕ್ಕಿನ ಸ್ವರೂಪ**

(ನೃಸಿಂಹಪ್ರಾಸಾದದಲ್ಲಿ)

ದಕ್ಷಿಣ ಮತ್ತು ಪಶ್ಚಿಮ ದಿಕ್ಕುಗಳ ಮಧ್ಯದಲ್ಲಿರುವ ದಿಕ್ಕು ನೈರ್ಋತ್ಯದಿಕ್ಕು. ಒಂಟೆಯ ಮೇಲೆ ಕುಳಿತು ಹೋಗುತ್ತಾಳೆ. ಕಪ್ಪು ಮತ್ತು ಹಳದಿ ಮಿಶ್ರಿತ ಹಸಿರು ಬಣ್ಣದ ದೇಹವುಳ್ಳವಳು. ಇವಳು ತರುಣಿಯಾಗಿದ್ದಾಳೆ. 168

(ಇವಳ ದೇಹದ ಬಣ್ಣ ಹಸುರು)

142A/3 **ಪಶ್ಚಿಮದಿಕ್ಕಿನ ಸ್ವರೂಪ**

(ನೃಸಿಂಹಪ್ರಾಸಾದದಲ್ಲಿ)

ಪಶ್ಚಿಮ ದಿಗಂಗನೆಯು ಯುವತಿಯಾಗಿದ್ದಾಳೆ. ಇವಳಿಗೆ ಎರಡು ಕೈಗಳು. ಕಪ್ಪುಬಣ್ಣದ ದೇಹ. ಕುದುರೆಯ ಮೇಲೆ ಕುಳಿತಿದ್ದಾಳೆ.

(ಇವಳ ದೇಹದ ಬಣ್ಣ ಕಪ್ಪು)

142A/4 **ವಾಯುವ್ಯದಿಕ್ಕಿನ ಸ್ವರೂಪ**

(ನೃಸಿಂಹಪ್ರಾಸಾದದಲ್ಲಿ)

ಪಶ್ಚಿಮ ಮತ್ತು ಉತ್ತರ ದಿಕ್ಕುಗಳ ಮಧ್ಯದಲ್ಲಿರುವ ದಿಕ್ಕು ವಾಯುವ್ಯ. ಈ ದೇವತೆಯು ಆಸನದ ಮೇಲೆ ಪತಿಯೊಡನೆ ಕುಳಿತಿದ್ದಾಳೆ. ನೀಲಿಯ ಬಣ್ಣದ ಶರೀರವುಳ್ಳವಳು. ಧನುರ್ವಾದನದಲ್ಲಿ (ಬಿಲ್ಲಿನಾಕಾರದ ವಾದ್ಯ) ತತ್ಪರಳಾಗಿದ್ದಾಳೆ. 169

(ಇವಳ ದೇಹದ ಬಣ್ಣ ನೀಲಿ)

142A/5 **ಉತ್ತರದಿಕ್ಕಿನ ಸ್ವರೂಪ**

(ನೃಸಿಂಹಪ್ರಾಸಾದದಲ್ಲಿ)

ಉತ್ತರ ದಿಗ್ದೇವತೆಯ ಮುಖ ಬಿಳಿ. ಶರೀರ ಕೆಂಪು. ಇವಳು ವೃದ್ಧಳಾಗಿದ್ದಾಳೆ.

(ಶರೀರದ ಬಣ್ಣ ಕೆಂಪು, ಮುಖದ ಬಣ್ಣ ಬಿಳಿ)

142A/6

## ಈಶಾನ್ಯದಿಕ್ಕಿನ ಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ಪೂರ್ವ ಮತ್ತು ಉತ್ತರ ದಿಕ್ಕುಗಳ ಮಧ್ಯದಲ್ಲಿರುವ ದಿಕ್ಕು ಈಶಾನ್ಯ ದಿಕ್ಕು. ಈಶಾನ್ಯ ದಿಗ್ದೇವತೆಯು ಅತ್ಯಂತ ವೃದ್ಧಳಾಗಿದ್ದಾಳೆ. ಎತ್ತಿನ ಮೇಲೆ ಕುಳಿತಿದ್ದಾಳೆ. ಬಿಳಿಯ ಬಣ್ಣದ ದೇಹವುಳ್ಳವಳು. **170**

(ದೇಹದ ಬಣ್ಣ ಬಿಳಿ)

142B/1

## ಊರ್ಧ್ವದಿಕ್ಕಿನ ಸ್ವರೂಪ

(ಶೈವಾಗಮದಲ್ಲಿ)

ಊರ್ಧ್ವದಿಗ್ದೇವತೆಯು ಆಕಾಶಕ್ಕೆ ಸಮಾನಳಾಗಿದ್ದಾಳೆ. ನೀಲಿಯ ಬಣ್ಣದವಳು. ಇವಳ ಸ್ವರೂಪವು ಪಂಚಭೂತಗಳಲ್ಲಿ ಒಂದಾದ ಆಕಾಶದಂತೆ.

ನೀಲಿಯ ಬಣ್ಣದ ದೇಹವುಳ್ಳ, ನೀಲಿಯ ಬಣ್ಣದ ಬಟ್ಟೆಯನ್ನು ತೊಟ್ಟಿರುವ, ಎಲ್ಲ ಕಡೆ ಇರುವ, ಸೂರ್ಯಚಂದ್ರರನ್ನು ತನ್ನ ಎರಡು ಕೈಗಳನ್ನಾಗಿ ಉಳ್ಳ, ಸಕಲ ಆಭರಣಗಳಿಂದ ಭೂಷಿತವಾದ ಆಕಾಶವನ್ನು ನಾನು ಧ್ಯಾನ ಮಾಡುತ್ತೇನೆ. **171**

(ನೀಲಿಯ ಬಣ್ಣ)

ಹೇಮಾದ್ರಿಯ ದಾನಕಾಂಡದಲ್ಲಿ ಈ ಆಕಾಶಕ್ಕೆ ಷೋಡಶವಾರ್ಷಿಕವೆಂಬ ವಿಶೇಷಣವಿದೆ.

142B/2

## ಅಧೋದಿಕ್ಕಿನ ಸ್ವರೂಪ

(ಶೈವಾಗಮದಲ್ಲಿ)

ಕೆಳಗಿನ ದಿಕ್ಕು ಭೂಮಿಗೆ ಸಮಾನವಾದುದು. ಇದರ ಬಣ್ಣ ಬಿಳಿ. ಇದರ ಸ್ವರೂಪವು ಪಂಚಭೂತಗಳಲ್ಲಿ ಒಂದಾದ ಭೂಮಿಯಂತೆ.

ಬಿಳಿಯ ಬಣ್ಣವುಳ್ಳ, ದಿವ್ಯವಾದ ಆಭರಣಗಳಿಂದ ಭೂಷಿತವಾದ, ನಾಲ್ಕು ತೋಳುಗಳುಳ್ಳ, ಸೌಮ್ಯವಾದ ಶರೀರವುಳ್ಳ, ಉಗ್ರವಾದ ಸೂರ್ಯನ ಕಿರಣಗಳಂತೆ ಹೊಳೆಯುವ ಬಟ್ಟೆಗಳನ್ನುಳ್ಳ, ಬಲಭಾಗದ ಕೆಳಗಿನ ಮತ್ತು ಮೇಲಿನ ಎರಡು ಕೈಗಳಿಂದ ಕ್ರಮವಾಗಿ ರತ್ನಖಚಿತಪಾತ್ರೆ ಮತ್ತು ಸಸ್ಯವನ್ನು ಹಿಡಿದಿರುವ, ಹಾಗೆಯೇ ಎಡಭಾಗದ ಎರಡು ಕೈಗಳಿಂದ ಕ್ರಮವಾಗಿ ಕಮಲ ಮತ್ತು ಓಷಧಿಗಳಿಂದ ತುಂಬಿದ ಪಾತ್ರೆಯನ್ನು ಹಿಡಿದಿರುವ, ಪ್ರಸನ್ನವಾದ ಮುಖಕಮಲವುಳ್ಳ, ನಾಲ್ಕು ದಿಕ್ಕುಗಳ ಆನೆಗಳ ಬೆನ್ನನ್ನೇರಿ ಕುಳಿತಿರುವ, ರಸರೂಪಳಾದ, ಸರ್ವಸಸ್ಯಗಳಿಗೂ ಆಶ್ರಯಳಾದ, ಶುಭ್ರಳಾದ, ಭೂದೇವಿಯನ್ನು ಶರಣುಹೊಕ್ಕು ಭಜಿಸುತ್ತೇನೆ. **172-175A**

(ದೇಹದ ಬಣ್ಣ ಬಿಳಿ)

142B/3 **ಅಶ್ವಿನೀದೇವತೆಗಳ ಧ್ಯಾನ**

(ಶೈವಾಗಮದಲ್ಲಿ)

ಅಶ್ವಿನೀದೇವತೆಗಳು ಅವಳೀಸೋದರರು. ಇವರಿಬ್ಬರೂ ಜನಿವಾರವನ್ನು ತೊಟ್ಟಿದ್ದಾರೆ. ತಲೆಯಲ್ಲಿ ಜಟೆಯನ್ನು ಕಟ್ಟಿ ಕಿರೀಟವನ್ನು ಧರಿಸಿದ್ದಾರೆ. ಅರಳಿರುವ ಕೆಂಪು ನೈದಿಲೆಯಂತೆ ಸುಂದರವಾದ ವಿಶಾಲವಾದ ಕಣ್ಣುಗಳುಳ್ಳ, ಹಳದಿಯ ಹೂಮಾಲೆಗಳನ್ನು ಮತ್ತು ಹಳದಿಯ ಬಟ್ಟೆಗಳನ್ನು ತೊಟ್ಟು ಹಳದಿಯ ಬಣ್ಣದಿಂದ ಕಂಗೊಳಿಸುವ, ನಾಸತ್ಯದಸ್ರರೆಂಬ ಹೆಸರುಳ್ಳ, ಅಶ್ವಿನೀದೇವತೆಗಳು ವೈದ್ಯರೆಂದು ಸ್ಮೃತರಾಗಿದ್ದಾರೆ. **175B-176**

(ದೇಹದ ಬಣ್ಣ ಹಳದಿ)

**ಅಶ್ವಿನೀದೇವತೆಗಳ ಮತ್ತೊಂದು ಬಗೆಯ ಧ್ಯಾನ**

(ಶೈವಾಗಮದಲ್ಲಿ)

ಬಿಳಿಯ ಬಣ್ಣದ ದೇಹವುಳ್ಳ, ಎರಡು ಕೈಗಳುಳ್ಳ, ಅಮೃತದಿಂದ ತುಂಬಿರುವ ಕಲಶಗಳನ್ನು ತಮ್ಮ ಕರಕಮಲಗಳಲ್ಲಿ ಹಿಡಿದಿರುವ, ಕುದುರೆಯ ಮೇಲೆ ಕುಳಿತಿರುವ, ಅಶ್ವಿನೀದೇವತೆ-ಗಳನ್ನು ನಾವು ಸ್ತೋತ್ರ ಮಾಡುತ್ತೇವೆ. **177**

142B/4 **ಅಶ್ವಿನೀದೇವತೆಗಳ ಇನ್ನೊಂದು ರೀತಿಯ ಧ್ಯಾನ**

(ವೈದ್ಯಶಾಸ್ತ್ರದ ಆಯುರ್ವೇದತಂತ್ರದಲ್ಲಿ)

ಸಕಲಲಕ್ಷಣಗಳಿಂದ ಕೂಡಿರುವ ಅಶ್ವಿನೀದೇವತೆಗಳ ಆಕಾರವನ್ನು ಹೇಳುವೆನು. ಕಾಲಿನಿಂದ ಆರಂಭಿಸಿ ಕುತ್ತಿಗೆಯವರೆಗೆ ಕುದುರೆಯ ರೂಪ, ಮನುಷ್ಯಮುಖ, ಎರಡು ಕಣ್ಣುಗಳು, ತಲೆಯಲ್ಲಿ ಕಿರೀಟ, ಎರಡು ಕಿವಿಗಳು ದಪ್ಪನಾದ ಕಂಠಗಳು, ನಾಲ್ಕು ಕೈಗಳು, ಕುದುರೆಯ ಕಾಲುಗಳಂತೆ ಇರುವ ಎರಡು ಕಾಲುಗಳು ಇರುವಂತೆ, ಬಲಗಡೆಯ ಎರಡು ಕೈಗಳಲ್ಲಿ ಅಭಯಮುದ್ರೆ, ಮತ್ತು ಔಷಧಿಯನ್ನು ಹಿಡಿದಿರುವಂತೆ, ಎಡಗಡೆಯ ಎರಡು ಕೈಗಳಲ್ಲಿ ಪೆಟ್ಟಿಗೆ ಮತ್ತು ಅಮೃತಕಲಶವನ್ನು ಹಿಡಿದಿರುವಂತೆ, ನೂತನವಾದ ತಾಲಪತ್ರದ ಮೇಲೆ ಅಶ್ವಿನೀದೇವತೆಗಳ ಚಿತ್ರವನ್ನು ಚಿತ್ರಿಸಬೇಕು. ಅಶ್ವಿನೀದೇವತೆಗಳು ದೇವವೈದ್ಯರೆಂದು ಸ್ಮೃತರಾಗಿದ್ದಾರೆ. ದಸ್ರ ಮತ್ತು ನಾಸತ್ಯ ಎಂದು ಇವರಿಬ್ಬರ ಹೆಸರುಗಳು ಉಕ್ತವಾಗಿವೆ. ಇವರು ಬಿಳಿಯ ಶರೀರವುಳ್ಳವರೆಂದು ಹೇಳಿದ್ದಾರೆ. **178-181**

(ದೇಹದ ಬಣ್ಣ ಬಿಳಿ)

143A/1 **ಸಪ್ತಸಮುದ್ರಮೂರ್ತಿಗಳ ಧ್ಯಾನ**

(ನೃಸಿಂಹಪ್ರಾಸಾದದಲ್ಲಿ)

## ಲವಣಸಮುದ್ರಮೂರ್ತಿಯ ಧ್ಯಾನ
## ಉಪ್ಪಿನ ಸಮುದ್ರಮೂರ್ತಿ
## (ನೃಸಿಂಹಪ್ರಾಸಾದದಲ್ಲಿ)

ಲವಣಸಮುದ್ರಮೂರ್ತಿಗೆ ಎರಡು ಕೈಗಳಿರಬೇಕು. ರತ್ನಾಭರಣಗಳನ್ನು ತೊಟ್ಟಿರಬೇಕು. ಬಲಗೈಯಲ್ಲಿ ಜಪಮಾಲೆಯನ್ನು, ಎಡಗೈಯಲ್ಲಿ ಅನೇಕ ರತ್ನಗಳಿಂದ ತುಂಬಿದ ಪಾತ್ರೆಯನ್ನು ಹಿಡಿದಿರಬೇಕು. ಉತ್ತರೀಯವನ್ನು ಹೊದ್ದಿರಬೇಕು. ಜನಿವಾರವನ್ನು ಹಾಕಿರಬೇಕು. ಪಾದರಿಯ ಹೂವಿನಂತೆ ದೇಹಕಾಂತಿ ಇರಬೇಕು. ಸುಖಾಸನದಲ್ಲಿ ಕುಳಿತಿರಬೇಕು. ಈ ರೀತಿಯಲ್ಲಿ ಈ ಮೂರ್ತಿಯನ್ನು ಚಿತ್ರಿಸಬೇಕು. **182-182A**

**(ದೇಹದ ಬಣ್ಣ ಪಾದರಿಯ ಹೂವಿನಂತೆ ನಸುಗೆಂಪು)**

143A/2

## ಇಕ್ಷುಸಮುದ್ರಮೂರ್ತಿಯ ಧ್ಯಾನ
## ಕಬ್ಬಿನ ಸಮುದ್ರಮೂರ್ತಿ
## (ನೃಸಿಂಹಪ್ರಾಸಾದದಲ್ಲಿ)

ಹಸುವಿನ ಗಂಜಲಕ್ಕೆ ಸಮಾನವಾದ ಕಾಂತಿಯುಳ್ಳ, ಕಲಶ ಮತ್ತು ದಂಡಗಳನ್ನು ತನ್ನೆರಡು ಕೈಗಳಲ್ಲಿ ಹಿಡಿದಿರುವ, ದೇವನಾದ ಕಬ್ಬಿನ ಜಲ್ಲೆಗಳಿಂದ ಕೂಡಿದ ಇಕ್ಷುಸಮುದ್ರಮೂರ್ತಿ-ಯನ್ನು ಹೃದಯದಲ್ಲಿ ಭಾವಿಸುತ್ತೇನೆ. **183**

**(ಹಸುವಿನ ಗಂಜಲದಂತೆ ದೇಹದ ಬಣ್ಣ)**

143A/3

## ಸುರಾಸಮುದ್ರಮೂರ್ತಿಯ ಧ್ಯಾನ
## ಮದ್ಯದ ಸಮುದ್ರಮೂರ್ತಿ
## (ನೃಸಿಂಹಪ್ರಾಸಾದದಲ್ಲಿ)

ಗಂಡಕವೆಂಬ ಮೀನಿನ ಮೇಲೇರಿರುವ, ಗೋಮೇದಕ್ಕೆ ಸಮಾನವಾದ ಕಾಂತಿಯುಳ್ಳ, ಮುದ್ಗರವೆಂಬ ಆಯುಧ (ಸುತ್ತಿಗೆ), ಕಮಂಡಲುಗಳನ್ನು ತನ್ನೆರಡು ಕೈಗಳಲ್ಲಿ ಹಿಡಿದಿರುವ, ಸುರಾಸಮುದ್ರಮೂರ್ತಿ-ಯನ್ನು ನನ್ನ ಹೃದಯದಲ್ಲಿ ಭಾವಿಸಿಕೊಳ್ಳುತ್ತೇನೆ. **184**

**(ದೇಹದ ಬಣ್ಣ ಗೋಮೇದಕದಂತೆ ಹಳದಿ)**

ಗಂಡವೆನ್ನುವುದು ಒಂದು ವಿಶೇಷ ಮೀನಿನ ಹೆಸರು.

143A/4 **ಸರ್ಪಿಸ್ಸಮುದ್ರಮೂರ್ತಿಯ ಧ್ಯಾನ**

**ತುಪ್ಪದ ಸಮುದ್ರಮೂರ್ತಿ**

**(ನೃಸಿಂಹಪ್ರಾಸಾದದಲ್ಲಿ)**

ಘೃತಸಮುದ್ರಮೂರ್ತಿ ಕಂದುಬಣ್ಣದವನು, ಏಡಿಯ ಮೇಲೆ ಕುಳಿತಿರುವವನು, ಜಟಾಧಾರಿ, ಕಶೇರುವೆಂಬ ಒಂದು ಬಗೆಯ ಹುಲ್ಲಿನಿಂದ ತುಂಬಿರುವ ಪಾತ್ರೆ ಮತ್ತು ವಿದುವಿನ ಕೊಡವನ್ನು(?) ತನ್ನೆರಡು ಕೈಗಳಲ್ಲಿ ಹಿಡಿದಿರುವವನು ಎಂದು ತಿಳಿಯಬೇಕು. 185

(ದೇಹದ ಬಣ್ಣ ಕಂದುಬಣ್ಣ)

(ವಿದು - ಎಂದರೆ ಆನೆಯ ಕುಂಭಸ್ಥಳಗಳ ಮಧ್ಯಭಾಗ ಎಂದು ಅರ್ಥ. ಹಾಗಾಗಿ ಆನೆಯ ಕುಂಭಸ್ಥಳಗಳ ಮಧ್ಯಭಾಗದಿಂದ ಹರಿದು ಬರುವ ಮದೋದಕದಿಂದ ತುಂಬಿದ ಕೊಡ ಎಂದು ಅರ್ಥ ಮಾಡಬಹುದೆ?)

143A/5 **ದಧಿಸಮುದ್ರಮೂರ್ತಿಯ ಧ್ಯಾನ**

**ಮೊಸರಿನ ಸಮುದ್ರ**

**(ನೃಸಿಂಹಪ್ರಾಸಾದದಲ್ಲಿ)**

ದಧಿಸಮುದ್ರಮೂರ್ತಿಯು ಸಂಪೂರ್ಣವಾಗಿ ಮೊಸರಿನಿಂದ ಆವೃತನಾಗಿದ್ದಾನೆ. ಶುಭ್ರನಾದ ಇವನು ಕಮಲದ ಮೇಲೆ ಕುಳಿತಿದ್ದಾನೆ. ಇವನಿಗೆ ಎರಡು ಕೈಗಳಿದ್ದು ಅವುಗಳಿಂದ ದಂಡ ಮತ್ತು ಶಕ್ತಿ ಎಂಬ ಆಯುಧಗಳನ್ನು ಹಿಡಿದಿದ್ದಾನೆ. ಜಟಾಧಾರಿ ಇವನು. 186

(ದೇಹದ ಬಣ್ಣ ಅಚ್ಚ ಬಿಳಿ)

143A/6 **ಕ್ಷೀರಸಮುದ್ರಮೂರ್ತಿಯ ಧ್ಯಾನ**

**ಹಾಲಿನ ಸಮುದ್ರ**

**(ನೃಸಿಂಹಪ್ರಾಸಾದದಲ್ಲಿ)**

ಹಾಲಿನ ಸಮುದ್ರಮೂರ್ತಿಯ ಮೈಬಣ್ಣ ಬಿಳಿ. ಇವನಿಗೆ ಎರಡು ಕೈಗಳು. ರತ್ನಕುಂಡಲಗಳನ್ನು ಕಿವಿಗಳಿಗೆ ಹಾಕಿಕೊಂಡಿದ್ದಾನೆ. ಮೊಸಳೆಯ ಮೇಲೆ ಕುಳಿತಿದ್ದಾನೆ. ಬಲಗೈಯಲ್ಲಿ ಕಮಲವನ್ನು, ಎಡಗೈನಲ್ಲಿ ಕಲಶವನ್ನು ಹಿಡಿದುಕೊಂಡಿದ್ದಾನೆ. 187

(ದೇಹದ ಬಣ್ಣ ಬಿಳಿ)

143A/7 **ಶುದ್ಧೋದಕಸಮುದ್ರಮೂರ್ತಿಯ ಧ್ಯಾನ**

**ಶುದ್ಧವಾದ ನೀರಿನ ಸಮುದ್ರ**

**(ನೃಸಿಂಹಪ್ರಾಸಾದದಲ್ಲಿ)**

ಶುದ್ಧವಾದ ಸಮುದ್ರಮೂರ್ತಿಯು ಮುತ್ತಿನಂತೆ ಶುಭ್ರಕಾಂತಿಯುಳ್ಳವನು. ಇವನಿಗೆ ಎರಡು ಕೈಗಳು. ಕಿವಿಗಳಲ್ಲಿ ರತ್ನದ ಕುಂಡಲಗಳನ್ನು ಧರಿಸಿದ್ದಾನೆ. ಮೊಸಳೆಯ ಮೇಲೆ ಕುಳಿತಿದ್ದಾನೆ. ಬಲಗೈನಲ್ಲಿ ಕಮಲವನ್ನು, ಎಡಗೈನಲ್ಲಿ ಕಲಶವನ್ನು ಹಿಡಿದಿದ್ದಾನೆ. 188

(ದೇಹದ ಬಣ್ಣ ಮುತ್ತಿನಂತೆ ಬಿಳಿ)

143B/1 **ಪಂಚಭೂತಗಳಲ್ಲಿ ಪೃಥ್ವೀದೇವತೆಯ ಸ್ವರೂಪ**

**(ಶೈವಾಗಮದಲ್ಲಿ)**

ಬಿಳಿಯಬಣ್ಣದಿಂದ ಕೂಡಿರುವ, ದಿವ್ಯವಾದ ಆಭರಣಗಳಿಂದ ಅಲಂಕೃತಳಾದ, ನಾಲ್ಕು ತೋಳುಗಳುಳ್ಳ, ಸೌಮ್ಯವಾದ ಶರೀರವುಳ್ಳ, ಪ್ರಖರನಾದ ಸೂರ್ಯನಂತೆ ಹೊಳೆಯುವ ಬಟ್ಟೆಗಳನ್ನು ತೊಟ್ಟಿರುವ, ಭೂದೇವಿಯನ್ನು ಧ್ಯಾನಮಾಡಬೇಕು. 189

ಬಲಗಡೆಯ ಮೇಲಿನ ಕೈಯಲ್ಲಿ ರತ್ನಗಳಿಂದ ತುಂಬಿದ ಪಾತ್ರೆಯನ್ನು, ಕೆಳಗಡೆಯ ಕೈಯಲ್ಲಿ ಸಸ್ಯಗಳಿಂದ ತುಂಬಿದ ಪಾತ್ರೆಯನ್ನು, ಎಡಗಡೆಯ ಮೇಲಿನ ಕೈಯಲ್ಲಿ ಕಮಲವನ್ನು, ಕೆಳಗಡೆಯ ಕೈಯಲ್ಲಿ ಓಷಧಿಗಳಿಂದ ತುಂಬಿರುವ ಪಾತ್ರೆಯನ್ನು ಹಿಡಿದುಕೊಂಡಿರುವ, ನಾಲ್ಕು ದಿಗ್ಗಜಗಳ ಬೆನ್ನನ್ನೇರಿ ಕುಳಿತಿರುವ, ರಸರೂಪಳಾದ, ಎಲ್ಲ ಸಸ್ಯಗಳಿಗೂ ಉತ್ಪತ್ತಿಸ್ಥಾನಳಾದ, ಶುಭ್ರಳಾದ, ಭೂದೇವಿಯನ್ನು ನಾನು ಮೊರೆ ಹೋಗುತ್ತೇನೆ. 190-191A

(ದೇಹದ ಬಣ್ಣ ಅಚ್ಚಬಿಳುಪು)

143B/2 **ಜಲದೇವತೆಗಳ ಸ್ವರೂಪ**

**(ಶೈವಾಗಮದಲ್ಲಿ)**

ಸ್ವಚ್ಛವಾದ ಕನ್ನಡಿಯಂತೆ ನಿರ್ಮಲವಾಗಿರುವ, ಲೋಕದ ಎಲ್ಲ ಜೀವಿಗಳಿಗೂ ಸಂಜೀವಿನೀ ಔಷಧವಾಗಿರುವ, ಮಂಗಳಮಯವಾದ, ಮಾಧುರ್ಯಗುಣದಿಂದ ಕೂಡಿರುವ, ಸರ್ವಾಲಂಕಾರಗಳಿಂದ ಶೋಭಿಸುತ್ತಿರುವ, ಸ್ತ್ರೀರೂಪವನ್ನು ಧರಿಸಿರುವ, ಶುಭ್ರವಾದ, ಎರಡು ತೋಳುಗಳಿಂದ ಕಂಗೊಳಿಸುವ, ತಮ್ಮೆರಡು ಕೈಗಳಲ್ಲಿ ಪಾಶ ಮತ್ತು ಕಲಶಗಳನ್ನು ಹಿಡಿದುಕೊಂಡಿರುವ, ಯಾವಾಗಲೂ ಮೊಸಳೆಯನ್ನು ವಾಹನವನ್ನಾಗಿ ಮಾಡಿಕೊಂಡು ಕುಳಿತಿರುವ, ತಮ್ಮ ಶರೀರದ ಎಲ್ಲಾ ಅವಯವಗಳಿಗೂ ಮುತ್ತುಗಳನ್ನು ಅಲಂಕಾರ ಮಾಡಿಕೊಂಡಿರುವ, ಅಬ್ದೇವತೆಗಳನ್ನು ನಾನು ಸಂತೋಷದಿಂದ ಮನಸ್ಸಿನಲ್ಲಿ ಚಿಂತಿಸುತ್ತೇನೆ. 192-193A

(ದೇಹದ ಬಣ್ಣ ಅಚ್ಚಬಿಳುಪು)

143B/3 **ತೇಜೋದೇವತೆಯ ಸ್ವರೂಪ**

**(ಶೈವಾಗಮದಲ್ಲಿ)**

ಚಿನ್ನದ ಬಣ್ಣದಂತೆ ಶರೀರವುಳ್ಳ, ಏಳು ನಾಲಿಗೆಗಳನ್ನು ಉಳ್ಳ, ಆರೋಗ್ಯವಂತನಾದ, ಹೋತದ ಮೇಲೆ ಕುಳಿತಿರುವ, ಏಳು ಕೈಗಳುಳ್ಳ, ಸ್ವಾಹಾದೇವಿಯೊಡಗೂಡಿರುವ, ಶಕ್ತಿ ಮೊದಲಾದ ಆಯುಧಗಳನ್ನು ಹಿಡಿದಿರುವ ಕೈಗಳುಳ್ಳ, ಚಿನ್ನದಂತೆ ಹೊಳೆಯುವವನಾದ್ದರಿಂದ ವಿಭಾವಸು ಎಂಬ ಹೆಸರುಳ್ಳ, ಅಗ್ನಿಯನ್ನು ಧ್ಯಾನ ಮಾಡಬೇಕು. 194-194A

(ದೇಹದ ಬಣ್ಣ ಚಿನ್ನದಂತೆ ಹಳದಿ)

143B/4 **ವಾಯುದೇವತೆಯ ಸ್ವರೂಪ**

**(ಶೈವಾಗಮದಲ್ಲಿ)**

ಓಡುತ್ತಿರುವ ಜಿಂಕೆಯ ಮೇಲೆ ಕುಳಿತಿರುವ, ಎರಡು ತೋಳುಗಳುಳ್ಳ, ಬಾವುಟವನ್ನು ಹಿಡಿದಿರುವ, ವರದಮುದ್ರೆ ಮತ್ತು ದಾನಮುದ್ರೆಯನ್ನು ಎರಡು ಕೈಗಳಲ್ಲಿ ಹಿಡಿದಿರುವ, ಹೊಗೆಯಂತೆ ಕಪ್ಪು ಬಣ್ಣವುಳ್ಳ, ವಾಯುದೇವತೆಯನ್ನು ನಾನು ಭಜಿಸುತ್ತೇನೆ. 195

(ದೇಹದ ಬಣ್ಣ ಹೊಗೆಯುಂತೆ ಕಪ್ಪು)

143B/5 **ಆಕಾಶದೇವತೆಯ ಸ್ವರೂಪ**

**(ಶೈವಾಗಮದಲ್ಲಿ)**

ನೀಲಿಯ ಬಣ್ಣದ ದೇಹವುಳ್ಳ, ನೀಲಿಯ ಬಣ್ಣದ ಬಟ್ಟೆಯನ್ನು ತೊಟ್ಟಿರುವ, ವಿಭುವಾದ, ಚಂದ್ರ ಮತ್ತು ಸೂರ್ಯರನ್ನೇ ತನ್ನೆರಡು ಕೈಗಳನ್ನಾಗಿ ಉಳ್ಳ, ಎರಡು ತೋಳುಗಳುಳ್ಳ, ಎಲ್ಲ ಬಗೆಯ ಆಭರಣಗಳಿಂದ ಭೂಷಿತನಾದ, ಆಕಾಶದೇವತೆಯನ್ನು ನಾನು ಧ್ಯಾನ ಮಾಡುತ್ತೇನೆ. 196

**ವಿಶೇಷ ವಿಷಯ** - ನಿಶ್ಚಿತವಾದ ಪರಿಮಾಣವುಳ್ಳ ಪದಾರ್ಥಗಳು ಮೂರ್ತದ್ರವ್ಯಗಳು. ಎಲ್ಲ ಮೂರ್ತದ್ರವ್ಯಗಳ ಸಂಬಂಧವನ್ನು ಹೊಂದಿರುವುದು ವಿಭುವಾಗುತ್ತದೆ. ಅಂದರೆ ಎಲ್ಲ ಕಡೆ ವ್ಯಾಪಿಸಿರುವುದು ಎಂದು ಅರ್ಥ.

ಹೇಮಾದ್ರಿಯ ದಾನಖಂಡದಲ್ಲಿ ಈ ಆಕಾಶಕ್ಕೆ ಷೋಡಶ ವಾರ್ಷಿಕವೆಂದು ವಿಶೇಷಣವಿದೆ.

(ದೇಹದ ಬಣ್ಣ ನೀಲಿ)

144A **ಧರ್ಮ ಮೊದಲಾದ ನಾಲ್ಕರ ಹೆಸರುಗಳು, ಬಣ್ಣಗಳು ಮತ್ತು ಸ್ವರೂಪಗಳು**

**(ನೃಸಿಂಹಪ್ರಾಸಾದದಲ್ಲಿ)**

ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ ಎಂಬುದಾಗಿ ಈ ನಾಲ್ಕು ಸಿಂಹದಂತೆ ರೂಪವನ್ನು ಹೊಂದಿವೆ ಎಂದು ನಿರೂಪಿತವಾಗಿದೆ. 197

**ಇವುಗಳ ಬಣ್ಣಗಳು ಹೀಗಿವೆ -**

ಧರ್ಮ - ಬಿಳಿ, ಜ್ಞಾನ - ಕೆಂಪು, ವೈರಾಗ್ಯ - ಹಳದಿ ಮತ್ತು ಐಶ್ವರ್ಯ - ಕಪ್ಪು.

## ಧರ್ಮ ಮೊದಲಾದ ನಾಲ್ಕರ ಅಭಿಮಾನಿ ದೇವತೆಗಳ ಧ್ಯಾನ

**(ಪಾಂಚರಾತ್ರಾಗಮದಲ್ಲಿ)**

ಧರ್ಮದ ಅಧಿದೇವತೆ ಯಮ, ಜ್ಞಾನಕ್ಕೆ ಅಧಿದೇವತೆ ವಾಯು, ವೈರಾಗ್ಯಕ್ಕೆ ಅಧಿದೇವತೆ ಶಿವ, ಐಶ್ವರ್ಯಕ್ಕೆ ಅಧಿದೇವತೆ ಇಂದ್ರ. 197A

ಯಮ, ವಾಯು, ಶಿವ, ಇಂದ್ರರ ಲಕ್ಷಣಗಳನ್ನು ಅಷ್ಟದಿಕ್ಪಾಲಕರ ಲಕ್ಷಣಗಳನ್ನು ಹೇಳುವಾಗ ಹೇಳಲಾಗಿದೆ. ಅಲ್ಲಿ ನೋಡುವುದು.

144A/1 ವೈರಾಗ್ಯಾಭಿಮಾನಿದೇವತೆ ಶಿವ. ಇವನ ದೇಹದ ಬಣ್ಣ ಬಿಳಿ. ಇವನ ಲಕ್ಷಣವು ದಿಕ್ಪಾಲಕ ಈಶಾನನಂತೆ.

144A/2 ವೈರಾಗ್ಯಸ್ವರೂಪ ಹಳದಿ ಬಣ್ಣ.

144A/3 ಐಶ್ವರ್ಯಾಭಿಮಾನಿ ದೇವತೆ ಇಂದ್ರ. ಚಿನ್ನದಂತೆ ಹಳದಿ ಬಣ್ಣ. ದಿಕ್ಪಾಲಕ ಇಂದ್ರನಂತೆ ಇವನ ಲಕ್ಷಣ.

144A/4 ಐಶ್ವರ್ಯಸ್ವರೂಪ ಕಪ್ಪು ಬಣ್ಣ.

144A/5 ಧರ್ಮಾಭಿಮಾನಿ ದೇವತೆ ಯಮ. ಶ್ಯಾಮವರ್ಣ. ಇವನ ಲಕ್ಷಣ ದಿಕ್ಪಾಲಕ ಯಮನಂತೆ.

144A/6 ಧರ್ಮದ ಸ್ವರೂಪ ಬಿಳಿಯ ಬಣ್ಣ.

144A/7 ಜ್ಞಾನಾಭಿಮಾನಿ ದೇವತೆ ವಾಯು. ಹೊಗೆಯಂತೆ ಕಪ್ಪು ಬಣ್ಣ. ದಿಕ್ಪಾಲಕ ವಾಯುವಿನಂತೆ ಇವನ ಲಕ್ಷಣ.

144A/8 ಜ್ಞಾನದ ಸ್ವರೂಪ ಕೆಂಪು ಬಣ್ಣ.

144A/9

## ಪುಣ್ಯಪುರುಷನ ಲಕ್ಷಣ

**(ಕಾರಣಾಗಮದಲ್ಲಿ)**

ಸಿಂಹಾಸನದಲ್ಲಿ ಕುಳಿತಿರುವ, ಚಿನ್ನದಂತೆ ಹೊಂಬಣ್ಣವುಳ್ಳ, ಕಿರೀಟವನ್ನು ಧರಿಸಿರುವ, ದೇವತೆಗಳಿಂದ ಸ್ತುತಿಸಲ್ಪಟ್ಟ ಪಾದಕಮಲಗಳುಳ್ಳ, ಪುಣ್ಯಪುರುಷನನ್ನು ನಾನು ಹೃದಯದಲ್ಲಿ ಕಲ್ಪಿಸಿಕೊಳ್ಳುತ್ತೇನೆ. 198

**(ದೇಹದ ಬಣ್ಣ ಚಿನ್ನದಂತೆ ಹಳದಿ)**

144B

## ಅಧರ್ಮ ಮೊದಲಾದ ನಾಲ್ಕು ಜನರ ಧ್ಯಾನ ಮತ್ತು ಇವರ ನಾಲ್ಕು ಅಭಿಮಾನಿ ದೇವತೆಗಳ ಧ್ಯಾನ

(ಪಾಂಚರಾತ್ರಾಗಮದ ಪಾದ್ಮಸಂಹಿತೆಯಲ್ಲಿ)

### ಅಧರ್ಮ ಮೊದಲಾದ ನಾಲ್ಕು ಜನರ ಧ್ಯಾನ

ಆಯಾಯಾ ದಿಕ್ಕುಗಳಲ್ಲಿ ಇವರು ನೆಲಸಿದ್ದಾರೆ. ಇವರೆಲ್ಲರೂ ಪುರುಷಾಕಾರವುಳ್ಳವರು. ಇವರಿಗೆ ನಾಲ್ಕು ತೋಳುಗಳು. ಸಿಂಹದಂತೆ ಮುಖವಿದೆ. ಇವರೆಲ್ಲರ ದೇಹದ ನಡುವಿನಿಂದ ಮೇಲ್ಭಾಗ ಬಿಳಿಯ ಬಣ್ಣ. ನಡುವಿನಿಂದ ಕೆಳಭಾಗ ಕೆಂಪು. ಅಂಜಲಿಬದ್ಧವಾದ ತಮ್ಮೆರಡು ಕೈಗಳನ್ನು ಎದುರಾಗಿ ಹಿಡಿದಿದ್ದಾರೆ. ಇನ್ನೆರಡು ಕೈಗಳಲ್ಲಿ ಯೋಗಪೀಠವನ್ನು ಹಿಡಿದುಕೊಂಡಿದ್ದಾರೆ. 199-200

(ಇವರ ಮುಖದಲ್ಲಿ ಬಿಳಿಯ ಬಣ್ಣ, ಶರೀರದಲ್ಲಿ ಕೆಂಪು ಬಣ್ಣ)

### ಅಧರ್ಮಾದಿ ನಾಲ್ಕು ಜನರ ಅಭಿಮಾನಿ ದೇವತೆಗಳ ಧ್ಯಾನ

ಅಧರ್ಮಾಧಿಪತಿ ನಿರ್ಋತಿ, ಅಜ್ಞಾನಾಧಿಪತಿ ದುರ್ಗಾ, ಅವೈರಾಗ್ಯಾಧಿಪತಿ ಕಾಮ, ಅನೈಶ್ವರ್ಯಾಧಿಪತಿ ರುದ್ರ.

ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ ಎಂಬ ನಾಲ್ಕು ಜನರು ಅಪೂಜಿತರಾದವರು. ಇವರ ಅಭಿಮಾನಿ ದೇವತೆಗಳಾದ ನಿರ್ಋತಿ, ದುರ್ಗಾ, ಕಾಮ, ರುದ್ರರು ಈ ಅಧರ್ಮಾದಿಗಳನ್ನು ಕೊಡುವಂತಹ ದಾತಾರರು. 201

ಇವರ ಸ್ವರೂಪಗಳನ್ನು ಆಯಾಯಾ ಮೂರ್ತಿಗಳ ಲಕ್ಷಣಗಳನ್ನು ಹೇಳುವಾಗ ಹೇಳಲಾಗಿದೆ. ರುದ್ರನ ಲಕ್ಷಣ ಆರ್ದ್ರಾನಕ್ಷತ್ರದೇವತೆಯ ಲಕ್ಷಣದಂತೆ. ದುರ್ಗಾದೇವತೆಯ ಲಕ್ಷಣವು ರೌದ್ರೀಸಂವತ್ಸರ ದೇವತೆಯ ಲಕ್ಷಣದಂತೆ.

144B/1 ಅನೈಶ್ವರ್ಯಾಭಿಮಾನಿ ದೇವತೆ ರುದ್ರ. ಇವನ ಬಣ್ಣ ಬಿಳಿ. ಆರ್ದ್ರಾನಕ್ಷತ್ರದೇವತೆಯಂತೆ ಇವನ ಲಕ್ಷಣ.

144B/2 ಅನೈಶ್ವರ್ಯಸ್ವರೂಪ ಕಪ್ಪು ಬಣ್ಣ.

144B/3 ಅಜ್ಞಾನಾಭಿಮಾನಿ ದೇವತೆ ದುರ್ಗಾ. ಇವಳ ಬಣ್ಣ ನೀಲಿ. ರೌದ್ರೀಸಂವತ್ಸರದೇವತೆಯಂತೆ ಇವಳ ಲಕ್ಷಣ.

144B/4 ಅಜ್ಞಾನಸ್ವರೂಪ ಕೆಂಪು ಬಣ್ಣ.

144B/5 ಅವೈರಾಗ್ಯಾಭಿಮಾನಿದೇವತೆ ಕಾಮ. ಇವನ ಬಣ್ಣ ಚಿನ್ನದಂತೆ ಹಳದಿ.

144B/6 ಅವೈರಾಗ್ಯಸ್ವರೂಪ ಹಳದಿಬಣ್ಣ.

144B/7 ಅಧರ್ಮಾಭಿಮಾನಿದೇವತೆ ನಿರ್ಋತಿ. ಇವನ ಬಣ್ಣ ನೀಲಿ.

144B/8 ಅಧರ್ಮಸ್ವರೂಪ ಬಿಳಿ ಬಣ್ಣ.

144B/9 **ಪಾಪಪುರುಷನ ಲಕ್ಷಣ**

**(ಪಾಂಚರಾತ್ರಾಗಮದಲ್ಲಿ)**

ಪಾಪಪುರುಷನಿಗೆ ಬ್ರಹ್ಮಹತ್ಯೆಯೇ ತಲೆಯು. ಅಂದರೆ ಸದಾ ಬ್ರಹ್ಮಹತ್ಯೆಯನ್ನು ಮಾಡಬೇಕೆಂದು ಇವನ ತಲೆ ಚಿಂತಿಸುತ್ತಿರುತ್ತದೆ. ಚಿನ್ನ ಮತ್ತು ಕಳ್ಳತನಗಳೇ ಇವನ ಎರಡು ಭುಜಗಳು. ಅಂದರೆ ಯಾವಾಗಲೂ ಚಿನ್ನ ಮುಂತಾದ ವಸ್ತುಗಳನ್ನು ಕದಿಯುವುದರಲ್ಲೇ ಇವನ ಕೈಗಳು ತೊಡಗಿರುತ್ತವೆ. ಯಾವಾಗಲೂ ಮದ್ಯಪಾನ ಮಾಡಬೇಕೆಂಬ ಚಿಂತೆಯಲ್ಲೇ ಇವನ ಮನಸ್ಸು ಯೋಚಿಸುತ್ತಿರುತ್ತದೆ. ಗುರುತಲ್ಪಗಮನದಲ್ಲೇ ಇವನ ಸೊಂಟಗಳು ನಿರತವಾಗಿವೆ. ಗುರುಪತ್ನಿ, ಇತರ ಪರಸ್ತ್ರೀಯರನ್ನು ಭೋಗಿಸಬೇಕೆಂಬ ಬಯಕೆಯಿಂದ ಇವನ ಎರಡು ಪಾದಗಳು ಸದಾ ಸುತ್ತುತ್ತಿರುತ್ತವೆ. ಇವನ ಶರೀರದ ಎಲ್ಲ ಅವಯವಗಳಲ್ಲೂ ಪಾತಕಗಳೇ ತುಂಬಿವೆ. ಇವನ ರೋಮರೋಮಗಳಲ್ಲೆಲ್ಲ ಉಪಪಾತಕಗಳು ತುಂಬಿಹೋಗಿವೆ. ಇವನ ಹುಬ್ಬುಗಳು, ಗಡ್ಡ ಮತ್ತು ಕಣ್ಣುಗಳು ಹಳದಿಯ ಬಣ್ಣದಿಂದ ಕೂಡಿವೆ. ಇವನು ತನ್ನ ಹೊಟ್ಟೆಯ ಎಡಭಾಗದಲ್ಲಿ ನಿಯಮೇನ (ಸದಾ) ಖಡ್ಗಮೃಗದ ಚರ್ಮವನ್ನು ಕಟ್ಟಿಕೊಂಡಿರುತ್ತಾನೆ. ಹೀಗೆ ಪಾಪಪುರುಷನ ಲಕ್ಷಣವನ್ನು ಚಿಂತಿಸಬೇಕು. **202-203A**

**(ದೇಹದ ಬಣ್ಣ ಕಪ್ಪು)**

145A **ನೃಸಿಂಹಪ್ರಾಸಾದದಲ್ಲಿ ಹೇಳಿರುವಂತೆ ನಾಲ್ಕು ವೇದಮೂರ್ತಿಗಳ ಧ್ಯಾನ**

ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ ಹೇಳಿರುವಂತೆ ಇವರ ಹೆಂಡತಿಯರ ಧ್ಯಾನ. ಸ್ಕಾಂದಪುರಾಣದ ಹೇಮಾದ್ರಿಖಂಡದ ದಾನಖಂಡದಲ್ಲಿ ಹೇಳಿರುವಂತೆ ಇವರ ಅಭಿಮಾನಿದೇವತೆಗಳ ಧ್ಯಾನ

145A/1 **ಋಗ್ವೇದಸ್ವರೂಪ**

**(ನೃಸಿಂಹಪ್ರಾಸಾದದಲ್ಲಿ)**

ಋಗ್ವೇದದೇವತಾಮೂರ್ತಿಯು ಬಿಳಿಯ ಬಣ್ಣದವನು. ಇವನಿಗೆ ಎರಡು ಕೈಗಳು. ಇವನದು ಕತ್ತೆಯ ಮುಖ. ಕೈನಲ್ಲಿ ಜಪಮಾಲೆಯನ್ನು ಹಿಡಿದಿದ್ದಾನೆ. ಸೌಮ್ಯಮೂರ್ತಿ ಇವನು. ಪ್ರೀತನಾಗಿದ್ದಾನೆ. ವ್ಯಾಖ್ಯಾನಕಾರ್ಯದಲ್ಲಿ ತೊಡಗಿದ್ದಾನೆ. **204**

**(ದೇಹದ ಬಣ್ಣ ಬಿಳಿ)**

## ಋಗ್ವೇದಮೂರ್ತಿಯ ಹೆಂಡತಿಯಾದ ಸಾಮಧೇನಿಯ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಋಗ್ವೇದದೇವತಾಮೂರ್ತಿಯ ಹೆಂಡತಿಯ ಹೆಸರು ಸಾಮಿಧೇನಿ. ಇವಳಿಗೆ ನವಿಲಿನ ಮುಖ. ಎರಡು ಕೈಗಳಿವೆ. ಇವು ಬಳೆಗಳಿಂದ ಭೂಷಿತವಾಗಿವೆ. ತನ್ನೆರಡು ಕೈಗಳಲ್ಲಿ ಕಮಲಗಳನ್ನು ಹಿಡಿದಿದ್ದಾಳೆ. ಹಳದಿಬಣ್ಣದ ಬಟ್ಟೆಗಳನ್ನು ತೊಟ್ಟಿದ್ದಾಳೆ. ಇವಳು ಅದ್ವಿತೀಯಳಾಗಿದ್ದಾಳೆ. ಹೀಗೆ ಸಾಮಿಧೇನಿಯ ಸ್ವರೂಪವು ಹೇಳಲ್ಪಟ್ಟಿದೆ. 205

ಇವಳ ಬಣ್ಣ ಬಿಳಿ. ಹೇಮಾದ್ರಿಯ ದಾನಖಂಡದಲ್ಲಿ ಮತ್ತು ಶಿವತತ್ತ್ವರತ್ನಾಕರದಲ್ಲಿ ಋಗ್ವೇದಕ್ಕೆ ಉಪವೇದ ಆಯುರ್ವೇದ ಎಂದು ಹೇಳಿದೆ.

145A/2

## ಋಗ್ವೇದದ ಅಭಿಮಾನಿಸೋಮದೇವತಾ ಧ್ಯಾನ

(ಹೇಮಾದ್ರಿಯ ದಾನಖಂಡದಲ್ಲಿ)

ಋಗ್ವೇದದ ಗೋತ್ರ ಅತ್ರಿ. ಈ ವೇದಕ್ಕೆ ಸೋಮನು ಅಭಿಮಾನಿದೇವತೆಯೆಂದು ಬಲ್ಲವರು ತಿಳಿದಿದ್ದಾರೆ. 205A

## ನವಗ್ರಸ್ತಚಂದ್ರನಂತೆ ಇವನ ಧ್ಯಾನ

(ಗ್ರಹಣಾರಂಭಕಾಲದ ಚಂದ್ರನಂತೆ ಇವನ ಧ್ಯಾನ)

ಬೆಳ್ಳಗಿರುವ, ಬಿಳಿಯ ಬಟ್ಟೆಯನ್ನು ತೊಟ್ಟಿರುವ, ಹತ್ತು ಕುದುರೆಗಳನ್ನುಳ್ಳ, ಬಿಳಿಯ ಆಭರಣಗಳನ್ನು ಧರಿಸಿರುವ, ಕೈನಲ್ಲಿ ಗದೆಯನ್ನು ಹಿಡಿದಿರುವ, ಎರಡು ಕೈಗಳುಳ್ಳ, ವರಗಳನ್ನು ಕೊಡುವ, ಚಂದ್ರನು ಚಿತ್ರಿತನಾಗಬೇಕು. 206

(ದೇಹದ ಬಣ್ಣ ಬಿಳಿ)

145A/3

## ಯಜುರ್ವೇದಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ಯಜುರ್ವೇದ ಮೂರ್ತಿಗೆ ಆಡಿನ ಮುಖ. ಅವನ ಬಣ್ಣ ಹಳದಿ. ಬಲದ ಕೈಯಲ್ಲಿ ಜಪಮಾಲೆಯನ್ನು ಹಿಡಿದಿದ್ದಾನೆ. ಎಡದ ಕೈಯಲ್ಲಿ ವಜ್ರಾಯುಧವನ್ನು ಹಿಡಿದಿದ್ದಾನೆ. ಇವನು ಐಶ್ವರ್ಯವನ್ನು ಕೊಡುವವನು ಮತ್ತು ಮಂಗಳದಾಯಕನು. 207

(ದೇಹದ ಬಣ್ಣ ಹಳದಿ)

## ಇವನ ಹೆಂಡತಿ ಸೃಗಾದೇವಿಯ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಸೃಗಾದೇವಿಯ ಲಕ್ಷಣವನ್ನು ಹೇಳುತ್ತೇನೆ ಕೇಳು. ಇವಳು ಕೆಂಪು ಬಣ್ಣವುಳ್ಳವಳು, ವಿಶಾಲವಾದ ಕಣ್ಣುಗಳುಳ್ಳವಳು. ಕೈಗಳಲ್ಲಿ ಕಮಲಗಳನ್ನು ಹಿಡಿದಿದ್ದಾಳೆ. ತೆಳುವಾದ ನಡುವುಳ್ಳವಳು. 208A

(ಇವಳ ಮೈಬಣ್ಣ ಕೆಂಪು)

ಈ ಯಜುರ್ವೇದದ ಉಪವೇದ ಧನುರ್ವೇದ ಎಂದು ಹೇಮಾದ್ರಿಯ ದಾನಖಂಡದಲ್ಲಿ ಹೇಳಿದೆ.

145A/4 ## ಯಜುರ್ವೇದದ ಅಭಿಮಾನಿದೇವತೆ ರುದ್ರನ ಧ್ಯಾನ

(ಹೇಮಾದ್ರಿಯ ದಾನಖಂಡದಲ್ಲಿ)

ಕಾಶ್ಯಪಸಂಹಿತೆ ಯಜುರ್ವೇದಕ್ಕೆ ಅಭಿಮಾನಿದೇವತೆ ರುದ್ರನೆಂದು ಜ್ಞಾನಿಗಳು ಹೇಳಿದ್ದಾರೆ. 208B

## ಯಜುರ್ವೇದದ ಪ್ರತ್ಯಧಿದೇವತೆಯ ಧ್ಯಾನ

ಯಜುರ್ವೇದಕ್ಕೆ ಅಧಿದೇವತೆ ರುದ್ರ. ಪ್ರತ್ಯಧಿದೇವತೆ ಸೂರ್ಯ.

ರುದ್ರನು ಸೂರ್ಯನ ಪ್ರತ್ಯಧಿದೇವತೆ. ಅವನ ಸ್ವರೂಪವು ಹೀಗಿದೆ. ಇವನು ಶಿವನು. ಇವನಿಗೆ ಐದು ಮುಖಗಳು. ಎತ್ತನ್ನೇರಿ ಕುಳಿತಿದ್ದಾನೆ. ಪ್ರತಿಯೊಂದು ಮುಖದಲ್ಲೂ ಮೂರು ಕಣ್ಣುಗಳು. ಕಪಾಲ, ಶೂಲ, ಖಟ್ವಾಂಗವೆಂಬ ಆಯುಧ ಮತ್ತು ಪಿನಾಕವೆಂಬ ಬಿಲ್ಲನ್ನು ನಾಲ್ಕು ಕೈಗಳಲ್ಲಿ ಹಿಡಿದು-ಕೊಂಡಿದ್ದಾನೆ. 209

(ಇವನ ದೇಹದ ಬಣ್ಣ ಬಿಳಿ)

145B/1 ## ಸಾಮವೇದದ ಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ಸಾಮವೇದ ದೇವತೆಗೆ ಕುದುರೆಯ ಮುಖ. ಕನ್ನೈದಿಲೆಹೂವಿನ ದಳಕ್ಕೆ ಸಮಾನವಾದ ದೇಹಕಾಂತಿ ಇವನದು. ಬಲಗೈನಲ್ಲಿ ಜಪಮಾಲೆಯನ್ನು, ಎಡಗೈನಲ್ಲಿ ಕಳಶವನ್ನು ಹಿಡಿದಿದ್ದಾನೆ. 210

(ಇವನ ದೇಹದ ಬಣ್ಣ ನೀಲಿ)

## ಸಾಮವೇದದ ದೇವತೆಯ ಹೆಂಡತಿ ಕುಹೂದೇವಿಯ ಧ್ಯಾನ

(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)

ಕುಹೂದೇವಿಯ ಮುಖವು ಪೂರ್ಣಿಮೆಯ ಚಂದ್ರನಿಗೆ ಸಮಾನವಾಗಿದೆ. ಪರಿಶುಭ್ರಳಾದ ಈ ದೇವಿಯು

ಎರಡು ಕೈಗಳಿಂದ ಭೂಷಿತಳಾಗಿದ್ದಾಳೆ. ಎಡಗೈನಲ್ಲಿ ಗಿಳಿಯನ್ನೂ, ಬಲಗೈನಲ್ಲಿ ಧಾನ್ಯದ ಗೊಂಚಲನ್ನೂ ಹಿಡಿದುಕೊಂಡಿದ್ದಾಳೆ. 211

(ಇವಳ ದೇಹದ ಬಣ್ಣ ಬಿಳಿ)

ಇವಳ ಬಣ್ಣ ಬಿಳಿ. ಸಾಮವೇದದ ಉಪವೇದ ಗಾಂಧರ್ವವೇದವೆಂದು ಹೇಮಾದ್ರಿಯಲ್ಲಿ ಹೇಳಿದೆ.

145B/2 **ಸಾಮವೇದದ ಅಭಿಮಾನಿದೇವತೆ ಇಂದ್ರನ ಧ್ಯಾನ**

**(ಹೇಮಾದ್ರಿಯ ದಾನಕಾಂಡದಲ್ಲಿ)**

ಸಾಮವೇದವೂ ಸಹ ಭಾರದ್ವಾಜಗೋತ್ರದಲ್ಲಿ ಹುಟ್ಟಿದ ಇಂದ್ರನು. 211A

ಇಂದ್ರನ ಸ್ವರೂಪವು ಅಧಿದೇವತೆ ಬೃಹಸ್ಪತಿಯಂತೆ.

**ಇಂದ್ರನ ಧ್ಯಾನ**

ಇಂದ್ರನು ನಾಲ್ಕು ದಂತಗಳುಳ್ಳ ಆನೆಯ ಮೇಲೇರಿ ಕುಳಿತಿರಬೇಕು. ವಜ್ರಾಯುಧ ಮತ್ತು ಅಂಕುಶಗಳನ್ನು ಕೈಗಳಲ್ಲಿ ಹಿಡಿದಿರಬೇಕು. ನಾನಾವಿಧವಾದ ಆಭರಣಗಳಿಂದ ಭೂಷಿತ-ನಾಗಿರಬೇಕು. ಈ ರೀತಿ ಪೂರ್ವದಿಕ್ಕಿಗೆ ಒಡೆಯನಾದ ಇಂದ್ರನನ್ನು ಚಿತ್ರಿಸಬೇಕು. 212

(ಚಿನ್ನದಂತೆ ಇವನ ದೇಹದ ಬಣ್ಣ)

145B/3 **ಅಥರ್ವಣವೇದದ ಸ್ವರೂಪ**

**(ನೃಸಿಂಹಪ್ರಾಸಾದದಲ್ಲಿ)**

ಅಥರ್ವಣವೆಂಬ ಹೆಸರಿನ ವೇದಕ್ಕೆ ಕೋತಿಯ ಮುಖ. ಬಿಳಿಯ ದೇಹ. ಎಡಗೈನಲ್ಲಿ ಜಪಮಾಲೆಯನ್ನೂ, ಬಲಗೈನಲ್ಲಿ ಕಲಶವನ್ನೂ ಹಿಡಿದಿದ್ದಾನೆಂದು ಸ್ಮೃತವಾಗಿದೆ. 213

(ಇವನ ದೇಹದ ಬಣ್ಣ ಬಿಳಿ)

**ಅಥರ್ವಣವೇದದ ಹೆಂಡತಿ ಸಮಿದ್ದೇವಿಯ ಧ್ಯಾನ**

**(ಸ್ಕಾಂದಪುರಾಣದ ಲಕ್ಷ್ಮೀನಾರಾಯಣಸಂವಾದದಲ್ಲಿ)**

**ಸಮಿದ್ದೇವಿಯ ಲಕ್ಷಣವು ಹೇಳಲ್ಪಡುತ್ತದೆ**

ಸಮಿದ್ದೇವಿಯ ಮುಖವು ಹಂದಿಯಂತೆ ಇದೆ. ಇವಳ ಕಣ್ಣುಗಳು ಚಕೋರಪಕ್ಷಿಯ ಕಣ್ಣುಗಳಂತೆ ಇವೆ. ಇವಳ ಬಟ್ಟೆಗಳು ಸಂಪಿಗೆಯ ಹೂವಿನಂತೆ ಹಳದಿಯ ಬಣ್ಣದಿಂದ ಕಂಗೊಳಿಸುತ್ತಿವೆ. ಇವಳು ತನ್ನ ನಾಲ್ಕು ಕೈಗಳಿಂದ ಸ್ರುಕ್ಕು, ಸ್ರುವ, ಕಮಲ ಮತ್ತು ಕಲಶವನ್ನು ಹಿಡಿದುಕೊಂಡಿದ್ದಾಳೆ. 214

(ಇವಳ ದೇಹದ ಬಣ್ಣ ಚಿನ್ನದಂತೆ ಹಳದಿ)

ಈ ಅಥರ್ವವೇದಕ್ಕೆ ಅರ್ಥವೇದವು ಉಪವೇದವೆಂದು ಹೇಮಾದ್ರಿಯಲ್ಲೂ, ಅಥರ್ವಶಿರಸ್ಸು ಉಪವೇದವೆಂದು ಬೇರೊಂದು ಗ್ರಂಥದಲ್ಲೂ, ಮಂತ್ರವೇದವು ಉಪವೇದವೆಂದು ಮಂತ್ರರತ್ನಾಕರದಲ್ಲೂ ಹೇಳಲಾಗಿದೆ. ಅಲ್ಲದೆ ಮಂತ್ರರತ್ನಾಕರದಲ್ಲಿ ಇದಕ್ಕೆ ಭುಜಗಾನನವೆಂಬ ಮತ್ತೊಂದು ಹೆಸರಿದೆ.

145B/4

## ಅಥರ್ವಣವೇದದ ಅಭಿಮಾನಿ ದೇವತೆ ಬ್ರಹ್ಮನ ಧ್ಯಾನ

### (ಹೇಮಾದ್ರಿಯ ದಾನಖಂಡದಲ್ಲಿ)

ಅಗ್ನಿಯನ್ನು ಅಥರ್ವವೇದದ ಅಧಿದೇವತೆಯೆಂದು ತಿಳಿಯಬೇಕು. ಅಲ್ಲದೆ ಬ್ರಹ್ಮದೇವನೂ ಸಹ ಅದರ ಅಧಿದೇವತೆಯೆಂದು ತಿಳಿಯಬೇಕು. ಎಲೈ ಪ್ರಭುವೇ ಇವನ ರೂಪಗಳನ್ನು ಕೇಳು. **215**

ಬ್ರಹ್ಮದೇವನು ಪ್ರತ್ಯಧಿದೇವತೆ ಬೃಹಸ್ಪತಿಯಂತೆ.

### ಈ ಬ್ರಹ್ಮದೇವನ ಧ್ಯಾನ

ಪದ್ಮಾಸನದಲ್ಲಿ ಕುಳಿತಿರುವ, ತಲೆಯಲ್ಲಿ ಜಟೆಗಳನ್ನು ಕಟ್ಟಿರುವ, ನಾಲ್ಕು ಮುಖಗಳುಳ್ಳ, ಅಕ್ಷಮಾಲೆ, ಸ್ರುವ, ಪುಸ್ತಕ, ಕಮಂಡಲುಗಳನ್ನು ಕೈಗಳಲ್ಲಿ ಹಿಡಿದಿರುವ, ಕೃಷ್ಣಾಜಿನವನ್ನು ಬಟ್ಟೆಯನ್ನಾಗಿ ತೊಟ್ಟಿರುವ, ತನ್ನ ಪಕ್ಕದಲ್ಲಿ ಹಂಸವನ್ನು ಉಳ್ಳ, ಬ್ರಹ್ಮನನ್ನು ಭಾವಿಸಿಕೊಳ್ಳಬೇಕು. **216**

(ಔಚಿತ್ಯಾನುಸಾರ ದೇಹದ ಬಣ್ಣ ನಸುಗೆಂಪು)

146A/1

## ಆಯುರ್ವೇದದ ಸ್ವರೂಪ

### (ನೃಸಿಂಹಪ್ರಾಸಾದದಲ್ಲಿ)

ಆಯುರ್ವೇದಮೂರ್ತಿಯು ಅರಿಶಿನದಂತೆ ಹಳದಿಯ ಬಣ್ಣದ ದೇಹವುಳ್ಳವನು. ಕೋತಿಯ ಮುಖವುಳ್ಳವನು. ವಿಶಾಲವಾದ ಕಣ್ಣುಗಳುಳ್ಳವನು. ಜಪಮಾಲೆ ಮತ್ತು ಅಮೃತಕಲಶವನ್ನು ಕೈಗಳಲ್ಲಿ ಹಿಡಿದಿದ್ದಾನೆ. ಇವನು ಹೆಚ್ಚಾಗಿ ಆರೋಗ್ಯವನ್ನು ಕೊಡುವಂತಹವನು. **217**

(ಇವನ ದೇಹದ ಬಣ್ಣ ಅರಿಶಿನದಂತೆ ಹಳದಿ)

146A/2

## ಆಯುರ್ವೇದದ ಅಭಿಮಾನಿ ದೇವತೆ ಧನ್ವಂತರಿಯ ಧ್ಯಾನ

### (ಆಯುರ್ವೇದತಂತ್ರದಲ್ಲಿ)

ಚಕ್ರ, ಶಂಖ, ಜಿಗಣೆ, ರತ್ನ, ಅಮೃತಕಲಶಗಳನ್ನು ಕೈಗಳಲ್ಲಿ ಹಿಡಿದುಕೊಂಡು ಮನೋಹರನಾಗಿರುವ, ಸುಂದರವಾದ ಪೀತಾಂಬರವನ್ನು ತೊಟ್ಟು ಅಂದವಾಗಿ ಕಾಣುವ, ಬಿಳಿಯ ಬಟ್ಟೆಗಳನ್ನು ತೊಟ್ಟು, ತಲೆಯಲ್ಲಿ ಜಟೆಗಳನ್ನು ಕಟ್ಟಿ, ರಮಣೀಯವಾಗಿ ಕಾಣುತ್ತಿರುವ, ಇಂದ್ರನೀಲಮಣಿಯಂತೆ ನೀಲಿಯ ಬಣ್ಣದವನಾದ ಧನ್ವಂತರಿಯು ನಮ್ಮನ್ನು ಕಾಪಾಡಲಿ. **218**

(ಇವನ ದೇಹದ ಬಣ್ಣ ನೀಲಿ)

## ಬೇರೊಂದು ರೀತಿಯಲ್ಲಿ ಧನ್ವಂತರಿಯ ಧ್ಯಾನ

### (ಭಾಗವತದಲ್ಲಿ)

ಅಮೃತವನ್ನು ಬಯಸುವ ಕಶ್ಯಪನ ಮಕ್ಕಳಾದ ದೇವತೆಗಳಿಂದ ಸಮುದ್ರವು ಕಡೆಯಲ್ಪಟ್ಟಾಗ ಎಲೈ ಮಹಾರಾಜನೆ ಅತ್ಯಂತ ಅದ್ಭುತನಾದ ಒಬ್ಬ ಪುರುಷನು ಮೇಲೆದ್ದು ಬಂದನು. 219

ಇವನ ಕೈಗಳು ದಂಡದಂತೆ ಉದ್ದವಾಗಿ ಮತ್ತು ದಪ್ಪವಾಗಿ ಇವೆ. ಶಂಖದಂತೆ ಕುತ್ತಿಗೆ, ಕೆಂಪಾದ ಕಣ್ಣುಗಳು, ಶ್ಯಾಮಲಬಣ್ಣದ ದೇಹ, ಹೂಮಾಲೆಗಳನ್ನು ರತ್ನಮಾಲೆಗಳನ್ನು ಹಾಕಿಕೊಂಡಿದ್ದಾನೆ, ಎಲ್ಲ ಬಗೆಯ ಆಭರಣಗಳಿಂದ ಅಲಂಕೃತನಾಗಿದ್ದಾನೆ. ಪೀತಾಂಬರಧಾರಿ, ವಿಶಾಲವಾದ ಎದೆ, ಪರಿಶುಭ್ರವಾದ ಮಣಿಕುಂಡಲವನ್ನು ಕಿವಿಯಲ್ಲಿ ಧರಿಸಿದ್ದಾನೆ. ಇವನ ತಲೆಗೂದಲು ಕಪ್ಪಾಗಿದ್ದು ತುದಿಯಲ್ಲಿ ಮುಂಗುರುಳುಗಳು. ನೋಡಲು ಮನೋಹರನಾಗಿದ್ದಾನೆ. ಸಿಂಹದಂತೆ ಪರಾಕ್ರಮಿ. ಅಮೃತದಿಂದ ತುಂಬಿರುವ ಕಲಶವನ್ನು ಕೈಯಲ್ಲಿ ಹಿಡಿದಿದ್ದಾನೆ. ಕೈಗಳಿಗೆ ಬಳೆಗಳನ್ನು ತೊಟ್ಟಿದ್ದಾನೆ. ಅವನು ಭಗವಂತನಾದ ಸಾಕ್ಷಾದ್ವಿಷ್ಣುವಿನ ಅಂಶದಿಂದ ಹುಟ್ಟಿದವನು. ಧನ್ವಂತರಿ ಎಂಬ ಹೆಸರಿನಿಂದ ಪ್ರಸಿದ್ಧನಾದವನು. ಆಯುರ್ವೇದವನ್ನು ಬಲ್ಲವನು. ಯಾಗವನ್ನು ಮಾಡುವವನು. 220-222A

(ಇವನ ದೇಹದ ಬಣ್ಣ ನಸುಗಪ್ಪು)

## ಮಂತ್ರಾಗಮದಲ್ಲಿ ಮತ್ತೊಂದು ಧ್ಯಾನ

ಶಂಖ, ಚಕ್ರ, ಜಿಗಣೆ, ಅಮೃತಕಲಶಗಳನ್ನು ತನ್ನ ನಾಲ್ಕು ಕೈಗಳಿಂದ ಹಿಡಿದುಕೊಂಡಿರುವ, ಸೂಕ್ಷ್ಮನಾದ, ನಿರ್ಮಲನೂ, ಮನೋಹರನೂ ಆದ, ದರ್ಭೆಯಂತೆ ಚೂಪಾದ ಜಟೆಯನ್ನುಳ್ಳ, ಕಮಲದಂತೆ ಕಣ್ಣುಳ್ಳವನು, ಕಪ್ಪಾದ ಮೋಡದಂತೆ ಉಜ್ವಲವಾದ ಶರೀರವುಳ್ಳವನು, ಸೊಂಟದಲ್ಲಿ ಸುಂದರವಾದ ಪೀತಾಂಬರವನ್ನು ಕಟ್ಟಿಕೊಂಡಿರುವುದರಿಂದ ಮನೋಹರವಾಗಿ ಕಂಗೊಳಿಸುತ್ತಿರುವ, ಸಕಲ ರೋಗಗಳೆಂಬ ಕಾಡಿನ ಸಮೂಹಕ್ಕೆ ಕಾಡುಕಿಚ್ಚಿನಂತೆ ಆಡುತ್ತಿರುವ, ಪ್ರಸಿದ್ಧನಾದ ಆ ಧನ್ವಂತರಿಯನ್ನು ವಂದಿಸುತ್ತೇನೆ. 223

(ಇವನ ದೇಹದ ಬಣ್ಣ ಕಪ್ಪುಮೋಡದಂತೆ ಕಪ್ಪು)

## ವೈದ್ಯಶಾಸ್ತ್ರದಲ್ಲಿ ಇನ್ನೊಂದು ರೀತಿಯ ಧ್ಯಾನ

ಬಲಭಾಗದ ಮೇಲಿನ ಕೈಯಲ್ಲಿ ಶಂಖವನ್ನು, ಎಡಭಾಗದ ಮೇಲಿನ ಕೈಯಲ್ಲಿ ಚಕ್ರವನ್ನು, ಬಲಗಡೆಯ ಕೆಳಗಿನ ಕೈಯಲ್ಲಿ ದಿವ್ಯೌಷಧವಾದ ನಿರ್ಮಲ ಅಮೃತವನ್ನು ತುಂಬಿರುವ ಕಲಶವನ್ನು ಹಿಡಿದಿರುವ, ಎಡಗಡೆಯ ಕೆಳಗಿನ ಕೈಯಲ್ಲಿ ಜಿಗಣೆಗಳ ಸಾಲನ್ನು ಹಿಡಿದಿರುವ, ಕರುಣಾಕರನಾದ, ಶುಭಕರನಾದ,

ಸಕಲ ರೋಗಗಳನ್ನು ನಾಶಮಾಡುವ, ಭಗವಂತನಾದ ಧನ್ವಂತರಿಯು ಸದಾ ನನ್ನ ಎಲ್ಲ ದುರಿತಗಳನ್ನು ಕತ್ತರಿಸಲಿ. **224**

**(ಔಚಿತ್ಯಾನುಸಾರ ಇವನ ದೇಹದ ಬಣ್ಣ ಕಪ್ಪು ಮೋಡದಂತೆ ಅಚ್ಚಕಪ್ಪು)**

ಮಂತ್ರಾಗಮ ಮತ್ತು ವೈದ್ಯಶಾಸ್ತ್ರಗಳಲ್ಲಿ ಎರಡು ಲಕ್ಷಣಗಳು ಹೇಳಲ್ಪಟ್ಟಿದ್ದರೂ ಅವೆರಡು ಲಕ್ಷಣಗಳು ಆಯುರ್ವೇದದಲ್ಲಿ ಹೇಳಿದ ಧ್ಯಾನಕ್ಕಿಂತ ಬೇರೆಯಾಗಿಲ್ಲ. ಆದ್ದರಿಂದ ಕೇವಲ ಧ್ಯಾನಶ್ಲೋಕಗಳನ್ನು ಬರೆಯಲಾಗಿದೆ.

## ಇನ್ನು ಮುಂದೆ ವೈದ್ಯಶಾಸ್ತ್ರದಲ್ಲಿ ಹೇಳಿರುವಂತೆ ವಿಶೇಷವಾದ ರೋಗಗಳ ಹೆಸರುಗಳು, ಚಿಕಿತ್ಸಾಪ್ರಭೇದಗಳು, ತೈಲಪ್ರಮಾಣ, ಅಂಜನ, ಚೂರ್ಣ, ಕಲ್ಕ, ರಸಾಯನ ಮೊದಲಾದವುಗಳ ಹೆಸರುಗಳು, ವೈದ್ಯನ ಲಕ್ಷಣ ಮತ್ತು ಧನ್ವಂತರಿಯ ಮಾಹಾತ್ಮ್ಯಗಳು ಹೇಳಲ್ಪಡುತ್ತವೆ

## ಧನ್ವಂತರಿಯ ಲಕ್ಷಣ ಮತ್ತು ಮಹಿಮೆಗಳು

146B ಲೋಕದಲ್ಲಿ ಮಹಾತ್ಮರಾದ ಹದಿನೆಂಟು ಜನ ವೈದ್ಯಾಚಾರ್ಯರು ಸ್ಮೃತರಾಗಿದ್ದಾರೆ. ಅವರಲ್ಲಿ ಧನ್ವಂತರಿಯು ಮುಖ್ಯನಾದವನು. ಇವನು ಸಾಕ್ಷಾತ್ ವಿಷ್ಣುವಿನ ಅಂಶದಿಂದ ಹುಟ್ಟಿದವನು. ಹಸಿವು, ಬಾಯಾರಿಕೆ ಮೊದಲಾದವುಗಳನ್ನು ತಡೆದಿರುವವನು. ಸಕಲ ರೋಗಗಳ ಮೂಲಕಾರಣವನ್ನು ಬಲ್ಲವನು. ಶರೀರದೊಳಗಿರುವ ನೂರೇಳು ಬಗೆಯ ಮರ್ಮಸ್ಥಾನಗಳನ್ನು ವಿಶೇಷವಾಗಿ ತಿಳಿದಿರುವವನು. ಇವನು ರೋಗಚಿಕಿತ್ಸೆಯ ಪ್ರಕಾರಗಳೆಲ್ಲವನ್ನೂ ಉಪದೇಶಿಸುವುದರಲ್ಲಿ ಆಚಾರ್ಯನು. ನಾಡಿಗಳ ಮೂರು ಬಗೆಯ ಸಂಚಾರಕ್ರಮಗಳನ್ನು ಚೆನ್ನಾಗಿ ತಿಳಿದವನು. ಇವನು ಏಳು ಧಾತುಗಳು ಮತ್ತು ಉಪಧಾತುಗಳ ಹ್ರಾಸ ವೃದ್ಧಿಗಳನ್ನು ಚೆನ್ನಾಗಿ ಬಲ್ಲವನು. ಅವನ ಸ್ಮರಣಮಾತ್ರದಿಂದಲೇ ಜೀವಿಗಳ ದೇಹದಲ್ಲಿ ಹುಟ್ಟಿದ ಗುಣಪಡಿಸಲು ಸಾಧ್ಯವಾಗುವ ರೋಗಗಳು, ಗುಣಪಡಿಸಲು ಅಸಾಧ್ಯವಾದ ರೋಗಗಳು, ಗುಣಪಡಿಸಲು ಕಷ್ಟಸಾಧ್ಯವಾದ ರೋಗಗಳು ಎಂಬ ಮೂರು ಬಗೆಯ ರೋಗಗಳಲ್ಲಿ ಅಸಾಧ್ಯವಾದ ಮೂರು ಬಗೆಯ ರೋಗಗಳನ್ನು ಬಿಟ್ಟು ಉಳಿದ ಎಲ್ಲ ರೋಗಗಳೂ ಕೂಡಲೇ ನಾಶವಾಗುತ್ತವೆ. **225-229**

ತೃಷ್ಣಾರೋಗ, ಛರ್ದಿರೋಗ, ಸ್ವೇದರೋಗ ಇವುಗಳು ತೊಂದರೆಮಾಡುವ ರೋಗಗಳಲ್ಲ. ಅರುಚಿ, ಉದಾವರ್ತ, ಪ್ರದರ, ಆನಾಹ, ವಿಷೂಚಿರೋಗಗಳು, ಅಸ್ಥಿರೋಗಗಳು, ಗ್ರಾವರೋಗಗಳು, ಮದರೋಗಗಳು, ಕ್ರಿಮಿರೋಗಗಳು, ಅಷ್ಠೀಲರೋಗಗಳು ಇವುಗಳೆಲ್ಲಾ ಒಂದೊಂದೂ ಮೂರು ಮೂರು ಭೇದಗಳಾಗುತ್ತವೆ. **230-231**

ದಂತರೋಗ, ಅಜೀರ್ಣರೋಗ, ಬಹುಮೂತ್ರರೋಗ, ಅಶ್ಮರೀರೋಗ, ವಿಸರ್ಪೀರೋಗ ಇವುಗಳೆಲ್ಲಾ ಒಂದೊಂದೂ ನಾಲ್ಕುವಿಧಗಳಾಗುತ್ತವೆ. ಶೋಭರೋಗ, ಪಾಂಡುರೋಗ, ಶ್ವಾಸರೋಗ, ಕಾಸರೋಗ, ಹಿಕ್ಕಾರೋಗ, ಹೃದ್ರೋಗ, ಗ್ರಾಹಣೀರೋಗ ಇವುಗಳೆಲ್ಲಾ ಒಂದೊಂದೂ ಪ್ರತ್ಯೇಕವಾಗಿ ಐದು ವಿಧಗಳು. **232-233**

ಜಿಹ್ವಾರೋಗಗಳು, ಅತೀಸಾರರೋಗಗಳು ಒಂದೊಂದೂ ಪ್ರತ್ಯೇಕವಾಗಿ ಆರು ವಿಧಗಳು. ಉನ್ಮಾದವೆಂಬ ರೋಗ, ಅಪಸ್ಮಾರ, ವಿಷಮಾ, ವಿದೃಧೀ ಈ ರೋಗಗಳು ಒಂದೊಂದೂ ಏಳು ವಿಧಗಳು. ಕಾಮಿಲ ರೋಗಗಳು ಒಂದೊಂದೂ ಒಂಭತ್ತು ಭೇದಗಳು. ಮಹಾರೋಗ, ಮೂತ್ರಕೃಚ್ಛ್ರರೋಗಗಳು, ಮಸೂರಿಕಾರೋಗಗಳು, ಶೂಲರೋಗಗಳು, ತಾಲುರೋಗಗಳು ಇವುಗಳು ಒಂದೊಂದೂ ಎಂಟು ವಿಧಗಳು. ಜಿಹ್ವಾರೋಗ, ಶಿರಶ್ಶೂಲರೋಗ, ಮೂಲರೋಗ, ಗುಲ್ಮವೆಂಬ ಹೆಸರಿನ ರೋಗ ಇವುಗಳು ಒಂದೊಂದೂ ಹನ್ನೆರಡು ಭೇದಗಳಾಗುತ್ತವೆ. ಸನ್ನಿಪಾತ ರೋಗಗಳು ಹದಿಮೂರು ಭೇದಗಳು. ಅದರಂತೆಯೇ ಉದರರೋಗಗಳು ಪ್ರತ್ಯೇಕವಾಗಿ ಮತ್ತೆ ಹದಿನಾರು ಭೇದಗಳಾಗುತ್ತವೆ. ನಾಸಾ ರೋಗಗಳು, ಕಂಠರೋಗಗಳು ಒಂದೊಂದೂ ಹದಿನೆಂಟು ಭೇದಗಳಾಗುತ್ತವೆ. ಮೇಹರೋಗ, ಶ್ಲೇಷ್ಮ ರೋಗ, ಕುಷ್ಠರೋಗಗಳು ಒಂದೊಂದೂ ಇಪ್ಪತ್ತು ಭೇದಗಳಾಗುತ್ತವೆ. **234-238**

ಕ್ಷಯವೆಂಬ ಹೆಸರಿನ ರೋಗಗಳು ಇಪ್ಪತ್ತೆರಡು ವಿಧಗಳಾಗುತ್ತವೆ. ಕರ್ಣರೋಗಗಳು ಒಂದೊಂದೂ ಇಪ್ಪತ್ತೈದು ಭೇದಗಳಾಗುತ್ತವೆ. ವ್ರಣರೋಗ, ಪಿತ್ತರೋಗಗಳು ಒಂದೊಂದೂ ಇಪ್ಪತ್ತೆಂಟು ಭೇದಗಳಾಗುತ್ತವೆ. ನೇತ್ರರೋಗಗಳು ತೊಂಭತ್ತಾರು ಭೇದಗಳು. ಅರವತ್ತನಾಲ್ಕು ಬಗೆಯ ಜ್ವರಗಳಿವೆ. ವಾತರೋಗದ ಭೇದಗಳು ಒಂದುನೂರಿಪ್ಪತ್ತು ಭೇದಗಳಾಗುತ್ತವೆ. ಮೂಕತ್ವರೋಗ, ಸೋಮರೋಗ, ಸೂತಿಕಾರೋಗ, ಪ್ರತ್ಯಷ್ಠಿಲಾರೋಗ, ಪ್ರತಿತುನ್ನೀ ಎಂಬ ಹೆಸರಿನ ರೋಗ ಮತ್ತು ಉಪದಂಶರೋಗಗಳು ಒಂದೊಂದೂ ಒಂದೊಂದು ಭೇದಗಳಾಗುತ್ತವೆ. **239-242**

ನಾನಾಬಗೆಯ ಪಾಪಕರ್ಮಗಳಿಂದ ಉಂಟಾದ ಎಲ್ಲಾ ರೋಗಗಳೂ ಆ ಧನ್ವಂತರಿಯ ಅನುಗ್ರಹದಿಂದ ನಾಶವಾಗುತ್ತವೆ. ಆರೋಗ್ಯ, ಭಾಗ್ಯಗಳು ಮತ್ತು ಆಯುಸ್ಸು ವೃದ್ಧಿಯಾಗುತ್ತವೆ. ಐಹಿಕವಾದ ಎಲ್ಲ ಬಗೆಯ ಸುಖಗಳು ಮತ್ತು ಆಮುಷ್ಮಿಕವಾದ ಎಲ್ಲ ರೀತಿಯ ಸುಖಗಳು ಪ್ರಭುವಾದ ಧನ್ವಂತರಿಯನ್ನು ನೆನೆದ ಮಾತ್ರದಿಂದಲೇ ಕರಗತವಾಗುತ್ತವೆ. ಪಾಪಗಳು ಶಮನವಾಗುತ್ತವೆ ಮತ್ತು ಶ್ರೇಯಸ್ಸು ಹೆಚ್ಚುತ್ತದೆ. ಭಕ್ತಿಯಿಂದ ಧನ್ವಂತರಿಯನ್ನು ಧ್ಯಾನ ಮಾಡಿ ದೇವತೆಗಳಲ್ಲಿ, ಗುರುಗಳಲ್ಲಿ ಭಕ್ತಿಯುಕ್ತನಾದ, ಇಂದ್ರಿಯಗಳನ್ನು ಗ್ರಹಿಸಿ ದಾಂತನಾದ, ಮನಸ್ಸನ್ನು ನಿಗ್ರಹಿಸಿ ಶಾಂತನಾದ, ಪ್ರಸನ್ನವಾದ ಮನಸ್ಸುಳ್ಳ, ಸತ್ಯವಾದಿಯಾದ, ದಯಾಪರನಾದ, ಜಿತೇಂದ್ರಿಯನಾದ, ಸದಾಚಾರವುಳ್ಳ, ಕ್ರೋಧಲೋಭಗಳಿಂದ

ದೂರನಾದ, ವೈದ್ಯಶಾಸ್ತ್ರದ ಅರ್ಥವನ್ನು ಚೆನ್ನಾಗಿ ತಿಳಿದವನಾದ, ಎಲ್ಲ ಲೋಕಗಳ ಮೂಲಕಾರಣವನ್ನು ಬಲ್ಲವನಾದ, ಆಯಾಯಾ ಶರೀರಗಳ ಸ್ವಭಾವವನ್ನು ತಿಳಿದವನಾದ, ದೇಶಕಾಲಗಳನ್ನು ವಿಶೇಷವಾಗಿ ಅರಿತವನಾದ, ವೈದ್ಯಶಾಸ್ತ್ರದಲ್ಲಿ ಹೇಳಿರುವಂತೆ ಚಿಕಿತ್ಸಾಪ್ರಯೋಗವನ್ನು ಮಾಡುವವನಾದ, ಪಥ್ಯಾಪಥ್ಯವಿವೇಕವುಳ್ಳ, ಸಕಲ ಔಷಧಿಗಳ ಸ್ವರೂಪವನ್ನು ತಿಳಿದವನಾದ, ನಾಡಿಗಳ ಸಂಚಾರ ಕ್ರಮವನ್ನು ವಿಶೇಷವಾಗಿ ತಿಳಿದವನಾದ, ಚಿಕಿತ್ಸಾಪ್ರಯೋಗಗಳನ್ನು ತಿಳಿದವನಾದರೂ, ಎಂಟು ವಿಧ-ವಾದ ಸ್ಥಾನಗಳನ್ನು ಪರೀಕ್ಷಿಸುವವನಾದ, ವೈದ್ಯಶ್ರೇಷ್ಠನು ಆಯಾಯಾ ರೋಗಗಳ ನಿವೃತ್ತಿಗಾಗಿ ಪ್ರಯತ್ನಿಸಬೇಕು. **243-249**

ತೈಲ, ಮಾತ್ರಾ, ಅಂಜನ, ಚೂರ್ಣ, ಕಲ್ಕ, ರಸಾಯನ ಮತ್ತು ಕೆಲವು ಮಾತ್ರಾ ವಿಶೇಷಗಳನ್ನು ಇಲ್ಲಿ ಹೇಳಲಾಗುತ್ತದೆ. ಆನಂದಭೈರವೀ, ವಿಶ್ವಮೂರ್ತಿಭೈರವೀ, ನವಾನಂದಭೈರವೀ, ಸಪ್ತಾನಂದಭೈರವೀ, ತ್ರಿದೋಷಭೈರವೀ, ಸನ್ನಿಪಾತಚ್ಛೇದನಭೈರವೀ, ಮೃತೋತ್ಥಾಪನಭೈರವೀ, ಮಂಡೂರಭೈರವೀ, ತ್ರೈಲೋಕ್ಯಭೈರವೀ, ಸನ್ನಿಪಾತವಿಧ್ವಂಸಿಭೈರವೀ, ಭೈರವೀ,

**147A** ಮಹಾಭೈರವೀ ಮತ್ತು ಲಘುಭೈರವೀ ಎಂಬುದಾಗಿ ಭೈರವೀಮಾತ್ರೆಗಳು ಹದಿಮೂರು ವಿಧಗಳೆಂದು ಸ್ಮೃತವಾಗಿವೆ. ಸಾಮಾನ್ಯಾಗ್ನಿಕುಮಾರಿಕಾ, ಪ್ರತಾಪಾಗ್ನಿಕುಮಾರಿಕಾ, ಲಘ್ವಗ್ನಿಕುಮಾರಿಕಾ, ಉತ್ತಮಾಗ್ನಿ ಕುಮಾರಿಕಾ, ನವಲೋಹಾಗ್ನಿಕುಮಾರಿಕಾ, ಪ್ರಾಣಾಗ್ನಿಕುಮಾರಿಕಾ, ಮಹಾಗ್ನಿಕುಮಾರಿಕಾ, ಸದ್ರತ್ನಾಗ್ನಿ ಕುಮಾರಿಕಾ, ಸುಸಿದ್ಧಾಗ್ನಿಕುಮಾರಿಕಾ, ಸದ್ದಿವ್ಯಾಗ್ನಿಕುಮಾರಿಕಾ ಎಂಬುದಾಗಿ ವೈದ್ಯಸಂಗ್ರಹದಲ್ಲಿ ಅಗ್ನಿಕುಮಾರ ಎಂಬ ಹೆಸರಿನ ಮಾತ್ರೆಗಳು ಹತ್ತು ವಿಧಗಳೆಂದು ಸ್ಮೃತವಾಗಿವೆ. **250-257**

ಸಾಮಾನ್ಯಭೂಪತಿಮಾತ್ರೆ, ನವಲೋಹಭೂಪತಿಮಾತ್ರೆ, ರತ್ನಭೂಪತಿಮಾತ್ರೆ, ಸಿದ್ಧಭೂಪತಿಮಾತ್ರೆ, ಪ್ರತಾಪಭೂಪತಿಮಾತ್ರೆ, ಲಘುಭೂಪತಿಮಾತ್ರೆ, ಮಹಾಭೂಪತಿಮಾತ್ರೆ, ಪ್ರಾಣಭೂಪತಿಮಾತ್ರೆ, ದಿವ್ಯಭೂಪತಿಮಾತ್ರೆ, ಉತ್ತಮಭೂಪತಿಮಾತ್ರೆ ಎಂಬುದಾಗಿ ಭೂಪತಿಮಾತ್ರೆಯು ಹತ್ತುವಿಧವಾಗಿ ಪ್ರಸಿದ್ಧವಾಗಿದೆ. **258-260**

ಪೂರ್ಣಚಂದ್ರೋದಯಮಾತ್ರೆ, ಯೋಗಿರಸಮಾತ್ರೆ, ಸುದರ್ಶನರಸಮಾತ್ರೆ, ರತ್ನಾಕರಮಾತ್ರೆ, ನಾರಾಯಣಾಸ್ತ್ರಮಾತ್ರೆ, ಮಹಾಕ್ರವ್ಯಾದಿಮಾತ್ರೆ, ರಾಮಚಂದ್ರರಸಮಾತ್ರೆ, ವಾತರಾಕ್ಷಸಮಾತ್ರೆ, ಮಹಾರಾಜಮೃಗಾಂಕಮಾತ್ರೆ, ವಸಂತಕುಸುಮಾಕರಮಾತ್ರೆ, ಭೋಪಾರಸಮಾತ್ರೆ, ತ್ರೈಲೋಕ್ಯ ಚಿಂತಾಮಣಿಮಾತ್ರೆ, ಸರ್ವೇಶ್ವರರಸಮಾತ್ರೆ, ಚಿಂತಾಮಣಿರಸಮಾತ್ರೆ, ಸುವರ್ಣಮಾಲ್ಯವಾಸಂತರಸಮಾತ್ರೆ ಮತ್ತು ಲಕ್ಷ್ಮೀವಿಲಾಸರಸಮಾತ್ರೆ ಹೀಗೆ ಈ ಎಲ್ಲ ಮಾತ್ರೆಗಳೂ ಮಹಾರಸಮಾತ್ರೆಗಳು ಎಂದು ಪ್ರಸಿದ್ಧವಾಗಿವೆ. **261-265**

ಮಹಾನಾರಾಯಣೀತೈಲ, ಜ್ಯೋತಿಷ್ಮತೀತೈಲ, ಮಹಾಪೂತೀಕಾತೈಲ, ಭೃಂಗಾಮಲಕತೈಲ, ಲಾಕ್ಷಾತೈಲ, ಬಿಲ್ವಾದಿತೈಲ, ತ್ರಿಸ್ನೇಹತೈಲ, ಭಲ್ಲಾತಕೀತೈಲ, ಕೇತಕೀತೈಲ, ಮಧೂಕತೈಲ, ಮುಂತಾದ ತೈಲಗಳು ಪ್ರಸಿದ್ಧವಾಗಿವೆ. ನಾರಿಕೇಲಾಂಜನ, ಚಂದ್ರೋದಯಾಂಜನ, ಸುನೇತ್ರಾಂಜನ, ಕಪೀರಾಂಜನ, ಕುಸುಮಾಂಜನ, ತಿಲಪುಷ್ಪಾಂಜನ, ಸುಕುಮಾರಾಂಜನ, ಇವೆಲ್ಲವೂ ಕಣ್ಣುಗಳಿಗೆ ಪ್ರಸಾದವನ್ನುಂಟು ಮಾಡುವ ಅಂಜನಗಳೆಂದು ಪ್ರಸಿದ್ಧವಾಗಿವೆ. ಹಾಗೆಯೇ ಭುವನೇಶ್ವರೀಚೂರ್ಣ ಮೊದಲಾದ ಚೂರ್ಣಗಳು ರೋಗಗಳನ್ನು ಹೋಗಲಾಡಿಸುವ ಚೂರ್ಣಗಳೆಂದು ಪ್ರಸಿದ್ಧವಾಗಿವೆ. **266-270**

ಮಧುಸ್ನುಹೀ ಮೊದಲಾದ ದಿವ್ಯರಸಾಯನಗಳು, ರಸಸ್ವರ್ಣಪ್ರವಾಲ ಮೊದಲಾದ ಮಹಾಭಸ್ಮಗಳೂ ಕೂಡ ಸಕಲರೋಗಗಳ ವಿನಾಶಕ್ಕಾಗಿ ವೈದ್ಯಶಾಸ್ತ್ರದಲ್ಲಿ ಉಕ್ತವಾಗಿವೆ. 1. ಅಂಜನ, 2. ಲಂಘನ, 3. ಕಲ್ಕ, 4. ಕಷಾಯ, 5. ತೈಲಲೇಪನ, 6. ವಿರೇಚನ, 7. ವಮನ, 8. ಪಾಚನ, 9. ಮರ್ದನ, 10. ಘೃತ, 11. ನಸ್ಯ, 12. ಚೂರ್ಣ, 13. ಗಂಡೂಷ, 14. ಪಥ್ಯ, 15. ಸ್ವೇದನಕರ್ಮ, 16. ಜಲೂಕಿಕಾಪ್ರಯೋಗ, 17. ಧೂಪ, 18. ಊಷ್ಮಚಿಕಿತ್ಸೆ, 19. ಭಸ್ಮಪ್ರಯೋಗ, 20. ಅಭಿಷೇಕ, 21. ರಸದಾಪನ, 22. ಗಂಧಕದಾಪನ, 23. ಮಹಾಮಾತ್ರಾಪ್ರಯೋಗ, 24. ದಾನ, 25. ಹೋಮ, 26. ಪೂಜೆ, 27. ರಸಾಯನ, 28. ಶಸ್ತ್ರವೇದ್ಯ, 29. ಅಗ್ನಿಚಿಕಿತ್ಸೆ ಎಂಬುದಾಗಿ ಇಪ್ಪತ್ತೊಂಭತ್ತು ರೀತಿಯ ಚಿಕಿತ್ಸಾಕ್ರಮಗಳು ಉಕ್ತವಾಗಿವೆ. ಎಲ್ಲ ರೋಗಗಳಲ್ಲಿಯೂ ಔಚಿತ್ಯವನ್ನು ಗಮನಿಸಿ ವೈದ್ಯಶಾಸ್ತ್ರಪ್ರಕಾರ ಚಿಕಿತ್ಸಾಕ್ರಮವನ್ನು ಪ್ರಯೋಗಿಸಬೇಕು. **271-276**

1. ಹಸುವಿನ ಹಾಲು, 2. ಎಮ್ಮೆಯ ಹಾಲು, 3. ಆನೆಯ ಹಾಲು, 4. ಆಡಿನ ಹಾಲು, 5. ಒಂಟೆಯ ಹಾಲು, 6. ಕುರಿಯ ಹಾಲು, 7. ಹೆಂಗಸಿನ ಹಾಲು, 8. ಕತ್ತೆಯ ಹಾಲು ಹಾಗೆಯೇ 9. ಕುದುರೆಯ ಹಾಲು ಎಂಬುದಾಗಿ ಈ ಒಂಭತ್ತು ಬಗೆಯ ಹಾಲುಗಳು ರೋಗಿಗಳಿಗೆ ಚಿಕಿತ್ಸೆಗೆ ಯೋಗ್ಯವಾದ ಹಾಲುಗಳು. ಚಿಕಿತ್ಸಕರಾದವರು ಆಯಾಯಾ ರೋಗಕ್ಕೆ ಅನುಸಾರವಾಗಿ ಆಯಾಯಾ ಹಾಲುಗಳನ್ನು ಚಿಕಿತ್ಸೆಯಲ್ಲಿ ಕೊಡಬೇಕು. **277-279A**

ಹೀನವಾದ ಉಪಕರಣವುಳ್ಳವನು, ಅತ್ಯಂತ ಕೋಪಿಷ್ಠನಾದವನು, ನಾನೇ ವೈದ್ಯನೆಂಬ ದುರಭಿಮಾನವುಳ್ಳವನು, ಭಯದಿಂದ ವ್ಯಾಕುಲನಾದವನು, ಅವಿಧೇಯನಾದವನು, ಅದೇ ರೀತಿ ತೊಂದರೆಗೆ ಒಳಗಾದವನು, ವ್ಯಗ್ರನಾದವನು, ಶೋಕಪೀಡಿತನಾದವನು ಶಠನಾದವನು, ದೀರ್ಘದ್ವೇಷವುಳ್ಳವನು, ಕೃತಘ್ನನಾದವನು, ಆಯುಸ್ಸು ಮುಗಿದಿರುವವನು, ರಾಜನಿಂದ ರಕ್ಷಿತನಾದವನು ಹೀಗೆ ಇವರೆಲ್ಲರೂ ಚಿಕಿತ್ಸೆಯಲ್ಲಿ ಅಯೋಗ್ಯರೆಂದು ಉಕ್ತರಾಗಿದ್ದಾರೆ. **279B-281A**

ತೀಕ್ಷ್ಣಾಗ್ನಿ, ಮಂದಾಗ್ನಿ, ಸಮಾಗ್ನಿ, ವಿಷಮಾಗ್ನಿ ಎಂಬುದಾಗಿ ಜಠರಾಗ್ನಿಯು ನಾಲ್ಕು ಬಗೆಯಾಗಿದೆ.

ಯಾರು ಸದಾ ಭಕ್ತಿಯಿಂದ ಧನ್ವಂತರಿಯನ್ನು ಮತ್ತು ಹರಿಯನ್ನು ಸಾಕ್ಷಾತ್ತಾಗಿ ಸೇವೆ ಮಾಡುತ್ತಾರೋ ಅಂತಹವರಿಗೆ ಆಧಿ ಮತ್ತು ವ್ಯಾಧಿಗಳ ಭಯವು ಖಂಡಿತವಾಗಿಯೂ ಇಲ್ಲ. **281B-282A**

**147B/1** **ಧನುರ್ವೇದಸ್ವರೂಪ**

**(ನೃಸಿಂಹಪ್ರಾಸಾದದಲ್ಲಿ)**

ಧನುರ್ವೇದಪುರುಷನು ದೊಡ್ಡಶರೀರವುಳ್ಳವನು. ಇವನ ದೇಹ ಹಳದಿಬಣ್ಣದಿಂದ ಕೂಡಿದೆ. ಇವನಿಗೆ ಕೋಗಿಲೆಯ ಮುಖ. ಬಿಲ್ಲುಬಾಣಗಳನ್ನು ಕೈಗಳಲ್ಲಿ ಹಿಡಿದಿದ್ದಾನೆ. ಭಯಂಕರನು. ತಲೆಯಲ್ಲಿ ಕಂದುಬಣ್ಣದ ಜಟೆಗಳನ್ನು ಕಟ್ಟಿದ್ದಾನೆ. **283**

**(ಇವನ ದೇಹದ ಬಣ್ಣ ಹಳದಿ)**

**147B/2** **ಧನುರ್ವೇದದ ಅಭಿಮಾನಿ ದೇವತೆ ಇಂದ್ರನ ಧ್ಯಾನ**

**(ನೃಸಿಂಹಪ್ರಾಸಾದದಲ್ಲಿ)**

ಬಿಳಿಯಾನೆಯ ಮೇಲೇರಿ ಕುಳಿತಿರುವ, ವಜ್ರಾಯುಧ ಮತ್ತು ಅಂಕುಶಗಳನ್ನು ಕೈಗಳಲ್ಲಿ ಹಿಡಿದು ಕಂಗೊಳಿಸುತ್ತಿರುವ, ಸಾವಿರ ಕಣ್ಣುಗಳುಳ್ಳ, ಹಳದಿಯ ಬಣ್ಣದ ದೇಹವುಳ್ಳ, ಇಂದ್ರನನ್ನು ನಾನು ಹೃದಯದಲ್ಲಿ ವಿಶೇಷವಾಗಿ ಭಾವಿಸುತ್ತೇನೆ. **284**

**(ಇವನ ದೇಹದ ಬಣ್ಣ ಹಳದಿ)**

ಉಳಿದ ಅಂಶಗಳು ಮಯೂಖದಲ್ಲಿ ಹೇಳಲಾದ ಶುಕ್ರಪ್ರತ್ಯಧಿದೇವತೆ ಇಂದ್ರನಂತೆ.

**147B/3** **ಧನುರ್ವೇದದ ಮತ್ತೊಂದು ಸ್ವರೂಪ**

**(ನೀತಿಪ್ರಕಾಶಿಕೆಯಲ್ಲಿ)**

ಧನುರ್ವೇದ ದೇವನಿಗೆ ನಾಲ್ಕು ಕಾಲುಗಳು ಮತ್ತು ನಾಲ್ಕು ಮುಖಗಳಿವೆ. ಇವನ ದೇಹದ ಬಣ್ಣ ಕೆಂಪು. ಇವನಿಗೆ ಎಂಟು ಕೈಗಳು ಮತ್ತು ಮೂರು ಕಣ್ಣುಗಳಿವೆ. ಇವನು ಸಾಂಖ್ಯಾಯನಸ ಗೋತ್ರದಲ್ಲಿ ಹುಟ್ಟಿದವನು. ಬಲಗಡೆಯ ನಾಲ್ಕು ಕೈಗಳಲ್ಲಿ ಕ್ರಮವಾಗಿ ವಜ್ರಾಯುಧ, ಖಡ್ಗ, ಬಿಲ್ಲು ಮತ್ತು ಚಕ್ರಗಳಿವೆ. ಎಡಗಡೆಯ ನಾಲ್ಕು ಕೈಗಳಲ್ಲಿ ಶತಘ್ನೀ ಎಂಬ ಆಯುಧ, ಗದೆ, ಶೂಲ, ಪಟ್ಟಸವೆಂಬ ಆಯುಧಗಳು ಇವೆ. ಪ್ರಯೋಗವೇ ಇವನ ಕಿರೀಟ, ಸದಾ ನೀತಿ ಚಿಂತನೆಯೇ ಇವನ ಅಂಗ. ಮಂತ್ರಾಲೋಚನೆಯೇ ಇವನ ಅಂಗಿ, ಉಪಸಂಹಾರವೇ ಇವನ ಹೃದಯ, ಎರಡು ಕಿವಿಗಳಲ್ಲಿರುವ ಕುಂಡಲಗಳೇ ಇವನ ಶಸ್ತ್ರಾಸ್ತ್ರಗಳು. ಮನೋಜ್ಞವಾದ ವಿವಿಧಾಕಾರಗಳುಳ್ಳ ಅನೇಕ ಆಭರಣಗಳನ್ನು ತೊಟ್ಟುಕೊಂಡಿದ್ದಾನೆ. ಇವನ ಕಣ್ಣುಗಳು ಕಂದುಬಣ್ಣದಿಂದ ಕೂಡಿವೆ. ಜಯಮಾಲೆಯನ್ನು ಹಾಕಿಕೊಂಡಿದ್ದಾನೆ. ಎತ್ತಿನ ಬೆನ್ನ ಮೇಲೇರಿ ಕುಳಿತಿದ್ದಾನೆ. **285-288**

ಇವನ ವರ್ಣನೆಯನ್ನು ಮಾಡುವಾಗ ರಕ್ತವರ್ಣ ಎನ್ನುವುದಕ್ಕೆ ಕಾದಚಿನ್ನದ ಬಣ್ಣ ಎಂದು ಹೇಳಲಾಗಿದೆ.

(ಇವನ ದೇಹದ ಬಣ್ಣ ಕೆಂಪು)

## ಧನುರ್ವೇದದ ನಾಲ್ಕು ಪಾದಗಳಿಂದ ಹುಟ್ಟಿದ ಮೂವತ್ತೆರಡು ಅಸ್ತ್ರಗಳು ಮತ್ತು ಪ್ರತ್ಯಸ್ತ್ರಗಳ ಹೆಸರುಗಳು ನೀತಿಪ್ರಕಾಶಿಕಾರೀತಿಯಂತೆ ಬರೆಯಲ್ಪಡುತ್ತವೆ

ಮುಕ್ತ, ಅಮುಕ್ತ, ಮುಕ್ತಾಮುಕ್ತ ಮತ್ತು ಮಂತ್ರಮುಕ್ತ ಎಂದು ಧನುರ್ವೇದಕ್ಕೆ ನಾಲ್ಕು ಪಾದಗಳು. ಬಾಣಾದಿಗಳನ್ನು ಬಿಡುವುದರಿಂದ ಬಾಣಾದಿಗಳು ಮುಕ್ತಗಳು. ಖಡ್ಗಾದಿಗಳನ್ನು ಕೈಯಲ್ಲಿ ಹಿಡಿದು ಹೊಡೆಯುವುದರಿಂದ ಖಡ್ಗಾದಿಗಳು ಅಮುಕ್ತಗಳು. ಅಸ್ತ್ರವನ್ನು ಬಿಡಲೂಬಹುದು ಮತ್ತು ಹಿಂದಕ್ಕೆ ತೆಗೆದುಕೊಳ್ಳಲೂಬಹುದು. ಆದ್ದರಿಂದ ಅಸ್ತ್ರವು ಮುಕ್ತಾಮುಕ್ತ. ಯಾವುದನ್ನು ಮಂತ್ರ-ಪೂರ್ವಕವಾಗಿ ಪ್ರಯೋಗಿಸಬಹುದೋ ಆದರೆ ಹಿಂದಕ್ಕೆ ಪಡೆಯಲು ಸಾಧ್ಯವಿಲ್ಲವೋ ಅದು ಮಂತ್ರಮುಕ್ತ. 289-290A

148A ಈ ನಾಲ್ಕು ಪಾದಗಳಿಂದ ಧನುರ್ವೇದವು ಪ್ರಕಾಶಿಸುತ್ತದೆ. ಧನುರ್ವೇದವನ್ನು ಬಲ್ಲ ಕೆಲವರು ಧನುರ್ವೇದದಲ್ಲಿ ಶಸ್ತ್ರ, ಅಸ್ತ್ರ, ಪ್ರತ್ಯಸ್ತ್ರ ಮತ್ತು ಪರಮಾಸ್ತ್ರ ಎಂದು ನಾಲ್ಕು ವಿಧವನ್ನು ಹೇಳುತ್ತಾರೆ. ಆದಾನ, ಸಂಧಾನ, ವಿಮೋಕ್ಷ ಮತ್ತು ಸಂಹೃತಿ ಎಂಬುದಾಗಿ ಧನುರ್ವೇದವು ನಾಲ್ಕು ವಿಧವಾಗಿದೆ-ಯೆಂದು ಮತ್ತೆ ಕೆಲವು ಧನುರ್ವೇದತಜ್ಞರು ಹೇಳಿದ್ದಾರೆ. ಅವುಗಳಲ್ಲಿ ಮೊದಲನೆಯ ಮತವನ್ನು ಅವಲಂಬಿಸಿ ಮೂವತ್ತೆರಡು ವಿಧಗಳಾದ ಮುಕ್ತಾಮುಕ್ತಾಯುಧಗಳನ್ನು ಹೇಳುವೆನು. ಅದರ ವಿಸ್ತಾರಕ್ರಮವು ಹೀಗಿದೆ. 291-294A

### ಮುಕ್ತಆಯುಧಗಳು

ಯಾವ ಆಯುಧಗಳನ್ನು ಬಿಡಬಹುದೋ ಅಂದರೆ ಎಸೆಯಬಹುದೋ ಅವುಗಳು ಮುಕ್ತ ಆಯುಧಗಳು. ಅವು ಒಟ್ಟು ಹನ್ನೆರಡು. 1. ಬಿಲ್ಲು 2. ಬಾಣ 3. ಭಿಂಡಿವಾಲ 4. ಶಕ್ತಿ 5. ದ್ರುಗಣ 6. ತೋಮರ ಅಂದರೆ ಈಟಿ 7. ನಲಿಕಾ ಅಂದರೆ ಫಿರಂಗಿ 8. ಲಗುಡ ಅಂದರೆ ದೊಣ್ಣೆ 9. ಪಾಶ ಅಂದರೆ ಹಗ್ಗ 10. ಚಕ್ರ 11. ದಂತಕಂಟಕ ಅಂದರೆ ಮುಳ್ಳಿನಂತಿರುವ ದಂತದಿಂದ ಮಾಡಿದ ಆಯುಧ ಮತ್ತು 12. ಭುಶುಂಡಿ ಎಂಬುದಾಗಿ ಇವು ಹನ್ನೆರಡು ಮುಕ್ತಭೇದಗಳೆಂದು ಉಕ್ತವಾಗಿವೆ. 294B-295

ಎಲೈ ರಾಜನೇ, ನಿನಗೆ ಧನುರ್ವೇದದ ಮೊದಲಪಾದವು ಹೇಳಲ್ಪಟ್ಟಿತು. ಈಗ ಎರಡನೆಯ ಪಾದವನ್ನು ಹೇಳುವೆನು ಕೇಳು. 1. ವಜ್ರಮೀಲಿ, 2. ಪರಶು, 3. ಗೋಶೀರ್ಷ, 4. ಖಡ್ಗ, 5. ಧೇನುಕಾ, 6. ಕುಡುಗೋಲು, 7. ಆಸ್ತರ, 8. ಕುಂತ, 9. ಸ್ಥೂಣ, 10. ಪ್ರಾಸ, 11. ಪಿನಾಕವೆಂಬ ಬಿಲ್ಲು,

12. ಗದೆ, 13. ಸುತ್ತಿಗೆ, 14. ನೇಗಿಲು, 15. ಒನಕೆ, 16. ಪಟ್ಟಿಸ, 17. ಮೌಷ್ಟಿಕ, 18. ಪರಿಘ, 19. ಮಯೂಖೀ, 20. ಶತಘ್ನಿಕಾ ಎಂಬುದಾಗಿ ಇವು ಅಮುಕ್ತ ಆಯುಧಗಳು. ಯಾವ ಆಯುಧಗಳನ್ನು ಪ್ರಯೋಗಿಸಲು ಸಾಧ್ಯವಿಲ್ಲವೋ ಕೇವಲ ಪ್ರಹಾರಮಾಡಲು ಸಾಧ್ಯವೋ ಅವು ಅಮುಕ್ತಆಯುಧಗಳು. ಇವು ಇಪ್ಪತ್ತು. ಈ ಇಪ್ಪತ್ತು ಆಯುಧಗಳನ್ನು ಎರಡನೆಯ ಪಾದವೆಂದು ಹೇಳಲಾಗಿದೆ. **296-298**

ಮುಕ್ತ-ಅಮುಕ್ತಶಸ್ತ್ರಗಳು ಒಟ್ಟು ಮೂವತ್ತೆರಡು ಎಂದು ಪರಿಗಣಿತವಾಗಿವೆ. 1. ದಂಡಚಕ್ರ, 2. ಧರ್ಮಚಕ್ರ, 3. ಕಾಲಚಕ್ರ, 4. ಐಂದ್ರಚಕ್ರ, 5. ಶೂಲವುಳ್ಳಚಕ್ರ, 6. ಬ್ರಹ್ಮಶೀರ್ಷ, 7. ಮೋದಕೀ, 8. ಶಿಖರೀ, 9. ಧರ್ಮಪಾಶ, 10. ವಾರುಣಪಾಶ, 11. ಪೈನಾಕಾಸ್ತ್ರ, 12. ವಾಯವ್ಯಾಸ್ತ್ರ, 13. ಶುಷ್ಕಾದ್ರಿ ಅಸ್ತ್ರ, 14. ಶಿಖರಾಸ್ತ್ರ, 15. ಕ್ರೌಂಚಾಸ್ತ್ರ, 16. ಹಯಶೀರ್ಷಾಸ್ತ್ರ, 17. ವಿದಲಾಸ್ತ್ರ (ವಿದ್ಯಾಸ್ತ್ರ), 18. ಅವಿದಲಾಸ್ತ್ರ (ಅವಿದ್ಯಾಸ್ತ್ರ), 19. ಗಾಂಧರ್ವಾಸ್ತ್ರ, 20. ನಂದನಾಸ್ತ್ರ, 21. ವರ್ಷಣಾಸ್ತ್ರ, 22. ಶೋಷಣಾಸ್ತ್ರ, 23. ಪ್ರಸ್ವಾಪನಾಸ್ತ್ರ, 24. ಪ್ರಶಮನಾಸ್ತ್ರ, 25. ಸಂತಾಪನಾಸ್ತ್ರ, 26. ವಿಲಾಪನಾಸ್ತ್ರ, 27. ಮದನಾಸ್ತ್ರ, 28. ಮಾನವಾಸ್ತ್ರ, 29. ಸಾಮನಾಸ್ತ್ರಾ, 30. ತಾಮಸಾಸ್ತ್ರ, 31. ಸಂವರ್ತಾಸ್ತ್ರ, 32. ಮೌಸಲಾಸ್ತ್ರ, 33. ಸತ್ಯಾಸ್ತ್ರ, 34. ಸೌರಾಸ್ತ್ರ, 35. ಮಾಯಾಸ್ತ್ರ, 36. ತ್ವಾಷ್ಟ್ರಾಸ್ತ್ರ, 37. ಸೋಮಾಸ್ತ್ರ, 38. ಸಂಹಾರಾಸ್ತ್ರ, 39. ಮಾನಸಾಸ್ತ್ರ, 40. ನಾಗಾಸ್ತ್ರ, 41. ಗಾರುಡಾಸ್ತ್ರ, 42. ಶೈಲ್ಯಸ್ತ್ರ, 43. ಇಷೀಕಾಸ್ತ್ರ, **299-304**

ಈ ರೀತಿಯಾಗಿ ಹೇಳಲಾದ ಈ ನಲವತ್ತನಾಲ್ಕು ಅಸ್ತ್ರಗಳನ್ನು ಪ್ರಯೋಗಿಸಿದನಂತರ ಮತ್ತೆ ಉಪಸಂಹಾರ ಮಾಡಬಹುದು(ಹಿಂದಕ್ಕೆ ತೆಗೆದುಕೊಳ್ಳಬಹುದು). ಇನ್ನು ಮುಂದೆ ಕ್ರಮಪ್ರಾಪ್ತವಾದ ಉಪಸಂಹಾರಕ ಅಸ್ತ್ರಗಳನ್ನು ನಿನ್ನ ತಿಳಿವಳಿಕೆಗಾಗಿ ಹೇಳುವೆನು. ಯಾವ ಅಸ್ತ್ರಗಳನ್ನು ನೀನು ತಿಳಿದುಕೊಂಡಿದ್ದೇ ಆದರೆ ಆಗ ಶತ್ರುವು ಪ್ರಯೋಗಿಸುವ ಅಸ್ತ್ರಗಳನ್ನು ನೀನು ಶಮನಗೊಳಿಸುವೆ. **305-306A**

ಸತ್ಯವಾನ್, ಸತ್ಯಕೀರ್ತಿ, ರಭಸ, ಧೃಷ್ಟ, ಪ್ರತಿಹಾರತರ, ಅವಾಙ್ಮುಖ, ಪರಾಙ್ಮುಖ, ದೃಢನಾಭ, ಲಕ್ಷ್ಯ, ಅಲಕ್ಷ್ಯ, ಆದಿಲಕ್ಷ್ಯ, ಸುನಾಭಕ, ದಶಾಕ್ಷ, ಶತವಕ್ತ್ರ, ದಶಶೀರ್ಷ, ಶತೋದರ, ಧರ್ಮನಾಭ, ಮಹಾನಾಭ, ಧುಂಧುನಾಭ, ಸನಾಭ, ಜ್ಯೋತಿಷ, ವಿಮಲ, ನೈರಾಸ್ಯ, ತ್ರುಶನ, ಯೋಗಂಧರ, ಸನಿದ್ರ, ದೈತ್ಯ, ಪ್ರಮಥನ, ಸಾರ್ಥಿಮಾಲಿನ್, ಧೃತಿಮಾಲಿನ್, ವೃತ್ತಿಮಾಲಿನ್, ರುಚಿರ, ಪಿತ್ರ್ಯ, ಸೌಮನಸ, ವಿಧೂತ, ಮಕರ, ಕರವೀರ, ಧನರತೀ, ಧಾನ್ಯ, ಕಾಮರೂಪಕ, ಜೃಂಭಕ, ಆವರುಣ, ಮೋಹ, ಕಾಮರುಚಿ, ವರುಣ, ಸರ್ವದಮನ, ಸಂತಾನ, ಸರ್ಪನಾಭಕ, ಕಂಕಲಾಸ್ತ್ರ, ಮೌಸಲಾಸ್ತ್ರ, ಕಪಾಲಾಸ್ತ್ರ, ಕಂಕಣಾಸ್ತ್ರ, ಪೈಶಾಚಾಸ್ತ್ರ, (ಎಲೈ ರಾಜನೇ! ಕಂಕಾಲಾಸ್ತ್ರದಿಂದ ಆರಂಭಿಸಿ ಕಂಕಣಾಸ್ತ್ರದವರೆಗಿನ ಈ

ಐದು ಅಸ್ತ್ರಗಳು ಅಸುರಾಸ್ತ್ರಗಳು.) ಸತ್ಯವಾನ್, ಸರ್ವದಮನ, ಕಾಮರೂಪ, ಯೋಗಂಧರಗಳೆಂಬ ವಿಘಾತಕವಾದ ಇವೂ ಸಹ ಅಸುರಾಸ್ತ್ರಗಳೇ. **306B-314A**

**148B** ಈ ನಲವತ್ತನಾಲ್ಕು ಅಸ್ತ್ರಗಳು ಮತ್ತು ಇವುಗಳೊಡನೆ ಇತರ ಅನ್ಯವಿಮರ್ದನಗಳಾದ ಐದು ಅಸ್ತ್ರಗಳು, ಇವುಗಳನ್ನು ಒಟ್ಟು ಸೇರಿಸಿದರೆ ಒಟ್ಟು ನಲವತ್ತೊಂಭತ್ತು ಅಸ್ತ್ರಗಳು ಶತ್ರುಪ್ರಯುಕ್ತವಾದ ಅಸ್ತ್ರಗಳನ್ನು ಶಮನಗೊಳಿಸುವ ಅಸ್ತ್ರಗಳಾಗಿವೆ. ಸರ್ವಮೋಚನವೆಂಬ ಹೆಸರಿನ ಅಸ್ತ್ರವು, ಅತ್ಯಂತ ಪ್ರಖ್ಯಾತವಾದ ಮುನ್ನಡೆಸುವ ಮಹತ್ತರ ಅಸ್ತ್ರವಾಗಿದೆ. ಇದು ಮುಕ್ತ-ಅಮುಕ್ತವಾದ ಎಲ್ಲ ಅಸ್ತ್ರ-ಶಸ್ತ್ರಗಳನ್ನು ಶಾಂತಿಗೊಳಿಸಲು ನನ್ನ ವರದಿಂದ ಶ್ರೇಷ್ಠವಾದ ಅಸ್ತ್ರವಾಗಿ ಪ್ರಸಿದ್ಧವಾಗಿದೆ. ಎಲೈ ರಾಜನೇ ! ಇದು ಧನುರ್ವೇದದ ಮೂರನೆಯ ಪಾದವಾಗುತ್ತದೆ. ಇನ್ನು ಮುಂದೆ ಮಂತ್ರಮುಖ್ಯವಾದವುಗಳನ್ನೂ ನಿನಗೆ ಹೇಳುವೆನು. ಏಕಾಗ್ರಮನಸ್ಸಿನಿಂದ ಕೇಳುವವನಾಗು. **314B-317A**

ವಿಷ್ಣುಚಕ್ರ, ವಜ್ರಾಸ್ತ್ರ, ಬ್ರಹ್ಮಾಸ್ತ್ರ, ಕಾಲಪಾಶಕಾಸ್ತ್ರ, ನಾರಾಯಣಾಸ್ತ್ರ, ಪಾಶುಪಾತ್ರಗಳೆಂಬ ಈ ಆರು ಅಸ್ತ್ರಗಳು ಬೇರೆ ಯಾವ ಅಸ್ತ್ರಗಳಿಂದಲೂ ಶಮನವಾಗುವುದಿಲ್ಲ. ಇವುಗಳನ್ನು ನಾಶಮಾಡುವ ಬೇರೆ ಯಾವ ಅಸ್ತ್ರಗಳೂ ಇಲ್ಲದ ಕಾರಣ, ಈ ಆರು ಅಸ್ತ್ರಗಳು ಮಂತ್ರಮುಕ್ತ ಅಸ್ತ್ರಗಳೆಂದು ಉಕ್ತವಾಗಿವೆ. ಇದು ಧನುರ್ವೇದದ ನಾಲ್ಕನೆಯ ಪಾದವೆಂದು ಸಂಮತವಾಗಿದೆ. **317B-318A**

ಇದರ ವ್ಯಾಖ್ಯಾನದಲ್ಲಿ ವಿಶೇಷವಿದೆ. ಉಪಸಂಹಾರಾಸ್ತ್ರಗಳು ಒಟ್ಟು ನಲವತ್ತೊಂಭತ್ತು ಎಂದು ಹೇಳುವುದಕ್ಕೆ ಮೊದಲು ನಲವತ್ತನಾಲ್ಕು ಅಸ್ತ್ರಗಳು ಉಪಸಂಹಾರಾಸ್ತ್ರಗಳು ಎಂದು ಹೇಳಿದೆ. ಅನಂತರ ಉಳಿದ ಐದು ಉಪಸಂಹಾರಾಸ್ತ್ರಗಳು ಯಾವುವು ಎಂದು ಪ್ರಶ್ನೆಯು ಮೂಡಿದಾಗ, ಕಂಕಾಲಾಸ್ತ್ರದಿಂದ ಪ್ರಾರಂಭಿಸಿ ಪೈಶಾಚಾಸ್ತ್ರ ಪೂರ್ತಾ ಐದು ಅಸ್ತ್ರಗಳನ್ನು ಹೇಳಿ ಇವು ಅಸುರಾಸ್ತ್ರಗಳು ಜೊತೆಗೆ ಉಪಸಂಹಾರಾಸ್ತ್ರಗಳು ಎಂದು ಹೇಳಿ, ನಂತರ ಇವುಗಳನ್ನು ವಿವೇಚಿಸುವಾಗ ಕಂಕಾಲಾಸ್ತ್ರಂ ಎಂದು ಹೇಳಲು ಪ್ರಾರಂಭಿಸಿ ಅಸುರಾಸ್ತ್ರ-ವಿಘಾತಕಾಃ ಅನ್ನುವವರೆಗೆ ಪೂರ್ತಿಯಾಗಿ ಆ ಐದು ಅಸ್ತ್ರಗಳನ್ನು ಹೇಳಿ, ಮೂಡಿ ಬಂದ ಸಂಶಯವನ್ನು ಪರಿಹರಿಸುತ್ತಾನೆ.

ಮಯ, ಶಂಬರ, ಮಾರೀಚ, ವಿದ್ಯುಜ್ಜಿಹ್ವ, ಇಂದ್ರಜಿತ್ ಈ ಅಸುರರು ಸೃಷ್ಟಿಸಿದ ಅಸ್ತ್ರಗಳು ಅಸುರಾಸ್ತ್ರಗಳು. ಇವುಗಳಲ್ಲಿ ಸರ್ವಜ್ಞೆಯಾದ ಸುಪ್ರಭೆಯಿಂದ ಕೆಲವು ಅಸ್ತ್ರಗಳು ಸ್ಪಷ್ಟವಾಗ-ಬೇಕಾಗಿದ್ದರೂ, ಮುಂದೆ ಅವು ಸ್ಪಷ್ಟವಾಗುತ್ತವೆ ಎಂಬ ಕಾರಣದಿಂದ ಮೊದಲೇ ಆ ಉಪಸಂಹಾ-ರಾಸ್ತ್ರಗಳನ್ನು ಹೇಳಿರುವುದರಿಂದ ಯಾವ ವಿರೋಧವೂ ಇಲ್ಲ. ನಂತರ ಸರ್ವಮೋಚನವೆಂಬ ಸರ್ವಶ್ರೇಷ್ಠವಾದ ಒಂದು ಅಸ್ತ್ರವನ್ನು ಹೇಳಿದೆ. ಅಲ್ಲಿಗೆ ಒಟ್ಟು ಐವತ್ತು ಉಪಸಂಹಾರಾಸ್ತ್ರಗಳಾಗುತ್ತವೆ. ಇವುಗಳಲ್ಲಿ ನಲವತ್ತೊಂಭತ್ತು ಅಸ್ತ್ರಗಳಿಗೆ ವಿನಿಯೋಗವನ್ನು ಹೇಳಿದೆ. ಉಳಿದ ಒಂದು ಅಸ್ತ್ರಕ್ಕೆ ಎಲ್ಲಿ

ವಿನಿಯೋಗ ಎಂಬ ಶಂಕೆಯನ್ನು ಮತ್ತು ಸರ್ವಮೋಚನೇನ ಎಂದು ಹೇಳಿದ್ದಕ್ಕೆ ಸಾರ್ಥಕತೆಯನ್ನು, ಸರ್ವಮೋಚನೇನ ಎಂದು ಹೇಳುವ ಮೂಲಕ ತಿಳಿಯಪಡಿಸಲಾಗಿದೆ.

ದೈವಾಸುರಾಸ್ತ್ರಗಳು, ಇವುಗಳ ಉಪಸಂಹಾರಾಸ್ತ್ರಗಳು, ಸರ್ವೋಪಸಂಹಾರಾಸ್ತ್ರ ಮತ್ತು ಇವುಗಳೊಡನೆ ಹೇಳಲಾದ ಅಪ್ರತಿಹತಾಸ್ತ್ರಗಳ ವಿವರಣೆ.

ಹಿಂದೆ ಹೇಳಿದಂತೆ - ಸುರಾಸ್ತ್ರಗಳು ನಲವತ್ತನಾಲ್ಕು.

## ಐದು ಅಸುರಾಸ್ತ್ರಗಳ ವಿವರಣೆ

ಕಂಕಾಲಾಸ್ತ್ರ, ಮೌಸಲಾಸ್ತ್ರ, ಕಾಪಾಲಾಸ್ತ್ರ, ಕಂಕಣಾಸ್ತ್ರ, ಪೈಶಾಚಾಸ್ತ್ರ - ಹೀಗೆ ಇವು ಐದು ಅಸುರಾಸ್ತ್ರಗಳು.

ಈಗ ಸುರಾಸ್ತ್ರ ಮತ್ತು ಅಸುರಾಸ್ತ್ರಗಳು ಒಟ್ಟು ಸೇರಿ ಆಗಿರುವ ನಲವತ್ತೊಂಭತ್ತು ಅಸ್ತ್ರಗಳ ಉಪಸಂಹಾರಾಸ್ತ್ರಗಳ ವಿವರಣೆ

I ನಲವತ್ತೊಂಭತ್ತು ಅಸ್ತ್ರಗಳಲ್ಲಿ ಮೊದಲನೆಯ ಸತ್ಯವಾನ್ ಎಂಬ ಅಸ್ತ್ರ, ನಲವತ್ತೇಳನೆಯ ಸರ್ವದಮನಾಸ್ತ್ರ, ನಲವತ್ತೊಂದನೆಯ ಕಾಮರೂಪಾಸ್ತ್ರ, ಇಪ್ಪತ್ತೈದನೆಯ ಯೋಗಂಧರಾಸ್ತ್ರ, ಒಂಭತ್ತನೆಯ ಅಲಕ್ಷ್ಯಾಸ್ತ್ರ, ಎಂಬುದಾಗಿ. ಈ ಐದು ಅಸ್ತ್ರಗಳು ಕಂಕಾಲ ಮೊದಲಾದ ಐದು ಅಸುರಾಸ್ತ್ರಗಳ ಉಪಸಂಹಾರಾಸ್ತ್ರಗಳು.

| | ಅಸುರಾಸ್ತ್ರಗಳು | ಉಪಸಂಹಾರಾಸ್ತ್ರ |
|---|---|---|
| 1. | ಕಂಕಾಲಾಸ್ತ್ರ | ಸತ್ಯವಾನ್ |
| 2. | ಮೌಸಲಾಸ್ತ್ರ | ಸರ್ವದಮನಾಸ್ತ್ರ |
| 3. | ಕಾಪಾಲಾಸ್ತ್ರ | ಕಾಮರೂಪಾಸ್ತ್ರ |
| 4. | ಕಂಕಣಾಸ್ತ್ರ | ಯೋಗಂಧರಾಸ್ತ್ರ |
| 5. | ಪೈಶಾಚಾಸ್ತ್ರ | ಅಲಕ್ಷ್ಯಾಸ್ತ್ರ |

II ದೈವಾಸ್ತ್ರ ಮತ್ತು ಅಸುರಾಸ್ತ್ರಗಳ ಇಡೀ ಸಮೂಹವನ್ನು ಉಪಶಮನಮಾಡುವ ಒಂದೇ ಒಂದು ಅಸ್ತ್ರವೆಂದರೆ ಅದು ಸರ್ವಮೋಚನಾಸ್ತ್ರ.

## III ಆರು ಅಪ್ರತಿಹತಾಸ್ತ್ರಗಳ ವಿವರಣೆ

1. ವಿಷ್ಣುಚಕ್ರಾಸ್ತ್ರ 2. ವಜ್ರಾಸ್ತ್ರ 3. ಬ್ರಹ್ಮಾಸ್ತ್ರ 4. ಕಾಲಪಾಶಾಸ್ತ್ರ 5. ನಾರಾಯಣಾಸ್ತ್ರ 6. ಪಾಶುಪತಾಸ್ತ್ರ - ಇವು ಆರು ಅಪ್ರತಿಹತಾಸ್ತ್ರಗಳು.

ಇವೆಲ್ಲವೂ ಒಟ್ಟು ಸೇರಿ ಒಂದು ನೂರ ಐದು ಅಸ್ತ್ರಗಳಾಗುತ್ತವೆ.

## ದೇವತಾದಿಗಳ ಕೈಗಳಲ್ಲಿರುವ ಆಯುಧಗಳು
## ನಮ್ಮಿಂದ ರಚಿತವಾದ ಚಾಮುಂಡಾಲಘುನಿಘಂಟುವಿನ
## ಮೊದಲನೆಯ ಪ್ರಕರಣದಲ್ಲಿ

### ಶ್ರೀಚಾಮುಂಡಾಂಬಿಕಾಯೈ ನಮಃ

ಕಲ್ಯಾಣಗಳಿಗೆ ಒಂದೇ ಒಂದು ಮೂಲಕಾರಣವಾದ, ಒಂದು ಕೋಟಿ ಮನ್ಮಥರ ಲಾವಣ್ಯಕ್ಕೆ ಸಮನಾದ ಲಾವಣ್ಯವುಳ್ಳ, ಚಂಡ ಮೊದಲಾದ ರಾಕ್ಷಸರನ್ನು ನಾಶ ಮಾಡುವುದರಲ್ಲಿ ಸಮರ್ಥವಾದ ಚಾಮುಂಡಾ ಎಂಬ ಹೆಸರಿನ ಮಹತ್ತರಶಕ್ತಿಯನ್ನು ಮನಸ್ಸಿನಲ್ಲಿ ಭಾವಿಸಿಕೊಳ್ಳುತ್ತೇನೆ. 319

1. ಸುದರ್ಶನಚಕ್ರ 2. ಪಾಂಚಜನ್ಯವೆಂಬ ಶಂಖ
3. ಪಾಶ (ಹಗ್ಗ) 4. ಅಂಕುಶ
5. ಬಿಲ್ಲು 6. ಬಾಣ
7. ಖಡ್ಗ (ಕತ್ತಿ) 8. ಖೇಟ (ಗುರಾಣಿ)
9. ಗದೆ 10. ಶೂಲ
11. ಶಕ್ತ್ಯಾಯುಧ 12. ಕುಂತ
13. ಪರಶ್ವಧ (ಗಂಡುಗೊಡಲಿ) 320
14. ನೇಗಿಲು 15. ದಂಡ
16. ಬಳ್ಳಿ 17. ವೀಣಾ
18. ಕೋರೆಯದಾಡೆ (ಹಲ್ಲು) 19. ಮುದ್ಗರ (ಕಬ್ಬಿಣದ ಸುತ್ತಿಗೆ)
20. ಪಟ್ಟಸ (ಯುದ್ಧದ ಕೊಡಲಿ, ಯುದ್ಧದಲ್ಲಿ ಉಪಯೋಗಿಸುವ ಹರಿತವಾದ ಆಯುಧ)
21. ವಜ್ರಾಯುಧ 22. ಟಂಕ (ಉಳಿ)
23. ಧ್ವಜ (ಬಾವುಟ) 24. ಅಮುಂಡ (ತಲೆಯಿಲ್ಲದ ಶರೀರದ ಭಾಗ)
25. ಮುಸಲ (ಒನಕೆ) 26. ಅಸ್ಥಿ (ಮೂಳೆ)
27. ಬೆಂಕಿ 321
28. ಮನ್ಮಥನ ಬಿಲ್ಲು 29. ಮನ್ಮಥನ ಐದು ಪುಷ್ಪಬಾಣಗಳು
30. ಖಟ್ವಾಂಗವೆಂಬ ಆಯುಧ 31. ಡಮರುಗ
32. ಜಿಂಕೆ 33. ಘಂಟೆ
34. ಬೆತ್ತ 35. ಕ್ಷುರ (ಸಣ್ಣಕತ್ತಿ)

36. ಪ್ರಾಸವೆಂಬ ಆಯುಧ 37. ನವಿಲುಗರಿ
38. ಭಲ್ಲೆ (ಒಂದು ಬಗೆಯ ಆಯುಧ ಅಥವಾ ಕರಡಿ)
39. ಸರ್ಪ 40. ತೋಮರ (ಈಟಿ) 322
41. ಕಷ್ಟಾರಿಕಾ (ಕಠಾರಿ)
42. ಭಿಂಡಿವಾಲವೆಂಬ ಆಯುಧ (ಮಾರುದ್ದದ ಬಡಿಗೆ)
43. ಪರಶು (ಸಾಮಾನ್ಯ ಕೊಡಲಿ)
44. ದಂತ 45. ಚಾಮರ
46. ಕಪಾಲ 47. ಚರ್ಮ
48. ಫಲಕ (ಹಲಗೆ) 49. ಪದ್ಮ
50. ಸೂರ್ಯ 51. ಚಂದ್ರ 323
52. ಭೃಶುಂಡೀ (ಒಂದು ಬಗೆಯ ಆಯುಧ)
53. ಕ್ರಕಚ (ಗರಗಸ)
54. ಕಂಠ 55. ಪರಿಘ (ಅಗುಳಿಯಂತಹ ಆಯುಧ)
56. ಶೃಂಗ (ಕೊಂಬು) 57. ಕೋಳಿ
58. ಚಂದ್ರಹಾಸ (ಒಂದು ಬಗೆಯ ಖಡ್ಗ ಅಥವಾ ಕತ್ತಿ)
59. ಅಮೃತಕಲಶ 60. ಶತಘ್ನೀ (ಒಂದು ಬಗೆಯ ಆಯುಧ)
61. ಯಂತ್ರ 62. ಸರಪಳಿ 324
63. ಛುರಿಕಾ (ಸಣ್ಣಕತ್ತಿ) 64. ಸ್ರುಕ್ (ದೊಡ್ಡಮರದ ಸೌಟು)
65. ಸ್ರುವ (ಚಿಕ್ಕಮರದ ಸೌಟು)
66. ಸೂಚೀ (ಸೂಜಿ) 67. ರುದ್ರವೀಣೆ
68. ಕಮಂಡಲು 69. ಕನ್ನಡಿ
70. ಕತ್ತರಿ 71. ಚಕ್ರ
72. ನಳಿಕೆ 73. ಶಂಖ
74. ಢಕ್ಕಾ (ಒಂದು ಬಗೆಯ ಚರ್ಮವಾದ್ಯ) 325
75. ವಜ್ರಮುಷ್ಟಿ 76. ಲೋಷ್ಟಭೇದ
77. ದಂಡ 78. ಪತಾಕಾ

79. ತೂಣೀರ (ಬತ್ತಳಿಕೆ) 80. ಶಲ್ಯ (ಸರಳು)
81. ಬೀಸಣಿಗೆ 82. ನಾಲಿಗೆ
83. ಭೇತಾಲ 84. ಭೇರಿಕಾ (ನಗಾರಿ) 326
85. ವಾಸಿ (ಒಂದು ಬಗೆಯ ಆಯುಧ)
86. ಪರ್ವತ 87. ಕಲ್ಹಾರಪುಷ್ಪ
88. ಮರ 89. ನಾರಾಚ (ಉಕ್ಕಿನ ಬಾಣ)
90. ಪುಸ್ತಕ 91. ಕುದ್ದಾಲ (ಗುದ್ದಲಿ)
92. ದಾರು (ಮರದ ಪಟ್ಟಿ) 93. ನಿಗಲ (ಬೇಡಿ)
94. ಖನಿತ್ರ (ಪಿಕಾಸಿ ಅಥವಾ ಮಾವಟಿ)
95. ಬತ್ತದ ಗೊಂಚಲು 327
96. ಅಕ್ಷಮಾಲೆ 97. ಪಾನಪಾತ್ರೆ
98. ಸಂದಂಶ (ಇಕ್ಕಳ) 99. ಹೂವಿನ ಗೊಂಚಲು
100. ಕನ್ನೈದಿಲೆಹೂವು 101. ಕೋಕನದ (ಕೆಂದಾವರೆಹೂ)
102. ಕಶಾ (ಚಾವಟಿ)
103. ನಖಕೃಂತನೀ (ಉಗುರು ಕತ್ತರಿಸುವ ಕತ್ತರಿ) 328
104. ಲವಿತ್ರ (ಕುಡುಗೋಲು) 105. ಮಾರ್ಜನೀ (ಕಸಬರಿಕೆ)
106. ಶೂರ್ಪ (ಮೊರ) 107. ಕುಠಾರ (ಚಿಕ್ಕ ಕೊಡಲಿ)
108. ಬಿಳಿಯ ಕಮಲ 109. ಶರಾವ (ಮಣ್ಣಿನ ಮುಚ್ಚಳ)
110. ಕ್ಷೇಪಣೀ (ಮಣ್ಣನ್ನು ಎತ್ತಿ ಎಸೆಯುವ ಸಾಧನ)
111. ಪಾಶ (ಹಗ್ಗ) ಅಥವಾ ಕ್ಷೇಪಣೀ ಪಾಶ (ಎಸೆಯುವ ಹಗ್ಗ)
112. ಚಮ್ಮಟಿ (ಚಿಮಟ) 113. ವರ್ಮ (ಕವಚ)
114. ಶೃಂಗಿಕಾ (ಸಣ್ಣಕೊಂಬು) 329
115. ಹ್ರಸ್ವವಕ್ರಛುರೀ (ಚಿಕ್ಕದಾದ ಡೊಂಕಾದ ಸಣ್ಣ ಕತ್ತಿ)
116. ದೀರ್ಘವಕ್ರಛುರೀ (ಉದ್ದವಾದ ಡೊಂಕಾದ ಸಣ್ಣ ಕತ್ತಿ)
117. ಗಿಳಿ 118. ಸೂಜಿಯುಳ್ಳ ಕೈ
119. ಅಂಜಲಿ (ಬೊಗಸೆ) 120. ಮುಷ್ಟಿ

121. ಜ್ಞಾನಮುದ್ರೆ 122. ವರದಮುದ್ರೆ

123. ಅಭಯಮುದ್ರೆ 330

124. ಮಾತುಲುಂಗದ ಹಣ್ಣು (ಮಾದಳದಹಣ್ಣು)

125. ಜಲೂಕಾ (ಜಿಗಣೆ) 126. ದಾಡಿಮೀ (ದಾಳಿಂಬೆಹಣ್ಣು)

127. ದಾನಮುದ್ರೆ 128. ಮೋದಕ

129. ಆಶ್ಚರ್ಯಮುದ್ರೆ 130. ತರ್ಜನಮದ್ರೆ (ಹೆದರಿಸುವ ಮುದ್ರೆ)

ಹೀಗೆ ಇವುಗಳು ದೇವತೆಗಳ ಕೈಗಳಲ್ಲಿರುವ ವಸ್ತುಗಳು. 331

"ಶ್ರೀಚಾಮುಂಡೇಶ್ವರಿಯ ಕೃಪೆಗೆ ಪೂರ್ಣಪಾತ್ರರಾದ ಚಾಮರಾಜ ದೊರೆಯಿಂದ ಪ್ರಾಜ್ಞರಾದ ಜನರ ಸಂತೋಷಕ್ಕಾಗಿ, ಈ ಆಯುಧಮಾಲೆಯು ರಚಿತವಾಗಿದೆ. ಇದು ಜಯಿಸುವಂತಾಗಲಿ." 332

**149A & 149B** ಮೊದಲನೆಯ ಪ್ರಕರಣದಲ್ಲಿರುವ ಆಯುಧರೂಪಗಳು ಬರೆಯಲ್ಪಟ್ಟಿವೆ.

(149A ಅರ್ಧಭಾಗ ಪತ್ರದಲ್ಲಿ ಮತ್ತು 149B ಪತ್ರ ಪೂರ್ತಾ ಒಟ್ಟು 130 ಆಯುಧಗಳ ಚಿತ್ರಗಳನ್ನು ಬರೆದಿದ್ದಾರೆ.)

**150A**

ಆರು ವೇದಾಂಗಗಳು ಮೊದಲಾದ ಶಾಸ್ತ್ರಗಳ ಸ್ವರೂಪಗಳು
ಮತ್ತು ಇವುಗಳ ಅಭಿಮಾನಿದೇವತೆಗಳ ಧ್ಯಾನಗಳು

(ನೃಸಿಂಹಪ್ರಾಸಾದ, ಶೈವಾಗಮ, ಹೇಮಾದ್ರಿಖಂಡ, ಮಯೂಖ, ಪಾಂಚರಾತ್ರ, ಕಾರಣಾಗಮ, ಭಟ್ಟಭಾಸ್ಕರೀಯ, ವ್ರತಕಲ್ಪಗಳಲ್ಲಿ ಹೇಳಿರುವಂತೆ)

ಅವುಗಳಲ್ಲಿ ಶಾಸ್ತ್ರನಾಮಗಳು, ಅವುಗಳ ಅಭಿಮಾನಿ ದೇವತೆಗಳ ಹೆಸರುಗಳು

(ನೃಸಿಂಹಪ್ರಾಸಾದದಲ್ಲಿ)

| | ಶಾಸ್ತ್ರನಾಮ | ಅಭಿಮಾನಿದೇವತೆ | |
|---|---|---|---|
| 1. | ಶಿಕ್ಷಾಶಾಸ್ತ್ರ | ಪ್ರಜಾಪತಿ | |
| 2. | ಕಲ್ಪಶಾಸ್ತ್ರ | ಬ್ರಹ್ಮದೇವ | |
| 3. | ವ್ಯಾಕರಣಶಾಸ್ತ್ರ | ಸಾರಸ್ವತ | |
| 4. | ನಿರುಕ್ತ | ವರುಣದೇವ | 333 |
| 5. | ಛಂದಃಶಾಸ್ತ್ರ | ಅದಿತಿ | |
| 6. | ಜ್ಯೋತಿಷ | ಭಗವಾನ್ ಹರಿ | |

| | | | |
|---|---|---|---|
| 7. | ಮೀಮಾಂಸಾ | ಭಗವಾನ್ ಸೋಮದೇವ | |
| 8. | ನ್ಯಾಯಶಾಸ್ತ್ರ | ವಾಯುದೇವ | 334 |
| 9. | ಧರ್ಮಶಾಸ್ತ್ರಗಳು | ಧರ್ಮರಾಜ | |
| 10. | ಪುರಾಣಗಳು | ಮನು | |
| 11. | ಇತಿಹಾಸ | ಪ್ರಜಾಧ್ಯಕ್ಷ | |
| 12. | ಧನುರ್ವೇದ | ಇಂದ್ರ | 335 |
| 13. | ಆಯುರ್ವೇದ | ಪ್ರಭುವಾದ ಸಾಕ್ಷಾತ್ ಧನ್ವಂತರಿ | |
| 14. | ಗಾಂಧರ್ವವೇದ (ಸಂಗೀತ) | ವಾಗ್ದೇವತೆ | |
| 15. | ನೃತ್ತಶಾಸ್ತ್ರ | ಮಹೇಶ್ವರ | 336 |
| 16. | ಪಾಂಚರಾತ್ರ | ಸಂಕರ್ಷಣ | |
| 17. | ಪಾಶುಪತ | ರುದ್ರ | |
| 18. | ಪಾತಂಜಲಯೋಗದರ್ಶನ | ಆದಿಶೇಷ | |
| 19. | ಸಾಂಖ್ಯಶಾಸ್ತ್ರ | ಕಪಿಲಮುನಿ | 337 |
| 20. | ಅರ್ಥಶಾಸ್ತ್ರ ಮೊದಲಾದ ಎಲ್ಲ ಶಾಸ್ತ್ರಗಳು | ಧನಾಧಿಪತಿ ಕುಬೇರ | |
| 21. | ಎಲ್ಲಾ ಕಲಾಶಾಸ್ತ್ರಗಳು | ಜಗದ್ಗುರು ಕಾಮದೇವ | 338 |

ಹೀಗೆ ಅಭಿಮಾನಿದೇವತೆಗಳನ್ನು ಆಯಾಯಾ ಶಾಸ್ತ್ರಗಳಿಗೆ ಹೇಳಲಾಗಿದೆ. ಇವಲ್ಲದೆ, ಬೇರೆ ಯಾವ ಶಾಸ್ತ್ರಗಳು, ಕಾವ್ಯಗಳು ಹೇಳಲ್ಪಡುತ್ತವೆಯೋ ಆ ಶಾಸ್ತ್ರ, ಕಾವ್ಯಗಳಿಗೆ ವೇದದಂತೆ ಅದದೇ ದೇವನೆಂದು ತಿಳಿಯಬೇಕು. 339

150A/1

## ಶಿಕ್ಷಾಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ಶಿಕ್ಷಾದೇವತೆಯು ಶುಭವರ್ಣದವನು. ಇವನಿಗೆ ಆರು ತೋಳುಗಳು. ಅಭಯಮುದ್ರೆ, ಜ್ಞಾನ-ಮುದ್ರೆ, ಜಪಮಾಲೆ, ಕಮಂಡಲು, ದಂಡ, ಕಮಲಗಳು ಈ ಆರುಕೈಗಳಲ್ಲಿ ಇವೆ. 340

(ಬಿಳಿಯಬಣ್ಣ)

150A/2

## ಶಿಕ್ಷಾಶಾಸ್ತ್ರದ ಅಭಿಮಾನಿದೇವತೆ ಪ್ರಜಾಪತಿಯ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ಐದು ಜನ ಬ್ರಹ್ಮರಲ್ಲಿ ಪ್ರಜಾಪತಿಬ್ರಹ್ಮನಂತೆ ಇವನ ಸ್ವರೂಪ.

ಇವನು ಹಂಸವಾಹನವನ್ನೇರಿ ಹೋಗುತ್ತಿರುವಂತೆ ಚಿತ್ರಿಸಬೇಕು. ಆದರೆ ನಾಲ್ಕು ಮುಖಗಳಿರುವಂತೆ ಬರೆಯಬಾರದು. ಅವನ ಎಡತೊಡೆಯ ಮೇಲೆ ಶುಭಕರಳಾದ ಸಾವಿತ್ರಿಯು ಕುಳಿತಿರುವಂತೆ ಚಿತ್ರಿಸಬೇಕು. 341

(ಪಾದರಿಹೂವಿನಂತಹ ನಸುಗೆಂಪು ಬಣ್ಣ)

ಬ್ರಹ್ಮನಿಗೆ ಹೇಳಿದ ಶ್ರೇಷ್ಠರೂಪ ಮತ್ತು ಎಲ್ಲ ಕಾರ್ಯಗಳೂ ಪ್ರಜಾಪತಿಗೆ ಉಕ್ತವಾಗಿವೆ. 341A

150A/3 **ಕಲ್ಪಸ್ವರೂಪ**

(ನೃಸಿಂಹಪ್ರಾಸಾದದಲ್ಲಿ)

ಕಲ್ಪದೇವತೆಯು ಬಿಳಿಯ ಕಮಲದಂತೆ ಬಿಳಿಯ ಶರೀರವುಳ್ಳವನು. ಇವನಿಗೆ ಕಾಗೆಯ ಮುಖ. ದೊಡ್ಡಹೊಟ್ಟೆ. ಕೊಡಲಿಯ ಕಾವು, ಕಮಂಡಲುಗಳನ್ನು ಕೈಗಳಲ್ಲಿ ಹೊಂದಿದ್ದಾನೆ. ಉಡಿದಾರವನ್ನು ಸೊಂಟಕ್ಕೆ ಬಿಗಿದಿದ್ದಾನೆ. ಕಿವಿಗಳಿಗೆ ಕುಂಡಲಗಳನ್ನು ಹಾಕಿಕೊಂಡಿದ್ದಾನೆ. 342

(ಬಿಳಿಕಮಲದ ಬಣ್ಣ)

150A/4 **ಕಲ್ಪಾಭಿಮಾನಿದೇವತೆ ಬ್ರಹ್ಮನ ಧ್ಯಾನ**

(ಶೈವಾಗಮದಲ್ಲಿ)

ತ್ರಿಮೂರ್ತಿಗಳಲ್ಲಿ ಅಂತರ್ಗತನಾದ ಬ್ರಹ್ಮನಂತೆ.

ಕಲ್ಪಶಾಸ್ತ್ರದ ಅಭಿಮಾನಿ ದೇವತೆ ಬ್ರಹ್ಮನಿಗೆ ನಾಲ್ಕು ಮುಖಗಳು, ನಾಲ್ಕು ಕೈಗಳಿವೆ. ಕಮಂಡಲು ಮತ್ತು ಜಪಮಾಲೆಗಳು ಧರಿಸಿದ್ದಾನೆ. ಜನಿವಾರವನ್ನು ತೊಟ್ಟಿದ್ದಾನೆ. ಉತ್ತರೀಯವನ್ನು ಹೊದ್ದಿದ್ದಾನೆ. ಜಟೆಯನ್ನು ಬಿಗಿದಿದ್ದಾನೆ. ಕಿರೀಟವನ್ನು ಧರಿಸಿದ್ದಾನೆ. ಬಲಗಡೆಯ ಮೇಲಿನ ಕೈನಲ್ಲಿ ಜಪಮಾಲೆಯನ್ನು ಎಡಗಡೆಯ ಮೇಲಿನ ಕೈನಲ್ಲಿ ಕಮಂಡಲುವನ್ನು, ಬಲಗಡೆಯ ಕೆಳಗಡೆಯ ಕೈನಲ್ಲಿ ಸ್ರುವವನ್ನು ಎಡಗಡೆಯ ಕೈನಲ್ಲಿ ಪುಸ್ತಕವನ್ನು ಹೊಂದಿದ್ದಾನೆ. ಕಮಲಾಸನದ ಮೇಲೆ ಕುಳಿತಿದ್ದಾನೆ. ಇವನು ಹಸನ್ಮುಖಿ. 343-344A

(ಪಾದರಿಯಂತೆ ನಸುಗೆಂಪುಬಣ್ಣ)

150B/1 **ವ್ಯಾಕರಣದ ಸ್ವರೂಪ**

(ನೃಸಿಂಹಪ್ರಾಸಾದದಲ್ಲಿ)

ವ್ಯಾಕರಣಶಾಸ್ತ್ರದೇವನು ಬೆಳ್ಳಗಿದ್ದಾನೆ. ನವಿಲುಗರಿಗೆ ಸಮಾನವಾದ ಜಟೆಯು ಇವನಿಗಿದೆ. ದಿವ್ಯವಾದ ವೀಣೆಯನ್ನು ಕೈನಲ್ಲಿ ಹಿಡಿದಿದ್ದಾನೆ. ದಿವ್ಯವಸ್ತ್ರಗಳಿಂದ ವಿಭೂಷಿತನಾಗಿದ್ದಾನೆ. 345

(ಬಿಳಿಯ ಬಣ್ಣ)

150B/2

### ವ್ಯಾಕರಣಾಭಿಮಾನಿದೇವತೆ ಸರಸ್ವತಿಯ ಧ್ಯಾನ

(ಹೇಮಾದ್ರಿಯಲ್ಲಿ)

ವಾಗ್ದೇವತೆ ಸರಸ್ವತಿಯು ನಾಲ್ಕು ತೋಳುಗಳನ್ನು ಹೊಂದಿದ್ದು, ಸ್ಫಟಿಕಮಣಿಗಳಿಂದ ನಿರ್ಮಿತವಾದ ಅಕ್ಷಮಾಲೆ, ಬಿಳಿಯ ಕಮಲ, ಗಿಳಿ ಮತ್ತು ಪುಸ್ತಕಗಳನ್ನು ಈ ನಾಲ್ಕು ಕೈಗಳಿಂದ ಹಿಡಿದುಕೊಂಡಿದ್ದಾಳೆ. ಕುಂದಪುಷ್ಪ, ಬಿಳಿಯಶಂಖ, ಸ್ಫಟಿಕಮಣಿಗಳ ಕಾಂತಿಗೆ ಸಮಾನವಾದ ಕಾಂತಿಯಿಂದ ಕಂಗೊಳಿಸುವ, ಸುಪ್ರಸನ್ನಳಾದ, ಪ್ರಸಿದ್ಧಳಾದ ಈ ವಾಗ್ದೇವತೆಯು ಸದಾ ಕಾಲ ನನ್ನ ಮುಖದಲ್ಲಿ ನೆಲಸಲಿ. 346

(ಬಿಳಿಯ ಬಣ್ಣ)

150B/3

### ನಿರುಕ್ತದ ಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ನಿರುಕ್ತದೇವನು ಚಂದ್ರನಂತೆ ನಿರ್ಮಲನಾಗಿದ್ದಾನೆ. ಇವನು ಶಾಂತಸ್ವರೂಪನು. ಇವನಿಗೆ ಬಕ-ಪಕ್ಷಿಯ ಮುಖ. ತೆಳುವಾದ ಹೊಟ್ಟೆಯುಳ್ಳವನು. ಪಾಶ, ಕಮಲ, ಜಪಮಾಲೆ ಮತ್ತು ಪುಸ್ತಕಗಳನ್ನು ತನ್ನ ನಾಲ್ಕು ಕೈಗಳಲ್ಲಿ ಹೊಂದಿದ್ದಾನೆ. ನಿರುಕ್ತವೆಂದು ನಿರ್ಣೀತವಾದ ಛಂದಸ್ಸು ಈಗ ನಿರ್ಣಯಿ-ಸಲ್ಪಡುತ್ತದೆ. 347-347A

(ಬಿಳಿಯ ಬಣ್ಣ)

150B/4

### ನಿರುಕ್ತದ ಅಭಿಮಾನಿದೇವತೆಯಾದ ವರುಣನ ಧ್ಯಾನ

(ಮಯೂಖದಲ್ಲಿ)

ದಿಕ್ಪಾಲನಾದ ವರುಣನಂತೆ.

ವರುಣದೇವನು ನಾಗಪಾಶವನ್ನು ಧರಿಸಿದ್ದಾನೆ. ರತ್ನಗಳನ್ನು ಅಲಂಕರಿಸಿಕೊಂಡಿದ್ದಾನೆ. ಇವನು ಪದ್ಮಿನಿಯ ಪ್ರಿಯನು. ಜಲಾಧಿಪತಿಯಾದ ಇವನು ಚಿನ್ನದಂತೆ ದೇಹಕಾಂತಿಯುಳ್ಳವನು. ಮೊಸಳೆಯು ಇವನ ವಾಹನ. 348

(ಚಿನ್ನದ ಬಣ್ಣ)

150B/5 **ಛಂದಶ್ಶಾಸ್ತ್ರದ ಸ್ವರೂಪ**

**(ನೃಸಿಂಹಪ್ರಾಸಾದದಲ್ಲಿ)**

ಛಂದಶ್ಶಾಸ್ತ್ರದೇವನು ದಾಸವಾಳದ ಹೂವಿನಂತೆ ದೇಹಕಾಂತಿಯುಳ್ಳವನೆಂದು ಬಲ್ಲವರು ತಿಳಿದಿದ್ದಾರೆ. ಇವನದು ಚಕೋರಪಕ್ಷಿಯ ಮುಖ. ದಾಸವಾಳದ ಹೂವು, ಬೆಂಕಿಯನ್ನು ಹೊರಸೂಸುವ, ಶಕ್ತಿಯೆಂಬ ಆಯುಧಗಳನ್ನು ಕೈಗಳಲ್ಲಿ ಹೊಂದಿದ್ದಾನೆ. ಕಿವಿಗಳಿಗೆ ಲೋಹದ ಕುಂಡಲಗಳನ್ನು ಹಾಕಿಕೊಂಡಿದ್ದಾನೆ. ಹವಳದ ಮಣಿಗಳ ಹಾರವನ್ನು ಅಲಂಕರಿಸಿಕೊಂಡಿದ್ದಾನೆ. **349-349A**

**(ಕೆಂಪುಬಣ್ಣ)**

150B/6 **ಛಂದೋಭಿಮಾನಿದೇವತೆಯಾದ ಅದಿತಿಯ ಧ್ಯಾನ**

**(ಶೈವಾಗಮದಲ್ಲಿ)**

ಮತ್ತೆ ಅಧಿದೇವತೆ ವಸುವಿನಂತೆ.

ಅದಿತಿಯು ಹಳದಿಬಣ್ಣದ ದೇಹವುಳ್ಳವಳು. ಸ್ರುಕ್, ಸ್ರುವ, ಜಪಮಣಿ, ಕಮಂಡಲುಗಳನ್ನು ಕೈಗಳಲ್ಲಿ ಹಿಡಿದಿದ್ದಾಳೆ. ಇವಳು ದೇವತೆಗಳ ತಾಯಿ. ಯಶಸ್ವಿನಿಯಾದ ಇವಳು ನನಗೆ ಶುಭವನ್ನು ಕೊಡತಕ್ಕವಳಾಗಲಿ. **350**

**(ಹಳದಿಬಣ್ಣ)**

151A/1 **ಜ್ಯೋತಿಷದ ಸ್ವರೂಪ**

**(ನೃಸಿಂಹಪ್ರಾಸಾದದಲ್ಲಿ)**

ಜ್ಯೋತಿಃಶಾಸ್ತ್ರದೇವನು ಬೆಕ್ಕಿನ ಮುಖವನ್ನು ಹೊಂದಿದ್ದಾನೆ. ಇಂದ್ರಗೋಪವೆಂಬ ಹುಳುವಿನಂತೆ (ಮಿಂಚುಹುಳುವಿನಂತೆ, ಮಳೆಗಾಲದಲ್ಲಿ ಹುಟ್ಟುವ ಒಂದು ಹುಳು) ಕೆಂಪಾದ ದೇಹಕಾಂತಿ-ಯುಳ್ಳವನಾಗಿದ್ದಾನೆ. ಇವನು ಶುಭವುಳ್ಳವನು. ಬಲಗೈಯಿಂದ ಜಪಮಣಿಯನ್ನು ಎಡಗೈಯಿಂದ ದಾಸವಾಳದ ಹೂವನ್ನು ಹಿಡಿದಿದ್ದಾನೆ. **351**

**(ಕೆಂಪುಬಣ್ಣ)**

151A/2 **ಜ್ಯೋತಿಷದ ಅಭಿಮಾನಿದೇವತೆ ಹರಿಯ ಧ್ಯಾನ**

**(ಪಾಂಚರಾತ್ರಾಗಮದಲ್ಲಿ)**

ಕೇಶವಾದಿ ಇಪ್ಪತ್ತನಾಲ್ಕು ಜನರ ಮಧ್ಯದಲ್ಲಿರುವ ಹರಿಯಂತೆ.

ಜ್ಯೋತಿಷದ ಅಭಿಮಾನಿದೇವತೆ ಹರಿ. ಇವನು ಚಿನ್ನದಂತೆ ಹೊಂಬಣ್ಣದ ದೇಹವುಳ್ಳವನು. ಶಂಖ, ಚಕ್ರ, ಗದೆ, ಕಮಲಗಳನ್ನು ನಾಲ್ಕು ಕೈಗಳಿಂದ ಹಿಡಿದಿದ್ದಾನೆ. ಇವನ ಬಲಗಡೆಯ ಕೆಳಗಿನ ಕೈನಲ್ಲಿ ಶಂಖ, ಬಲಗಡೆಯ ಮೇಲಿನ ಕೈನಲ್ಲಿ ಚಕ್ರ, ಎಡಗಡೆಯ ಮೇಲಿನ ಕೈನಲ್ಲಿ ಕಮಲ ಮತ್ತು ಎಡಗಡೆಯ ಕೆಳಗಿನ ಕೈನಲ್ಲಿ ಗದೆಗಳು ಇವೆ. 352-352A

(ಚಿನ್ನದ ಬಣ್ಣ)

151A/3 ಮೀಮಾಂಸಾಶಾಸ್ತ್ರದ ಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ಮೀಮಾಂಸಾಶಾಸ್ತ್ರದೇವನು ಶ್ರೇಷ್ಠನಾಗಿದ್ದಾನೆ. ಚಂದ್ರ, ಕೀರ್ತಿ ಮತ್ತು ಸುಣ್ಣಗಳಂತೆ ಬೆಳ್ಳಗಿದ್ದಾನೆ. ಇವನಿಗೆ ಎರಡು ಕೈಗಳಿವೆ. ಬಲಗೈಯಿಂದ ಜಪಮಾಲೆಯನ್ನು ಎಡಗೈಯಿಂದ ಅಮೃತ ತುಂಬಿದ ಕಲಶವನ್ನು ಹಿಡಿದಿದ್ದಾನೆ. 353

(ಬಿಳಿಯಬಣ್ಣ)

151A/4 ಮೀಮಾಂಸಾಶಾಸ್ತ್ರದ ಅಭಿಮಾನಿದೇವತೆಯಾದ ಸೋಮನ ಧ್ಯಾನ

(ಶೈವಾಗಮದಲ್ಲಿ)

ನವಗ್ರಹದಲ್ಲಿರುವ ಚಂದ್ರನಂತೆ.

ಸೋಮದೇವನು ಬಿಳಿಯ ಬಣ್ಣದವನು. ಬಿಳಿಯ ಬಟ್ಟೆಗಳನ್ನು ಧರಿಸಿದ್ದಾನೆ. ಇವನ ರಥಕ್ಕೆ ಹತ್ತು ಕುದುರೆಗಳಿವೆ. ಬಿಳಿಯ ಬಣ್ಣದ ಆಭರಣಗಳನ್ನು ತೊಟ್ಟಿದ್ದಾನೆ. ಇವನಿಗೆ ಎರಡು ಕೈಗಳಿವೆ. ಒಂದು ಕೈಯಿಂದ ಗದೆಯನ್ನು, ಮತ್ತೊಂದು ಕೈಯಿಂದ ವರದಮುದ್ರೆಯನ್ನು ಹಿಡಿದಿದ್ದಾನೆ. ತಲೆಯಲ್ಲಿ ಅರ್ಧಚಂದ್ರನನ್ನು ಧರಿಸಿದ್ದಾನೆ. 354

(ಬಿಳಿಯ ಬಣ್ಣ)

151A/5 ನ್ಯಾಯಶಾಸ್ತ್ರದ ಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ನ್ಯಾಯಶಾಸ್ತ್ರದೇವನ ದೇಹವು ಅಗಸೇಹೂವಿನ ಬಣ್ಣದಂತೆ ನಸುನೀಲಿಯಾಗಿದೆ ಎಂದು ಬಲ್ಲವನು ತಿಳಿಯಬೇಕು. ಇವನಿಗೆ ಸಿಂಹದ ಮುಖ. ಎರಡು ಕೈಗಳಿವೆ. ಬಲಗೈಯಿಂದ ಸೂತ್ರವನ್ನು (ಹಗ್ಗವನ್ನು) ಎಡಗೈಯಿಂದ ಧ್ವಜವನ್ನು ಹಿಡಿದಿದ್ದಾನೆ. 355

(ನೀಲಿಯ ಬಣ್ಣ)

151A/6 ## ನ್ಯಾಯಶಾಸ್ತ್ರದ ಅಭಿಮಾನಿದೇವತೆಯಾದ ವಾಯುವಿನ ಧ್ಯಾನ

(ಶೈವಾಗಮದಲ್ಲಿ)

ಪಂಚಭೂತಗಳಲ್ಲಿನ ವಾಯುವಿನಂತೆ.

ಓಡುತ್ತಿರುವ ಜಿಂಕೆಯನ್ನೇರಿ ಕುಳಿತಿರುವ, ಎರಡು ಕೈಗಳುಳ್ಳ, ಧ್ವಜಧಾರಿಯಾದ, ವರದಮುದ್ರೆ ಮತ್ತು ದಾನಮುದ್ರೆಗಳನ್ನು ಎರಡು ಕೈಗಳಲ್ಲಿ ಉಳ್ಳ, ಧೂಮ್ರಬಣ್ಣದ (ಕಪ್ಪು-ಕೆಂಪು ಮಿಶ್ರವಾದ) ದೇಹವುಳ್ಳ, ವಾಯುವನ್ನು ನಾನು ಭಜಿಸುತ್ತೇನೆ. **356**

(ಕೆಂಪು-ಕೆಂಪುಬೆರೆತ ಬಣ್ಣ)

151B/1 ## ಧರ್ಮಶಾಸ್ತ್ರದ ಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ಧರ್ಮಶಾಸ್ತ್ರದೇವನು ಬಿಳಿಯ ಬಣ್ಣದವನು. ಶಾಂತರೂಪನು. ಮನೋಹರವಾದ ಮುಖವುಳ್ಳವನು. ದರ್ಭೆಯ ಆಸನವುಳ್ಳವನು. ಬಲಗೈಯಿಂದ ಮುತ್ತಿನ ಮಣಿಗಳಿಂದಾದ ಜಪಮಾಲೆಯನ್ನು ಎಡಗೈಯಿಂದ ತಕ್ಕಡಿಯನ್ನು ಹಿಡಿದಿದ್ದಾನೆ. **357**

(ಬಿಳಿಯ ಬಣ್ಣ)

151B/2 ## ಧರ್ಮಶಾಸ್ತ್ರದ ಅಭಿಮಾನಿದೇವತೆಯಾದ ಧರ್ಮಪುರುಷನ ಧ್ಯಾನ

(ಹೇಮಾದ್ರಿಯ ದಾನಕಾಂಡದಲ್ಲಿ)

ಧರ್ಮಪುರುಷನನ್ನು ನಾಲ್ಕು ಮುಖಗಳು, ನಾಲ್ಕು ಕೈಗಳು, ನಾಲ್ಕು ಕಾಲುಗಳಿರುವಂತೆ ಬಲ್ಲವನು ಚಿತ್ರಿಸಬೇಕು. ಬಿಳಯ ಬಟ್ಟೆಗಳನ್ನು ತೊಟ್ಟಿರುವಂತೆ, ಎಲ್ಲ ಬಗೆಯ ಆಭರಣಗಳನ್ನು ಧರಿಸಿರುವಂತೆ ಚಿತ್ರಿಸಬೇಕು. ಅವನ ದೇಹದ ಬಣ್ಣವು ಬಿಳಿಯಾಗಿರಬೇಕು. ಬಲಗಡೆಯ ಕೈಗಳಲ್ಲಿ ಅಕ್ಷಮಾಲೆ, ವರದಮುದ್ರೆಗಳು, ಎಡದ ಕೈಗಳಲ್ಲಿ ಪುಸ್ತಕ ಮತ್ತು ಅಭಯಮುದ್ರೆಗಳಿರಬೇಕು. **358-358A**

(ಬಿಳಿಯ ಬಣ್ಣ)

151B/3 ## ಪುರಾಣದ ಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ಪುರಾಣಪುರುಷನು ಸಂಪಿಗೆಯ ಹೂವಿನಂತೆ ದೇಹದ ಬಣ್ಣವುಳ್ಳವನಾಗಿರಬೇಕು, ಗಿಳಿಯ ಮುಖವಿರಬೇಕು. ದಪ್ಪಹೊಟ್ಟೆಯುಳ್ಳವನಾಗಿರಬೇಕು. ಅಕ್ಷಮಾಲೆ ಮತ್ತು ಅಭಯಮುದ್ರೆಯನ್ನು

ಕೈಗಳಿಂದ ಹಿಡಿದಿರಬೇಕು, ನಾನಾರೀತಿಯ ಆಭರಣಗಳಿಂದ ಅಲಂಕೃತನಾಗಿರಬೇಕು ಎಂದು ತಿಳಿಯಬೇಕು. 359

(ಸಂಪಿಗೆಹೂವಿನ ಬಣ್ಣ)

151B/4 ಪುರಾಣಗಳ ಅಭಿಮಾನಿದೇವತೆ ಸ್ವಾಯಂಭುವಮನುವಿನ ಧ್ಯಾನ

(ಶೈವಾಗಮದ ಸಿದ್ಧಾಂತಶೇಖರದಲ್ಲಿ)

ಸ್ವಾಯಂಭುವಮನುವಿನಂತೆ ಇವನ ಸ್ವರೂಪವಿದೆ.

ಮೊದಲನೆಯ ಸ್ವಾಯಂಭುವಮನುವು ಬ್ರಹ್ಮನ ಮಗನೆಂದು ಸ್ಮೃತವಾಗಿದೆ. 359A

(ಬಿಳಿಯ ಬಣ್ಣ)

151B/5 ಇತಿಹಾಸದ ಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ಇತಿಹಾಸದೇವನ ದೇಹವು ದರ್ಭೆಯ ಬಣ್ಣದಂತೆ ಇದೆ. ಇವನಿಗೆ ಹಂದಿಯ ಮುಖ. ದೊಡ್ಡ ಹೊಟ್ಟೆ ಇದೆ. ಜಪಮಾಲೆ ಮತ್ತು ಘಟವನ್ನು (ಬಿಂದಿಗೆಯನ್ನು) ಎರಡು ಕೈಗಳಿಂದ ಹಿಡಿದಿದ್ದಾನೆ. ಕಮಲಗಳ ಆವರಣಗಳಿಂದ ಕೂಡಿದ್ದಾನೆ. 360

(ಗರಿಕೆಯಂತಹ ಶ್ಯಾಮವರ್ಣ (ನೀಲಿಯ ಬಣ್ಣ)

151B/6 ಇತಿಹಾಸದ ಅಭಿಮಾನಿದೇವತೆಯಾದ ಪ್ರಜಾಪತಿಯ ಧ್ಯಾನ

(ನೃಸಿಂಹಪ್ರಾಸಾದದಲ್ಲಿ)

ಐದು ಜನ ಬ್ರಹ್ಮರ ಮಧ್ಯದಲ್ಲಿರುವ ಪ್ರಜಾಪತಿ ಬ್ರಹ್ಮನಂತೆ ಇವನ ಸ್ವರೂಪ.

ಈ ಪ್ರಜಾಪತಿದೇವನು ಹಂಸವಾಹನದ ಮೇಲೆ ಕುಳಿತು ಹೋಗುತ್ತಿರುವಂತೆ ಚಿತ್ರಿಸಬೇಕು. ಆದರೆ ಇವನಿಗೆ ನಾಲ್ಕು ಮುಖಗಳನ್ನು ಚಿತ್ರಿಸಬಾರದು. ಇವನ ಎಡತೊಡೆಯ ಮೇಲೆ ಶುಭರೂಪಳಾದ ಸಾವಿತ್ರೀದೇವಿಯು ಕುಳಿತಿರಬೇಕು. ಇನ್ನು ಉಳಿದ ಎಲ್ಲ ರೂಪಗಳನ್ನು ಬ್ರಹ್ಮನಿಗೆ ಹೇಳಿದಂತೆ ಪ್ರಜಾಪತಿಗೂ ಇರುವಂತೆ ಚಿತ್ರಿಸಬೇಕು. 361-361A

(ಪಾಟಲವರ್ಣ - ಪಾದರಿಹೂವಿನಂತೆ ನಸುಗೆಂಪು ಬಣ್ಣ)

152A/1 ಭರತಶಾಸ್ತ್ರದ ಸ್ವರೂಪ

(ನೃಸಿಂಹಪ್ರಾಸಾದದಲ್ಲಿ)

ಭರತಶಾಸ್ತ್ರದೇವನನ್ನು ನೃತ್ತಶಾಸ್ತ್ರದೇವನೆಂದು ಅರಿಯಬೇಕು. ಇವನಿಗೆ ಜಿಂಕೆಯ ಮುಖ. ಇವನು

ಜಟೆಯನ್ನು ಕಟ್ಟಿದ್ದಾನೆ. ಜಪಸೂತ್ರ, ತ್ರಿಶೂಲಗಳನ್ನು ಕೈಗಳಿಂದ ಹಿಡಿದಿದ್ದಾನೆ. ಇವನಿಗೆ ಮೂರು ಕಣ್ಣುಗಳು. 362

(ಔಚಿತ್ಯಾನುಸಾರ ಬಿಳಿಯಬಣ್ಣ)

152A/2 **ಭರತಶಾಸ್ತ್ರದ ಅಭಿಮಾನಿದೇವತೆಯಾದ ಉಮಾಮಹೇಶ್ವರನ ಧ್ಯಾನ**

**(ಕಾರಣಾಗಮದಲ್ಲಿ)**

ದೇವನಾದ ಮಹೇಶ್ವರನು ಬಿಳಿಯಬಣ್ಣದ ಸುಖಾಸನದಲ್ಲಿ ಉಮಾದೇವಿಯೊಡನೆ ಕುಳಿತಿದ್ದಾನೆ. ಜಿಂಕೆಯ ಮರಿ, ಘನವಾದ ಉಳಿ, ವರದಮುದ್ರೆ ಮತ್ತು ಅಭಯಮುದ್ರೆಗಳನ್ನು ತನ್ನ ನಾಲ್ಕು ಕೈಗಳಿಂದ ಹಿಡಿದಿದ್ದಾನೆ. ಪ್ರಸನ್ನವದನನಾದ ಇವನ ಕಣ್ಣುಗಳು ಕನ್ನೈದಿಲೆ ಹೂವುಗಳಂತೆ ಸುಂದರವಾಗಿವೆ. ಉಮಾಸಹಿತನಾಗಿ ಈ ದೇವನು ವರಗಳನ್ನು ಕೊಡುವವನಾಗಿದ್ದಾನೆ. ಇದು ಉಮಾಮಹೇಶ್ವರನ ಸುಂದರವಾದ ಸ್ವರೂಪವಾಗಿದೆ. 363

(ಬಿಳಿಯಬಣ್ಣ)

152A/3 **ಪಾಂಚರಾತ್ರಶಾಸ್ತ್ರದ ಸ್ವರೂಪ**

**(ನೃಸಿಂಹಪ್ರಾಸಾದದಲ್ಲಿ)**

ಪಾಂಚರಾತ್ರಶಾಸ್ತ್ರವೆಂಬ ದೇವನ ಶರೀರವು ಲಾವಣ್ಯಮಯವಾಗಿದೆ. ಎತ್ತು ಇವನ ವಾಹನ. ಜಪಮಾಲೆ ಮತ್ತು ನೇಗಿಲನ್ನು ಕೈಗಳಿಂದ ಹಿಡಿದಿದ್ದಾನೆ. ವನಮಾಲೆಗಳಿಂದ ಭೂಷಿತನಾಗಿದ್ದಾನೆ. ಇಂತಹ ದೇವನನ್ನು ನಾನು ನಮಿಸುತ್ತೇನೆ. 364

(ಬಿಳಿಯಬಣ್ಣ)

152A/4 **ಪಾಂಚರಾತ್ರಶಾಸ್ತ್ರದ ಅಭಿಮಾನಿದೇವತೆಯಾದ ಸಂಕರ್ಷಣನ ಧ್ಯಾನ**

**(ಭಟ್ಟಭಾಸ್ಕರೀಯದಲ್ಲಿ)**

ವ್ಯೂಹಮೂರ್ತಿಯಂತೆ.

ಸಂಕರ್ಷಣಪ್ರಭುವನ್ನು ವಾಸುದೇವನ ಸ್ವರೂಪದಂತೆ ಚಿತ್ರಿಸಬೇಕು. ಅವನ ಶರೀರವು ಬಿಳಿಯ ಬಣ್ಣದಿಂದ ಕೂಡಿರಬೇಕು. ನೀಲಿಯ ವಸ್ತ್ರಗಳನ್ನು ತೊಟ್ಟಿರುವ ಹಾಗೆ ಚಿತ್ರಿಸಬೇಕು. ಇವನು ಯದುಶ್ರೇಷ್ಠನಾಗಿದ್ದಾನೆ. ಗದೆ ಹಿಡಿದಿರುವ ಕೈನಲ್ಲಿ ಒನಕೆ ಇರಬೇಕು. ಚಕ್ರವಿರುವ ಕೈನಲ್ಲಿ ನೇಗಿಲು ಇರಬೇಕು. ಇಂತಹ ದೇವನನ್ನು ಸ್ತೋತ್ರ ಮಾಡುತ್ತೇನೆ. 365-365A

| | |
|---|---|
| ಬಲಗಡೆಯ ಮೇಲಿನ ಕೈನಲ್ಲಿ | ಶಂಖ |
| ಬಲಗಡೆಯ ಕೆಳಕೈನಲ್ಲಿ | ಒನಕೆ |
| ಎಡಗಡೆಯ ಕೆಳಗಿನ ಕೈನಲ್ಲಿ | ಶಾರ್ಙ್ಗವೆಂಬ ಬಿಲ್ಲು |
| ಎಡಗಡೆಯ ಮೇಲಿನ ಕೈನಲ್ಲಿ | ನೇಗಿಲುಗಳು ಇರಬೇಕು. |

(ಬಿಳಿಯಬಣ್ಣ)

152A/5 **ಪಾಶುಪತಶಾಸ್ತ್ರದ ಸ್ವರೂಪ**

(ನೃಸಿಂಹಪ್ರಾಸಾದದಲ್ಲಿ)

ಪಾಶುಪತಶಾಸ್ತ್ರದೇವನು ಪರಿಶುಭ್ರದೇಹವುಳ್ಳವನು. ಇವನಿಗೆ ವ್ಯಾಳದ ಮುಖ (ಹುಲಿಯ ಮುಖ). ತೆಳುವಾದ ಹೊಟ್ಟೆ. ಸೂತ್ರ ಮತ್ತು ಪಾತ್ರೆಯನ್ನು ಎರಡು ಕೈಗಳಿಂದ ಹಿಡಿದಿದ್ದಾನೆ. ಹುಲಿಯ ಚರ್ಮವನ್ನು ಮೈಗೆ ಹೊದ್ದುಕೊಂಡಿದ್ದಾನೆ. (ಇಂತಹ ದೇವನನ್ನು ಸ್ತುತಿಸುತ್ತೇನೆ.) 366

(ಶುಭ್ರವಾದ ಬಣ್ಣ)

152A/6 **ಪಾಶುಪತಶಾಸ್ತ್ರದ ಅಭಿಮಾನೀದೇವತೆಯಾದ ರುದ್ರನ ಧ್ಯಾನ**

(ಮಯೂಖದಲ್ಲಿ)

ಸೂರ್ಯಪ್ರತ್ಯಧಿದೇವತೆಯಂತೆ.

ಇವನಿಗೆ ಐದು ಮುಖಗಳು ಇವೆ. ಪ್ರತಿಯೊಂದು ಮುಖದಲ್ಲೂ ಮೂರು ಮೂರು ಕಣ್ಣುಗಳಿವೆ. ಎತ್ತಿನ ಮೇಲೆ ಕುಳಿತಿದ್ದಾನೆ. ಕಪಾಲ, ಶೂಲ, ಖಟ್ವಾಂಗ ಮತ್ತು ಪಿನಾಕವೆಂಬ ಬಿಲ್ಲು ಇವುಗಳನ್ನು ಕೈಗಳಿಂದ ಹಿಡಿದಿದ್ದಾನೆ. ಚಂದ್ರನಂತೆ ಮುಖವುಳ್ಳವನು. ಮಂಗಳಕರನು. (ಇಂತಹ ದೇವನನ್ನು ನಮಿಸುತ್ತೇನೆ.) 367

(ಔಚಿತ್ಯಾನುಸಾರ ಬಿಳಿಯಬಣ್ಣ)

152B/1 **ಪಾತಂಜಲಶಾಸ್ತ್ರದ ಸ್ವರೂಪ**

(ನೃಸಿಂಹಪ್ರಾಸಾದದಲ್ಲಿ)

ಪಾತಂಜಲವೆಂಬ ಹೆಸರುಳ್ಳ ದೇವನ ಶರೀರವು ಕೆಂಪಾಗಿದೆ. ಇವನಿಗೆ ಹಾವಿನ ಮುಖ. ಇವನು ಪ್ರಖರವಾದ ತೇಜಸ್ಸುಳ್ಳವನು. ಜಪಮಾಲೆ ಮತ್ತು ಪತಾಕೆಯನ್ನು ಕೈಗಳಿಂದ ಹಿಡಿದಿದ್ದಾನೆ. ಕಿವಿಗಳಲ್ಲಿ ಕುಂಡಲಗಳಿವೆ. 368

(ಕೆಂಪುಬಣ್ಣ)

**152B/2** **ಪಾತಂಜಲಶಾಸ್ತ್ರದ ಅಭಿಮಾನಿದೇವತೆಯಾದ ಅನಂತನ ಧ್ಯಾನ**

**(ಅನಂತವ್ರತಕಲ್ಪದಲ್ಲಿ)**

ಅನಂತಕಲ್ಪಸ್ಥಾನದಲ್ಲಿರುವ ಅನಂತನಂತೆ.

ಹೊಸದಾದ ಮಾವಿನ ಚಿಗುರಿನಂತೆ ದೇಹಕಾಂತಿಯುಳ್ಳವನಾದ, (ಗೋರೋಚನದಂತೆ ಕೆಂಪು ಬೆರೆತ) ಪಿಂಗವರ್ಣದ ಹುಬ್ಬು, ಗಡ್ಡ ಮತ್ತು ಕಣ್ಣುಗಳನ್ನುಳ್ಳ, ಬಲಗಡೆಯ ಮೇಲಿನ ಕೈನಿಂದ ಕಮಲವನ್ನು, ಕೆಳಗಿನ ಕೈನಿಂದ ಶಂಖವನ್ನು, ಎಡಗಡೆಯ ಮೇಲಿನ ಕೈನಿಂದ ಚಕ್ರವನ್ನು, ಕೆಳಗಿನ ಕೈನಿಂದ ಗದೆಯನ್ನು ಹಿಡಿದಿರುವ, ಪುಂಡರೀಕಾಕ್ಷನಾದ (ಕಮಲದಂತೆ ವಿಶಾಲವಾದ, ಸುಂದರವಾದ ಕಣ್ಣುಗಳುಳ್ಳ) ಏಳು ಹೆಡೆಗಳಿಂದ ಕೂಡಿರುವ ಅನಂತನನ್ನು ನಾನು ಭಜಿಸುತ್ತೇನೆ. **369-370**

**(ಗೋಮೂತ್ರದಬಣ್ಣ)**

**152B/3** **ಸಾಂಖ್ಯಶಾಸ್ತ್ರದ ಸ್ವರೂಪ**

**(ನೃಸಿಂಹಪ್ರಾಸಾದದಲ್ಲಿ)**

ಸಾಂಖ್ಯಶಾಸ್ತ್ರದೇವನು ಕಪಿಲಬಣ್ಣದ ಶರೀರವುಳ್ಳವನು (ನಸುಗೆಂಪು). ಬಭ್ರುವರ್ಣದ (ಗೋರೋಚನದಂತೆ ಕೆಂಪುಬೆರೆತ ಹೊಂಬಣ್ಣ) ಮುಖವುಳ್ಳವನು. ಉಜ್ವಲವಾದ ಕರ್ಣಕುಂಡಲಗಳನ್ನು ಕಿವಿಗೆ ಹಾಕಿಕೊಂಡಿದ್ದಾನೆ. ಉದ್ದವಾದ ಕೆಂಪುದಾಸವಾಳದ ಮಂತ್ರದ ಕೋಲನ್ನು ಒಂದು ಕೈನಿಂದ ಹಿಡಿದಿದ್ದಾನೆ. ಇನ್ನೊಂದು ಕೈನಲ್ಲಿ ಜಪಮಾಲೆಯನ್ನು ಹಿಡಿದು, ತೋರುಬೆರಳಿನ ತುದಿಯಲ್ಲಿ ಜಪಮಣಿಯನ್ನು ಹೆಬ್ಬೆರಳಿನ ಉಗುರಿನಿಂದ ತಳ್ಳುತ್ತಾ ಜಪಿಸುತ್ತಿದ್ದಾನೆ. **371**

**(ನಸುಗೆಂಪುಬಣ್ಣ)**

**152B/4** **ಸಾಂಖ್ಯಶಾಸ್ತ್ರದ ಅಭಿಮಾನಿದೇವತೆಯಾದ ಕಪಿಲಋಷಿಯ ಧ್ಯಾನ**

**(ಪಾಂಚರಾತ್ರದ ಮಂತ್ರಾಧ್ಯಾಯದಲ್ಲಿ)**

ಉದಿಸುತ್ತಿರುವ ಸೂರ್ಯನಿಗೆ ಸಮಾನವಾದ ಹೊಳೆಯುವ ದೇಹವುಳ್ಳ, ಸಹಸ್ರಸೂರ್ಯರಿಗೆ ಸಮಾನವಾದ ವಿಸ್ತೃತವಾದ ಕಿರಣಗಳಿಂದ ಸಕಲಲೋಕವನ್ನೂ ಹೊಂದಿರುವ, ಜ್ಞಾನಮುದ್ರೆ ಮತ್ತು ಅಭಯಮುದ್ರೆಗಳನ್ನು ಕೈಗಳಿಂದ ಹಿಡಿದು, ಬ್ರಹ್ಮಾದಿದೇವಸಮೂಹಕ್ಕೆ ಉಪದೇಶ ಮಾಡುತ್ತಿರುವ ಮಂಗಳರೂಪನಾದ ಕಪಿಲಮುನಿಯನ್ನು (ಭಕ್ತಿಪೂರ್ವಕವಾಗಿ) ಧ್ಯಾನಿಸಬೇಕು. **372**

**(ಕೆಂಪುಬಣ್ಣ)**

152B

## ಈಗ ಅರವತ್ತನಾಲ್ಕು ಕಲೆಗಳ ಹೆಸರುಗಳು

(ಶಿವತತ್ತ್ವರತ್ನಾಕರದಲ್ಲಿ)

ಅರವತ್ತನಾಲ್ಕು ಕಲೆಗಳಲ್ಲಿ ಬೇರೆ ವಿಚಾರಗಳೂ ಮೂಲವಾಗುತ್ತವೆ. ಆ ಅರವತ್ತನಾಲ್ಕು ಕಲೆಗಳನ್ನು ಈಗ ಹೇಳುತ್ತೇನೆ. ಏಕಾಗ್ರಮನಸ್ಸಿನಿಂದ ಕೇಳು. 373

ಇತಿಹಾಸ, ಆಗಮ, ಕಾವ್ಯ, ಅಲಂಕಾರ, ನಾಟಕ, ಹಾಡುಗಾರಿಕೆ, ಕವಿತಾಸಾಮರ್ಥ್ಯ, ತಿಳಿಯಲಸಾಧ್ಯವಾದ ಕಾಮಶಾಸ್ತ್ರ, 374

ಪ್ರಾದೇಶಿಕಭಾಷಾಜ್ಞಾನ, ಲಿಪಿಜ್ಞಾನ, ಲಿಪಿಕರ್ಮ, ವಾಚನ, ಗಣಿತ, ವ್ಯವಹಾರ, ಸ್ವರಶಾಸ್ತ್ರ, ಶಕುನಶಾಸ್ತ್ರ, 375

ಹಸ್ತಸಾಮುದ್ರಕಶಾಸ್ತ್ರ, ರತ್ನಶಾಸ್ತ್ರ, ಗಜಶಾಸ್ತ್ರಕೌಶಲ, ಅಶ್ವಶಾಸ್ತ್ರಕೌಶಲ, ರಥಶಾಸ್ತ್ರಕೌಶಲ, ಮಲ್ಲಯುದ್ಧ, ಸೂಪಶಾಸ್ತ್ರ, ಅವಧಾನಕಲೆ, ದೋಹಲ, 376

ಗಂಧವಾದ, ಧಾತುವಾದ, ಗಣಿವಿಜ್ಞಾನ, ರಸವಾದವಿಜ್ಞಾನ, ಪಕ್ಷಿಗಳ ಭಾಷಾಪರಿಜ್ಞಾನ, ಖಡ್ಗಸ್ತಂಭ, ಜಲಸ್ತಂಭ, 377

ವಾಕ್ಸ್ತಂಭನ, ವಯಸ್ಸ್ತಂಭನ, ವಶೀಕರಣದಿಂದ ಮೋಹನ, ವಿದ್ವೇಷಣ, ಉಚ್ಚಾಟನ, ಮಾರಣ, ಕಾಲವಂಚನ 378

ಪರಕಾಯಪ್ರವೇಶ, ಪಾದುಕಾಸಿದ್ಧಿ, ಮಹೇಂದ್ರಜಾಲವಿದ್ಯೆ, ವಾಕ್ಸಿದ್ಧಿ, ಅಗ್ನಿಸ್ತಂಭ, ಇಂದ್ರಜಾಲ, 379

ಅಂಜನಸಿದ್ಧಿ, ಬೇರೆಯವರ ಕಣ್ಣಿಗೆ ಕಾಣದಂತೆ ವಂಚಿಸುವಿಕೆ, ಸ್ವರವಂಚನ, ಮಣಿ-ಮಂತ್ರ-ಔಷಧಾದಿಗಳ ಸಿದ್ಧಿ, ಕಳ್ಳತನ, 380

153A ಚಿತ್ರಕರ್ಮ, ಲೋಹಕರ್ಮ, ಅಶ್ಮಕರ್ಮ, ದಾರುಕರ್ಮ, ವೇಣುಕರ್ಮ, ಚರ್ಮಕರ್ಮ, ವಸ್ತ್ರಕರ್ಮ, ಬೇಟೆಯಾಡುವುದು, ಘಟಿಕಾಸಿದ್ಧಿ, ಅದೃಶ್ಯಕರಣ, 381

ವಾಣಿಜ್ಯ, ಪಶುಪಾಲನೆ, ವ್ಯವಸಾಯ (ಕೃಷಿಕರ್ಮ), ಆಸವಕರ್ಮ (ಮದ್ಯತಯಾರಿಕೆ), ಪಕ್ಷಿಗಳು, ಕೋಳಿಗಳು, ಕುರಿಗಳು ಮೊದಲಾದವುಗಳನ್ನು ಜಗಳವಾಡುವಂತೆ ಮಾಡುವ ಚತುರತೆ - ಎಂಬುದಾಗಿ ವಿದ್ವಾಂಸರಿಂದ ಈ ಅರವತ್ತನಾಲ್ಕು ಕಲೆಗಳು ಪರಿಗಣಿತವಾಗಿವೆ. 382-382A

## ಪ್ರಭುಶಕ್ತಿ-ಮಂತ್ರಶಕ್ತಿ-ಉತ್ಸಾಹಶಕ್ತಿಗಳೆಂಬ ಶಕ್ತಿತ್ರಯಗಳ ಧ್ಯಾನ

(ಕಾರಣಾಗಮದಲ್ಲಿ)

## ಉಪಾಯಚತುಷ್ಟಯಗಳ ಧ್ಯಾನ

(ಕಾರಣಾಗಮದಲ್ಲಿ)

ಅವುಗಳಲ್ಲಿ

153A/1 **ಪ್ರಭುಶಕ್ತಿಯ ಧ್ಯಾನ**

**(ಕಾರಣಾಗಮದಲ್ಲಿ)**

ಪ್ರಭುಶಕ್ತಿಯು ಸ್ತ್ರೀದೇವತೆ. ಇವಳ ಹೆಸರು ಪ್ರಭಾವಾ ಎಂದು. ಪಾದರಿಯ ಹೂವಿನಂತೆ ಕಂದು ಬಣ್ಣದ ಶರೀರವುಳ್ಳವಳು. ಉತ್ತಮವಾದ ಬಿಳಿಯ ಕುದುರೆಯು ಇವಳ ವಾಹನ. ಇವಳಿಗೆ ಹತ್ತು ತೋಳುಗಳು. ಬಲಗಡೆಯ ಐದು ಕೈಗಳಲ್ಲಿ ಕರಂಡಾಕಾರದ (ಪೆಟ್ಟಿಗೆಯಾಕಾರದ) ಮನೆ ಮನೆಗಳುಳ್ಳ ಕಿರೀಟ, ಚಕ್ರ, ಶಕ್ತ್ಯಾಯುಧ, ಖಡ್ಗ, ವರದಮುದ್ರೆ ಮತ್ತು ಅಂಕುಶಗಳನ್ನು, ಎಡಭಾಗದ ಐದು ಕೈಗಳಲ್ಲಿ ಶಂಖ, ಘಂಟೆ, ಖೇಟ (ಗುರಾಣಿ), ಅಭಯಮುದ್ರೆ, ಗದೆಗಳನ್ನು ಹಿಡಿದಿದ್ದಾಳೆ. ಇವಳು ಶತ್ರುಗಳನ್ನು ನಾಶ ಮಾಡುವವಳು. ಕುಸುಂಬೆಹೂವಿನಂತೆ (ಕುಂಕುಮಕೇಸರೀಹೂ) ಕೆಂಪಾದ ವಸ್ತ್ರಗಳನ್ನು ಧರಿಸಿದ್ದಾಳೆ. ಇವಳು ಮಾನವರಿಗೆ ಪೂಜನೀಯಳಾಗಿದ್ದಾಳೆ. ಇವಳು ಮನುಷ್ಯರಿಗೆ ಇಷ್ಟಾರ್ಥಗಳನ್ನು ಕೊಡುವವಳು. **383-385**

**(ಪಾದರಿ ಹೂವಿನಂತೆ ನಸುಗೆಂಪುಬಣ್ಣ)**

153A/2 **ಮಂತ್ರಶಕ್ತಿಯ ಧ್ಯಾನ**

**(ಕಾರಣಾಗಮದಲ್ಲಿ)**

ಮಂತ್ರಶಕ್ತಿದೇವತೆಯು ಚಿನ್ನದ ಬಣ್ಣದಂತೆ ಹೊಳೆಯುವ ಮುಖವುಳ್ಳವಳು. ಕಾಶ್ಮೀರಕುಂಕುಮದಂತೆ ದೇಹಕಾಂತಿಯುಳ್ಳವಳು. ತಲೆಯಲ್ಲಿ ಕಿರೀಟವನ್ನು ಧರಿಸಿದ್ದಾಳೆ. ಇವಳಿಗೆ ಹದಿನಾಲ್ಕು ಭುಜಗಳಿವೆ. ಬಲಗಡೆಯ ಏಳು ಕೈಗಳಲ್ಲಿ ಖಡ್ಗ, ಬಿಲ್ಲು, ಭೃಶುಂಡೀ ಎಂಬ ಆಯುಧ, ಶೂಲ, ಶಕ್ತ್ಯಾಯುಧ, ವರದಮುದ್ರೆ, ನೇಗಿಲುಗಳನ್ನು ಎಡಗಡೆಯ ಏಳು ಕೈಗಳಲ್ಲಿ, ಆವಾಪ (ಕೈಬಳೆ), ಬಾಣ, ದಂಡ, ಕತ್ತಿ, ಪಾಶ, ಅಭಯಮುದ್ರೆ, ಅಂಕುಶಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಹಿಡಿದಿದ್ದಾಳೆ. ಮದಿಸಿದ ಆನೆಯು ಇವಳ ವಾಹನ. ಚಿನ್ನದ ಕವಚವನ್ನು ತೊಟ್ಟಿದ್ದಾಳೆ. ಮಣಿಮಯವಾದ ಡಾಬನ್ನು ನಡುವಿಗೆ ಕಟ್ಟಿಕೊಂಡಿದ್ದಾಳೆ. **386-387A**

**(ಮುಖದಲ್ಲಿ ಚಿನ್ನದ ಬಣ್ಣ, ದೇಹದಲ್ಲಿ ಕೆಂಪುಬಣ್ಣ)**

153A/3 **ಉತ್ಸಾಹಶಕ್ತಿಯ ಧ್ಯಾನ**

**(ಕಾರಣಾಗಮದಲ್ಲಿ)**

ಉತ್ಸಾಹಶಕ್ತಿದೇವತೆಯು ಸಿಂದೂರವದನೆ (ಹಣೆಯಲ್ಲಿ ಕಾಶ್ಮೀರಕುಂಕುಮವನ್ನು ತಿಲಕವಾಗಿಟ್ಟು

ಕೊಂಡಿದ್ದಾಳೆ). ಶುಭರೂಪಳು, ಚಿನ್ನದ ಬಣ್ಣದ ದೇಹಕಾಂತಿಯುಳ್ಳವಳು. ನರ್ತಿಸುತ್ತಿರುವ ನವಿಲಿನ ಮೇಲೆ ಕುಳಿತಿದ್ದಾಳೆ. 388

ಇವಳಿಗೆ ಆರು ತೋಳುಗಳು. ಈ ತೋಳುಗಳಲ್ಲಿ ಕ್ರಮವಾಗಿ ಶಕ್ತ್ಯಾಯುಧ, ಬಿಲ್ಲು, ವರದಮುದ್ರೆ, ಪಾಶ, ಬಾಣ, ಅಭಯಮುದ್ರೆಗಳನ್ನು ಹೊಂದಿದ್ದಾಳೆ. ಚಿತ್ರವಸ್ತ್ರಗಳನ್ನು (ಬಣ್ಣಬಣ್ಣದ ಬಟ್ಟೆಗಳನ್ನು) ತೊಟ್ಟಿದ್ದಾಳೆ. ತಲೆಯಲ್ಲಿ ಹೊಳೆಯುವ ಕಿರೀಟವನ್ನು ಧರಿಸಿದ್ದಾಳೆ. ಈ ದೇವಿಯು ಉಪಾಯಗಳಿಂದ ಶತ್ರುಗಳನ್ನು ವಶಮಾಡಿಕೊಳ್ಳುತ್ತಾಳೆ. ಮುಗುಳ್ನಗೆಯಿಂದ ಕೂಡಿದ್ದಾಳೆ. 389-389A

(ಮುಖದಲ್ಲಿ ಸಿಂದೂರಬಣ್ಣ, ಶರೀರದಲ್ಲಿ ಚಿನ್ನದಬಣ್ಣ)

153A/4

## ಉಪಾಯಚತುಷ್ಟಯಧ್ಯಾನ

(ಕಾರಣಾಗಮದಲ್ಲಿ)

ಅವುಗಳಲ್ಲಿ

## ಸಾಮೋಪಾಯಧ್ಯಾನ

(ಕಾರಣಾಗಮದಲ್ಲಿ)

ಸಾಮೋಪಾಯದೇವಿಯು ಆನೆಯನ್ನೇರಿ ಕುಳಿತಿದ್ದಾಳೆ. ಮುಗುಳ್ನಗೆಯಿಂದ ಕೂಡಿದ ಮುಖ ಇವಳದು. ಚಿನ್ನದಂತೆ ಹೊಳೆಯುವ ಬಿಳಿಯ ಬಟ್ಟೆಗಳನ್ನು ಹಾಕಿಕೊಂಡಿದ್ದಾಳೆ. ಇವಳಿಗೆ ಆರು ಭುಜಗಳಿವೆ. ಈ ಆರು ಕೈಗಳಲ್ಲಿ ಕ್ರಮವಾಗಿ ಚಕ್ರ, ಶಂಖ, ವರದಮುದ್ರೆ, ಅಭಯಮುದ್ರೆ, ಬಿಲ್ಲು ಮತ್ತು ಬಾಣಗಳನ್ನು ಹಿಡಿದಿದ್ದಾಳೆ. ಸದಾಪೂಜಿತಳಾದ ಈ ದೇವಿಯು ಶತ್ರುಸಮೂಹವನ್ನು ವಶಮಾಡಿಕೊಳ್ಳುವ ಸಾಮರ್ಥ್ಯವುಳ್ಳವಳಾಗಿದ್ದಾಳೆ. 390-390A

(ಚಿನ್ನದಬಣ್ಣ)

153B/1

## ದಾನೋಪಾಯಧ್ಯಾನ

(ಕಾರಣಾಗಮದಲ್ಲಿ)

ದಾನೋಪಾಯದೇವನು ಪಲ್ಲಕ್ಕಿಯಲ್ಲಿ ಕುಳಿತಿದ್ದಾನೆ. ಸಂಧ್ಯಾಕಾಲದ ಕಾಂತಿಯಂತೆ ಕಾಂತಿಯುಳ್ಳವ-ನಾಗಿದ್ದಾನೆ. ಇವನಿಗೆ ಎಂಟು ಕೈಗಳಿದ್ದು, ಬಲದ ನಾಲ್ಕು ಕೈಗಳಿಂದ ಚಕ್ರ, ಪದ್ಮವೆಂಬ ನಿಧಿ, ವರದಮುದ್ರೆ, ಬಿಲ್ಲುಗಳನ್ನು, ಎಡದ ನಾಲ್ಕು ಕೈಗಳಿಂದ ಶಂಖವೆಂಬ ನಿಧಿ, ಭರ್ಜಿ, ಬಾಣ, ಅಭಯಮುದ್ರೆಗಳನ್ನು ಹಿಡಿದಿದ್ದಾನೆ. ಹಳದಿಯ ವಸ್ತ್ರಗಳನ್ನು ಧರಿಸಿದ್ದಾನೆ. ತಲೆಯಲ್ಲಿ ಕಿರೀಟವನ್ನು, ತೋಳುಗಳಲ್ಲಿ ಬಳೆಗಳನ್ನು ತೊಟ್ಟು, ಶೋಭಿತನಾಗಿದ್ದಾನೆ. ಇವನು ಎಲ್ಲರಿಂದಲೂ ಪೂಜಿತ-

ನಾಗಿದ್ದಾನೆ. ಇಂತಹ ದೇವನು ನಮಗೆ ಶುಭವನ್ನು ನೀಡಲಿ. ಶತ್ರುಮಂಡಲವನ್ನು ವಶಪಡಿಸಿ-ಕೊಳ್ಳಲಿ. **391-392A**

(ಕೆಂಪುಬಣ್ಣ)

153B/2

## ಭೇದೋಪಾಯಧ್ಯಾನ

(ಕಾರಣಾಗಮದಲ್ಲಿ)

ಇವನು ಪುರುಷದೇವತೆ. ಉತ್ತಮ ತರಕ್ಷುವು (ಕತ್ತೆಕಿರುಬ) ಇವನ ವಾಹನ. ಮೋಡದಂತೆ ನೀಲಕಾಂತಿಯುಳ್ಳವನು. ಇವನಿಗೆ ಭಯಂಕರವಾದ ಬಾಯಿ, ಕ್ರೂರವಾದ ಹಲ್ಲುಗಳು, ತೋಳುಗಳು ಇವೆ. ಬಲಗಡೆಯ ಐದು ಕೈಗಳಲ್ಲಿ ಚಕ್ರ, ಶೂಲ, ಬಿಲ್ಲು, ಪಾಶ ಮತ್ತು ವರದ ಮುದ್ರೆಗಳನ್ನು, ಎಡಗಡೆಯ ಐದು ಕೈಗಳಲ್ಲಿ ಶಂಖ, ದಂಡ, ಬಾಣ, ಖಟ್ವಾ ಎಂಬ ಆಯುಧ (ತುದಿಯಲ್ಲಿ ತಲೆ ಬುರುಡೆಯುಳ್ಳ ಗದೆ) ಮತ್ತು ಅಭಯಮುದ್ರೆಗಳನ್ನು ಧರಿಸಿದ್ದಾನೆ. ತಲೆಯಲ್ಲಿ ಹೊಳೆಯುವ ಕಿರೀಟವಿದೆ. ಉಜ್ವಲವಾದ ಕವಚವನ್ನು ಹಾಕಿಕೊಂಡಿದ್ದಾನೆ. ಶತ್ರುಗಳನ್ನು ಮರ್ದಿಸಿ ತನ್ನ ವಶದಲ್ಲಿ ಇಟ್ಟುಕೊಳ್ಳುವ ಸಾಮರ್ಥ್ಯವುಳ್ಳವನು. **393-394A**

(ಮೋಡದಂತೆ ಕಪ್ಪುಬಣ್ಣ)

153B/3

## ದಂಡೋಪಾಯಧ್ಯಾನ

(ಕಾರಣಾಗಮದಲ್ಲಿ)

ದಂಡೋಪಾಯದೇವನು ಪುರುಷದೇವತೆ. ದೇಹದ ಬಣ್ಣ ಕೆಂಪು. ಸಿಂಹಮುಖ. ಶವವಾಹನ. ಚಕ್ರ, ಶೂಲ, ಗದೆ, ದಂಡ, ಖಡ್ಗ, ಘಂಟೆ, ವರದಮುದ್ರೆ, ಬಿಲ್ಲು, ಚಾವಟಿ, ಅಂಕುಶ, ಬಾಣ, ಬೆಂಕಿ, ಗುರಾಣಿ, ಪಾಶ, ಅಭಯಮುದ್ರೆ, ವರದಮುದ್ರೆಗಳನ್ನು ತನ್ನ ಹದಿನಾರು ಕೈಗಳಿಂದ ಹಿಡಿದಿದ್ದಾನೆ. ನೀಲಿಯ ಮತ್ತು ಬಿಳಿಯ ಬಟ್ಟೆಗಳನ್ನು ಧರಿಸಿದ್ದಾನೆ. ಎಲ್ಲರಿಂದಲೂ ಪೂಜಿತನಾದ ಈ ದೇವನು ರಣದಲ್ಲಿ ಶತ್ರುಗಳನ್ನು ಮರ್ದನ ಮಾಡುವವನು. ಹಾಗಾಗಿ ಇವನು ಶತ್ರುಗಳನ್ನು ನಾಶಮಾಡಲಿ. **395-396A**

(ಕೆಂಪುಬಣ್ಣ)

153B/4

## ಧರ್ಮದೇವತೆಯ ಧ್ಯಾನ

(ದಾನಚಿಂತಾಮಣಿಯಲ್ಲಿ ಉದಾಹರಿಸಿದ ವಿಷ್ಣುಧರ್ಮೋತ್ತರದಲ್ಲಿ)

ಬಲ್ಲವರು ಈ ದೇವನಿಗೆ ನಾಲ್ಕು ಮುಖಗಳು, ನಾಲ್ಕು ಕೈಗಳು, ನಾಲ್ಕು ಪಾದಗಳು ಇರುವಂತೆ,

ಬಿಳಿಯ ಬಟ್ಟೆಗಳು ಇರುವಂತೆ ಚಿತ್ರಿಸಬೇಕು. ದೇಹವು ಬಿಳಿಯ ಬಣ್ಣದಿಂದಿರಬೇಕು. ಧರ್ಮಸ್ವರೂಪದವನಾಗಿರಬೇಕು. ಬಲಗೈಗಳಲ್ಲಿ ಜಪಮಾಲೆ, ವರದಮುದ್ರೆಯು, ಎಡಗೈಗಳಲ್ಲಿ ಪುಸ್ತಕ ಮತ್ತು ಅಭಯಮುದ್ರೆಯು ಇರುವಂತೆ ರಚಿಸಬೇಕು. 397-398

(ಬಿಳಿಯ ಬಣ್ಣ)

153B/5 ವಿಶ್ವಕರ್ಮನ ಧ್ಯಾನ

(ಹೇಮಾದ್ರಿಕಾಂಡದ ದಾನಖಂಡದಲ್ಲಿ)

ವಿಶ್ವಕರ್ಮನನ್ನು ಗಡ್ಡ ಇರುವಂತೆ, ಸೊಂಟಕ್ಕೆ ಡಾಬನ್ನು ಕಟ್ಟಿರುವಂತೆ, ಹಗ್ಗ ಮತ್ತು ಇಕ್ಕಳಗಳನ್ನು ಎರಡು ಕೈಗಳಲ್ಲಿ ಹಿಡಿದಿರುವಂತೆ, ತೇಜೋಮಯ ಶರೀರವುಳ್ಳವನಂತೆ, ಮಹಿಮಾಶಾಲಿಯಂತೆ ಚಿತ್ರಿಸಬೇಕು. 399

(ಔಚಿತ್ಯಾನುಸಾರ ಚಿನ್ನದ ಬಣ್ಣ)

153B/6 ಮಯಾಸುರನ ಸ್ವರೂಪ

(ಹೇಮಾದ್ರಿಯಲ್ಲಿ ಮತ್ತು ಶಿಲ್ಪಶಾಸ್ತ್ರದಲ್ಲಿ)

ಮಯಾಸುರನು ರಾಕ್ಷಸರ ಶಿಲ್ಪಿ (ಅಥವಾ ರಾಕ್ಷಸರ ಬಡಗಿ) ಇವನಿಗೆ ಗಡ್ಡವಿರಬೇಕು. ಭಯಂಕರವಾದ ಕೋರೆಹಲ್ಲುಗಳಿರಬೇಕು. ಕೈನಲ್ಲಿ ಮಾನದಂಡವಿರಬೇಕು. ನೀಲವರ್ಣದ ದೇಹವಿರಬೇಕು. ಎರಡು ಭುಜಗಳಿರಬೇಕು. ಹೀಗೆ ಚಿತ್ರಿಸಬೇಕು. 400

(ನೀಲಿಯಬಣ್ಣ)

154A/1 ಮಂತ್ರಶಾಸ್ತ್ರದ ಸ್ವರೂಪ

(ಅಷ್ಟಭೋಗನೀತಿಶಾಸ್ತ್ರದಲ್ಲಿ)

ಮಂತ್ರಶಾಸ್ತ್ರದೇವತೆಗೆ ಕಪಿಯ ಮುಖ. ಚಿನ್ನದಂತೆ ಕಾಂತಿಯುಳ್ಳವನು. ಇವನಿಗೆ ಎರಡು ಕಣ್ಣುಗಳಿವೆ. ದಂಡ, ಕತ್ತಿ, ಚರ್ಮ ಮತ್ತು ಶೂಲಗಳನ್ನು ನಾಲ್ಕು ಕೈಗಳಿಂದ ಹಿಡಿದಿದ್ದಾನೆ. ಕೆಂಪು ಬಟ್ಟೆಗಳನ್ನು ಧರಿಸಿದ್ದಾನೆ. 401

(ಚಿನ್ನದ ಬಣ್ಣ)

ಇವನ ಅಭಿಮಾನೀದೇವತೆ (ಮೂಲದಲ್ಲಿ ದೇವತೆಯ ಸ್ವರೂಪವನ್ನು ತಿಳಿಸಿಲ್ಲ).

154A/2 ಕಾವ್ಯಸ್ವರೂಪ

(ಅಷ್ಟಭೋಗನೀತಿಶಾಸ್ತ್ರದಲ್ಲಿ)

ಎಲೈ ಭಾಮಿನಿಯೇ ! ಕೇಳು, ಕಾವ್ಯಶಾಸ್ತ್ರದೇವನಿಗೆ ಸಂಪಿಗೆಯ ಹೂವಿನಂತೆ ದೇಹ-ಕಾಂತಿಯಿರುವಂತೆ,

ನಾಲ್ಕು ಕೈಗಳು ಇರುವಂತೆ, ಪುಸ್ತಕ, ಅಕ್ಷಮಾಲೆ, ಘಂಟೆ ಮತ್ತು ಕತ್ತಿಗಳನ್ನು ಹಿಡಿದಿರುವಂತೆ, ಪಲ್ಲಕ್ಕಿಯನ್ನು ಹತ್ತಿ ಕುಳಿತಿರುವಂತೆ, ಜ್ಞಾನಪ್ರದನಾಗಿರುವಂತೆ ಚಿತ್ರಿಸಬೇಕು. **402-402A**

(ಸಂಪಿಗೆಯ ಹೂವಿನ ಬಣ್ಣ)

ಇವನ ಅಭಿಮಾನಿದೇವತೆ ವಾಣಿ. ಇವಳನ್ನು ಸರಸ್ವತಿಯಂತೆ ನಾಲ್ಕು ತೋಳುಗಳು ಇರುವ ಹಾಗೆ ಚಿತ್ರಿಸಬೇಕು.

**154A/3**

### ಕಾಮಶಾಸ್ತ್ರಸ್ವರೂಪ

(ಅಷ್ಟಭೋಗನೀತಿಶಾಸ್ತ್ರದಲ್ಲಿ)

ಕಾಮಶಾಸ್ತ್ರದೇವನನ್ನು ಹಳದಿಬಣ್ಣದ ದೇಹಕಾಂತಿಯುಳ್ಳಂತೆ, ಕರ್ಣಕುಂಡಲಗಳಿಂದ ವಿರಾಜಿಸುವಂತೆ, ಸದಾ ಪಾಶ ಮತ್ತು ಕಬ್ಬಿನ ಜಲ್ಲೆಯನ್ನು ಎರಡು ಕೈಗಳಿಂದ ಹಿಡಿದಿರುವಂತೆ ಚಿತ್ರಿಸಬೇಕು. **403**

(ಹಳದಿಬಣ್ಣ)

ಇವನ ಅಭಿಮಾನಿದೇವತೆ ಕಾಮದೇವ. ಇವನು ಎರಡು ಭುಜಗಳುಳ್ಳ ಕಾಮನಂತೆ ಇರಬೇಕು.

**154A/4**

### ಶಕುನಶಾಸ್ತ್ರಸ್ವರೂಪ

(ಅಷ್ಟಭೋಗನೀತಿಶಾಸ್ತ್ರದಲ್ಲಿ)

ಶಕುನಶಾಸ್ತ್ರದೇವನು ಬಿಳಿಯ ಬಣ್ಣದ ದೇಹವುಳ್ಳವನು. ಆನೆಯ ಮುಖದವನೆಂದು ಹೇಳಲಾಗಿದೆ. ಚಾಕು ಮತ್ತು ಕಬ್ಬಿನ ಜಲ್ಲೆಗಳನ್ನು ಎರಡು ಕೈಗಳಿಂದ ಹಿಡಿದಿದ್ದಾನೆ. ಹಳದಿಯ ಬಟ್ಟೆಗಳನ್ನು ತೊಟ್ಟಿದ್ದಾನೆ. **404**

(ಬಿಳಿಯ ಬಣ್ಣ)

ಇವನ ಅಭಿಮಾನಿದೇವತೆ ಬೃಹಸ್ಪತಿ. ನವಗ್ರಹಗಳಲ್ಲಿರುವ ಗುರುವಿನಂತೆ ಇವನು ಇರಬೇಕು.

**154B/1**

### ಅಲಂಕಾರಶಾಸ್ತ್ರಸ್ವರೂಪ

(ಅಷ್ಟಭೋಗನೀತಿಶಾಸ್ತ್ರದಲ್ಲಿ)

ಅಲಂಕಾರಶಾಸ್ತ್ರದೇವನಿಗೆ ಹಳದಿಬಣ್ಣದ ಶರೀರ. ವಿಶಾಲವಾದ ಕಣ್ಣುಗಳು ಇವೆ. ಕನ್ನಡಿ ಮತ್ತು ಬೀಸಣಿಗೆಯನ್ನು ತನ್ನೆರಡು ಕೈಗಳಿಂದ ಸಂತೋಷದಿಂದ ಹಿಡಿದುಕೊಂಡಿದ್ದಾನೆಂದು ಹೇಳಲಾಗಿದೆ. **405**

(ಹಳದಿಬಣ್ಣ)

ಇವನ ಅಭಿಮಾನಿದೇವತೆ ಸರಸ್ವತೀ. ಎರಡು ಕೈಗಳುಳ್ಳ ಸರಸ್ವತಿಯಂತೆ ಇರಬೇಕು.

154B/2

## ಶಿಲ್ಪಶಾಸ್ತ್ರಸ್ವರೂಪ

(ಅಷ್ಟಭೋಗನೀತಿಶಾಸ್ತ್ರದಲ್ಲಿ)

ಶಿಲ್ಪಶಾಸ್ತ್ರದೇವನು ಸುಂದರಾಂಗ, ಪದ್ಮದಂತೆ ಕಾಂತಿಯುಳ್ಳವನು, ಚಾವಟಿ ಮತ್ತು ಪಾಶವನ್ನು ಎರಡು ಕೈಗಳಿಂದ ಹಿಡಿದಿರುವವನು, ಸದಾ ಬಿಳಿಯ ಕುದುರೆಯನ್ನು ಕಟ್ಟಿದ ರಥದ ಮೇಲೆ ಕುಳಿತು ಹೋಗುವವನೆಂದು ವರ್ಣಿಸಲಾಗಿದೆ. **406**

(ಪಾದರಿಯ ಹೂವಿನ ಬಣ್ಣ)

ಇವನ ಅಭಿಮಾನಿದೇವತೆ ವಿಶ್ವಕರ್ಮ. ದೇವಶಿಲ್ಪಿಯಾದ ವಿಶ್ವಕರ್ಮನಂತೆ ಇವನಿರಬೇಕು.

154B/3

## ಇಂದ್ರಜಾಲಸ್ವರೂಪ

(ಅಷ್ಟಭೋಗನೀತಿಶಾಸ್ತ್ರದಲ್ಲಿ)

ಇಂದ್ರಜಾಲದೇವನು ಇಂದ್ರನೀಲಮಣಿಯಂತೆ ದೇಹಕಾಂತಿಯುಳ್ಳವನು, ತೆಳುಹೊಟ್ಟೆಯುಳ್ಳವನು, ಆರು ತೋಳುಗಳುಳ್ಳವನು, ಕತ್ತಿ, ಖಟ್ವಾ ಎಂಬ ಆಯುಧ, ದಂಡ, ಕಪಾಲ, ಚರ್ಮ, ಕುಡುಗೋಲುಗಳನ್ನು ಈ ಆರು ಕೈಗಳಿಂದ ಹಿಡಿದಿರುವವನು. ಸದಾ ಪೀತಾಂಬರಧಾರಿಯೆಂದೂ ವರ್ಣಿಸಲಾಗಿದೆ. **407-407A**

(ಇಂದ್ರನೀಲದ ಬಣ್ಣ)

ಇವನ ಅಭಿಮಾನಿದೇವತೆ (ಮೂಲದಲ್ಲಿ ದೇವತೆಯ ಹೆಸರನ್ನು ತಿಳಿಸಿಲ್ಲ).

154B/4

## ನಾಟ್ಯಶಾಸ್ತ್ರಸ್ವರೂಪ

(ಅಷ್ಟಭೋಗನೀತಿಶಾಸ್ತ್ರದಲ್ಲಿ)

ಕೋಳಿಯ ಮುಖವುಳ್ಳ, ಕೆಂಪುಬಣ್ಣದ, ಕೆಂಪುಬಣ್ಣದ ಬಟ್ಟೆಗಳನ್ನು ಧರಿಸಿರುವ, ನಾಲ್ಕು ಕೈಗಳುಳ್ಳ, ಎಡಗಡೆಯ ಎರಡು ಕೈಗಳಿಂದ ಪಾಶ ಮತ್ತು ಕಬ್ಬಿನಜಲ್ಲೆಯನ್ನು, ಬಲಗಡೆಯ ಎರಡು ಕೈಗಳಿಂದ ಗದೆ ಮತ್ತು ನೇಗಿಲನ್ನು ಹಿಡಿದಿರುವ, ಕೃಶಾಂಗನಾದ ನಾಟ್ಯಶಾಸ್ತ್ರದೇವನನ್ನು ನಾನು ಭಜಿಸುತ್ತೇನೆ. **408-408A**

(ಕೆಂಪುಬಣ್ಣ)

ಇವನ ಅಭಿಮಾನಿದೇವತೆ ನಂದೀಶ್ವರ. ನಂದೀಶ್ವರನಂತೆ ಇವನು ಇರಬೇಕು.

155A/1

## ಸೂಪಶಾಸ್ತ್ರದ ಸ್ವರೂಪ

(ಅಷ್ಟಭೋಗನೀತಿಶಾಸ್ತ್ರದಲ್ಲಿ)

ಸೂಪಶಾಸ್ತ್ರದೇವನು ಹಳದಿಬಣ್ಣದ ದೇಹವುಳ್ಳವನು. ಇವನಿಗೆ ಎರಡು ತೋಳುಗಳು. ತೀಕ್ಷ್ಣವಾದ

ನೋಟವುಳ್ಳವನು. ಪಾನಪಾತ್ರೆ ಮತ್ತು ದಂಡವನ್ನು ಎರಡು ಕೈಗಳಿಂದ ಹಿಡಿದಿದ್ದಾನೆ. ಬಿಳಿಯ ಬಟ್ಟೆಗಳನ್ನು ತೊಟ್ಟಿದ್ದಾನೆ. 409

(ಹಳದಿಯ ಬಣ್ಣ)

ಇವನ ಅಭಿಮಾನಿದೇವತೆ ಅಗ್ನಿ. ದಿಕ್ಪಾಲಕರಲ್ಲಿರುವ ಅಗ್ನಿಯಂತೆ.

155A/2 ಮಲ್ಲವಿದ್ಯಾಸ್ವರೂಪ

(ಅಷ್ಟಭೋಗನೀತಿಶಾಸ್ತ್ರದಲ್ಲಿ)

ಮಲ್ಲವಿದ್ಯಾದೇವನು ಶೂರನು. ಕಪ್ಪಾದ ದೇಹವುಳ್ಳವನು. ನಾಲ್ಕು ಕೈಗಳನ್ನು ಹೊಂದಿದ್ದಾನೆ. ಶಂಖ, ಚಕ್ರ, ಗದೆ ಮತ್ತು ಖಡ್ಗಗಳು ತನ್ನ ನಾಲ್ಕು ಕೈಗಳಲ್ಲಿ ಧರಿಸಿದ್ದಾನೆ. ಅತ್ಯಂತ ಮನೋಹರನಾಗಿದ್ದಾನೆ. 410

(ಕಪ್ಪುಬಣ್ಣ)

ಇವನ ಅಭಿಮಾನಿದೇವತೆ ಶ್ರೀಕೃಷ್ಣ. ಇಪ್ಪತ್ತನಾಲ್ಕು ಜನ ಕೇಶವಾದಿ ಮೂರ್ತಿಗಳ ಮಧ್ಯದಲ್ಲಿರುವ ಶ್ರೀಕೃಷ್ಣನಂತೆ ಇವನ ಸ್ವರೂಪ.

155A/3 ಅಥರ್ವಣವೇದದ ಉಪವೇದರೂಪವಾದ ಮಂತ್ರವೇದಸ್ವರೂಪ

(ಮಂತ್ರರತ್ನಾಕರದಲ್ಲಿ)

ಮುನಿಶ್ರೇಷ್ಠರು ಮಂತ್ರವೇದವನ್ನು ಅಥರ್ವವೇದದ ಉಪವೇದವೆಂದು ಹೇಳಿದ್ದಾರೆ. ಇವನಿಗೆ ಸಿಂಹಮುಖ. ಕಪ್ಪುಶರೀರ. ಖಡ್ಗ ಮತ್ತು ಗುರಾಣಿಗಳನ್ನು ಕೈಗಳಲ್ಲಿ ಹೊಂದಿದ್ದಾನೆ. 411

(ನೀಲಿಬಣ್ಣ)

155A ಒಂದುನೂರಎಂಟು ಬ್ರಹ್ಮಕ್ಷೇತ್ರಗಳ ಹೆಸರುಗಳು
ಮತ್ತು ಬ್ರಹ್ಮನ ಹೆಸರುಗಳು

ಪದ್ಮಪುರಾಣದ ಸೃಷ್ಟಿಖಂಡದಲ್ಲಿ, ಮೂವತ್ತಮೂರನೆಯ ಅಧ್ಯಾಯದಲ್ಲಿ ಬ್ರಹ್ಮರುದ್ರ ಸಂವಾದದಲ್ಲಿ -

ಅನಂತರ ಸಂತುಷ್ಟನಾದ ಬ್ರಹ್ಮನು ಶಿವನಿಗೆ - "ಎಲೈ ಶಿವನೇ ! ಈಗ ನಾನು ನಿನಗೆ ಏನನ್ನು ಮಾಡಲಿ, ಹೇಳು? ನೀನು ಏನೇನನ್ನು ಬಯಸುತ್ತೀಯೋ ಅದೆಲ್ಲವನ್ನೂ ನನಗೆ ಹೇಳು. ನಾನು ನಿನಗೆ ಕೊಡುತ್ತೇನೆ. 412

ರುದ್ರನು ಹೇಳಿದನು - "ಎಲೈ ಸ್ವಾಮಿಯೇ, ವ್ಯಾಪಕನಾದ ವಿಭುವೇ ! ನೀನು ನನ್ನ ಮೇಲೆ ಪ್ರಸನ್ನನಾಗಿದ್ದು ವರಗಳನ್ನು ಕೊಡುವವನಾದರೆ, ಸದಾ ನೀನು ಎಲ್ಲಿರುತ್ತೀಯೇ ಎನ್ನುವ ಒಂದು ವಿಷಯವನ್ನು ನನಗೆ ಹೇಳು. 413

ಸದಾಕಾಲ ಬ್ರಾಹ್ಮಣರು ಯಾವ ಯಾವ ಸ್ಥಳಗಳಲ್ಲಿ ನಿನ್ನನ್ನು ನೋಡುತ್ತಾರೆ. ಯಾವ ಯಾವ ಸ್ಥಳಗಳಲ್ಲಿ ಯಾವ ಯಾವ ಹೆಸರುಗಳಿಂದ ನೀನು ಶೋಭಿಸುತ್ತಿದ್ದೀಯೆ? ಅದನ್ನು ದೇವದೇವನಾದ ಸ್ವಾಮಿಯೇ ! ನಿನ್ನಲ್ಲಿ ಭಕ್ತಿಪರವಶನಾದ ನನಗೆ ಹೇಳು. 414-414A

ಬ್ರಹ್ಮನು ಹೇಳಿದನು - ಎಲೈ ಸುರಶ್ರೇಷ್ಠನೇ! ನಾನು ಇರುವ ಸ್ಥಳಗಳು ಮತ್ತು ನನ್ನ ಅಲ್ಲಿನ ಹೆಸರುಗಳನ್ನು ಹೇಳುತ್ತೇನೆ.

1. ಪುಷ್ಕರದಲ್ಲಿ — ಚತುರ್ಮುಖಬ್ರಹ್ಮ (ನಾಲ್ಕು ಮುಖಗಳ ಬ್ರಹ್ಮ)
2. ಗಯೆಯಲ್ಲಿ — ಚತುರ್ಮುಖಬ್ರಹ್ಮ (ನಾಲ್ಕು ಮುಖಗಳ ಬ್ರಹ್ಮ)
3. ಕಾನ್ಯಕುಬ್ಜದಲ್ಲಿ — ವೇದಗರ್ಭಬ್ರಹ್ಮ (ವೇದಗಳನ್ನು ತನ್ನಲ್ಲಿಟ್ಟುಕೊಂಡಿರುವ ಬ್ರಹ್ಮ)
4. ಭೃಗುಕಕ್ಷದಲ್ಲಿ — ಪಿತಾಮಹಬ್ರಹ್ಮ (ಎಲ್ಲರಿಗೂ ಹಿರಿಯನಾದ ಬ್ರಹ್ಮ) 415
5. ಕಾವೇರಿಯಲ್ಲಿ — ಸೃಷ್ಟಿಕರ್ತಬ್ರಹ್ಮ (ಎಲ್ಲವನ್ನೂ ಸೃಷ್ಟಿ ಮಾಡುವ ಬ್ರಹ್ಮ)
6. ನಂದಿಪುರಿಯಲ್ಲಿ — ಬೃಹಸ್ಪತಿಬ್ರಹ್ಮ (ದೇವಗುರುಬೃಹಸ್ಪತಿಯಲ್ಲಿ ಜ್ಞಾನಿಯಾದ ಬ್ರಹ್ಮ)
7. ಪ್ರಭಾಸದಲ್ಲಿ — ಪದ್ಮಜನ್ಮಬ್ರಹ್ಮ (ಕಮಲದಲ್ಲಿ ಹುಟ್ಟಿದ ಬ್ರಹ್ಮ)
8. ವಾನಚರ್ಯದಲ್ಲಿ — ಸುರಪ್ರಿಯಬ್ರಹ್ಮ (ದೇವತೆಗಳಿಗೆ ಪ್ರಿಯನಾದ ಬ್ರಹ್ಮ) 416
9. ದ್ವಾರವತಿಯಲ್ಲಿ — ಋಗ್ವೇದಿಬ್ರಹ್ಮ (ಋಗ್ವೇದವನ್ನು ಬಲ್ಲ ಬ್ರಹ್ಮ)

10. ವೈದಿಶದಲ್ಲಿ ಭುವನಾಧಿಪಬ್ರಹ್ಮ
(ಎಲ್ಲ ಭುವನಗಳಿಗೂ ಒಡೆಯನಾದ ಬ್ರಹ್ಮ)

11. ಪೌಂಡ್ರಕದಲ್ಲಿ ಪುಂಡರೀಕಾಕ್ಷಬ್ರಹ್ಮ
(ಕಮಲದಂತೆ ಕಣ್ಣುಳ್ಳ ಬ್ರಹ್ಮ)

12. ಹಸ್ತಿನಾಪುರದಲ್ಲಿ ಪಿಂಗಾಕ್ಷಬ್ರಹ್ಮ
(ಕಂದುಬಣ್ಣದ ಕಣ್ಣುಗಳುಳ್ಳ ಬ್ರಹ್ಮ) 417

13. ಜಯಂತೀಯಲ್ಲಿ ವಿಜಯಶಾಲಿಬ್ರಹ್ಮ
(ನಾನು ವಿಜಯಬ್ರಹ್ಮನಾಗಿದ್ದೇನೆ)

14. ಪುಷ್ಕರಾವತದಲ್ಲಿ ಜಯಂತಬ್ರಹ್ಮ
(ಜಯಂತನೆಂಬ ಹೆಸರಿನ ಬ್ರಹ್ಮ)

15. ಉಧ್ರದಲ್ಲಿ ನಾನು ಪದ್ಮಹಸ್ತ ಬ್ರಹ್ಮನಾಗಿದ್ದೇನೆ
(ಕೈಗಳಲ್ಲಿ ಕಮಲಗಳುಳ್ಳ ಬ್ರಹ್ಮ)

16. ನಮೋನದಿಯಲ್ಲಿ ನಮೋವದಬ್ರಹ್ಮನು ನಾನು
(ನಮಸ್ಕಾರವೆಂದು ಹೇಳುತ್ತಿರುವ ಬ್ರಹ್ಮ) 418

17. ಅಹಿಚ್ಛತ್ರದಲ್ಲಿ ಜಯಾನಂದಿಬ್ರಹ್ಮನು
(ಜಯವನ್ನು ಪಡೆದು ಆನಂದಿತನಾದ ಬ್ರಹ್ಮ)

18. ಕಾಂಚೀಪುರಿಯಲ್ಲಿ ಜನಪ್ರಿಯಬ್ರಹ್ಮ
(ಜನರಿಗೆ ಪ್ರಿಯನಾದ ಬ್ರಹ್ಮನು)

19. ಪಾಟಲಿಪುತ್ರದಲ್ಲಿ ಬ್ರಹ್ಮನಾಗಿದ್ದೇನೆ
(ಅತ್ಯಂತ ದೊಡ್ಡವನಾಗಿದ್ದೇನೆ)

20. ಋಷಿಕುಂಡದಲ್ಲಿ ಮುನಿಬ್ರಹ್ಮನಾಗಿದ್ದೇನೆ
(ಮನನಶೀಲಬ್ರಹ್ಮನಾಗಿದ್ದೇನೆ) 419

21. ಮಹೀತಾರದಲ್ಲಿ ಮುಕುಂದಬ್ರಹ್ಮನು
(ಮುಕುಂದರೂಪಿ ಬ್ರಹ್ಮ)

22. ಶೋಣವಾಸಿತದಲ್ಲಿ ಶ್ರೀಕಂಠಬ್ರಹ್ಮ
(ಶ್ರೀಕಂಠರೂಪಿ ಬ್ರಹ್ಮ)

| | | |
|---|---|---|
| 23. ಕಾಮರೂಪದಲ್ಲಿ | ಶುಭಾಕಾರಬ್ರಹ್ಮ<br>(ಶುಭವಾದ ಆಕಾರವುಳ್ಳ ಬ್ರಹ್ಮ) | |
| 24. ವಾರಣಾಸಿಯಲ್ಲಿ | ಶಿವಪ್ರಿಯಬ್ರಹ್ಮ<br>(ಶಿವನಿಗೆ ಪ್ರಿಯನಾದ ಬ್ರಹ್ಮ) | 420 |
| 25. ಮಲ್ಲಿಕಾಕ್ಷದಲ್ಲಿ | ವಿಷ್ಣುಬ್ರಹ್ಮ<br>(ವಿಷ್ಣುರೂಪಿ ಬ್ರಹ್ಮ) | |
| 26. ಮಹೇಂದ್ರದಲ್ಲಿ | ಭಾಗರ್ವಬ್ರಹ್ಮ<br>(ಪರಶುರಾಮರೂಪಿ ಬ್ರಹ್ಮ) | |
| 27. ಗೋನರ್ದದಲ್ಲಿ | ಸ್ಥವಿರಾಕಾರಬ್ರಹ್ಮ<br>(ವೃದ್ಧರೂಪಿ ಬ್ರಹ್ಮ) | |
| 28. ಉಜ್ಜಯಿನಿಯಲ್ಲಿ | ಪಿತಾಮಹಬ್ರಹ್ಮ<br>(ಎಲ್ಲರಿಗೂ ಮೊದಲಿಗನೆಂಬ ಬ್ರಹ್ಮ) | 421 |
| 155B 29. ಕೌಶಾಂಬಿಯಲ್ಲಿ | ಮಹಾಬೋಧಿಬ್ರಹ್ಮ<br>(ಮಹಾಬೋಧಿ ಎಂಬ ಹೆಸರಿನ ಬ್ರಹ್ಮ) | |
| 30. ಅಯೋಧ್ಯೆಯಲ್ಲಿ | ರಾಘುವಬ್ರಹ್ಮ<br>(ರಾಘುವನೆಂಬ ಹೆಸರಿನ ಬ್ರಹ್ಮ) | |
| 31. ಚಿತ್ರಕೂಟದಲ್ಲಾದರೋ | ಮುನೀಂದ್ರಬ್ರಹ್ಮ<br>(ಶ್ರೇಷ್ಠಋಷಿರೂಪ ಬ್ರಹ್ಮ) | |
| 32. ವಿಂಧ್ಯಪರ್ವತದಲ್ಲಿ | ವರಾಹಬ್ರಹ್ಮ<br>(ವರಾಹರೂಪಿ ಬ್ರಹ್ಮ) | 422 |
| 33. ಗಂಗಾದ್ವಾರ(ತೀರ)ದಲ್ಲಿ | ಪರಮೇಷ್ಠೀಬ್ರಹ್ಮ<br>(ಸರ್ವಶ್ರೇಷ್ಠಬ್ರಹ್ಮ) | |
| 34. ಹಿಮಾಲಯದಲ್ಲಿ | ಶಂಕರಬ್ರಹ್ಮ<br>(ಶಂಕರರೂಪಿ ಬ್ರಹ್ಮ) | |
| 35. ದೇವಿಕೆಯಲ್ಲಿ | ಸ್ರುಜಾಹಸ್ತಬ್ರಹ್ಮ<br>(ಸ್ರುಕ್ ಅನ್ನು ಕೈಯಲ್ಲುಳ್ಳ ಬ್ರಹ್ಮ) | |

| | | | |
|---|---|---|---|
| 36. | ಚತುರ್ವಟದಲ್ಲಿ | ಸ್ರುವಹಸ್ತಬ್ರಹ್ಮ<br>(ಸ್ರುವವನ್ನು ಕೈಯಲ್ಲಿ ಹಿಡಿದಿರುವ ಬ್ರಹ್ಮ) | 423 |
| 37. | ಬೃಂದಾವನದಲ್ಲಿ | ಪದ್ಮಪಾಣಿಬ್ರಹ್ಮ<br>(ಕಮಲವನ್ನು ಕೈಯಲ್ಲುಳ್ಳ ಬ್ರಹ್ಮ) | |
| 38. | ನೈಮಿಷದಲ್ಲಿ | ಕುಶಹಸ್ತಬ್ರಹ್ಮ<br>(ಕೈಯಲ್ಲಿ ದರ್ಭೆ ಹಿಡಿದಿರುವ ಬ್ರಹ್ಮ) | |
| 39. | ಗೋಲಕ್ಷದಲ್ಲಿ | ಗೋಪೀಂದ್ರಬ್ರಹ್ಮ<br>(ಗೋಪಿಕೆಯರಿಗೆ ಒಡೆಯನಾದ ಶ್ರೀಕೃಷ್ಣರೂಪಿ ಬ್ರಹ್ಮ) | |
| 40. | ಯಮುನಾತಟದಲ್ಲಿ | ಸುಚಂದ್ರಬ್ರಹ್ಮ<br>(ಚಂದ್ರನಂತೆ ಸುಂದರನಾದ ಬ್ರಹ್ಮ) | 424 |
| 41. | ಭಾಗೀರಥಿಯಲ್ಲಿ | ಪದ್ಮತನುಬ್ರಹ್ಮ<br>(ಕಮಲಶರೀರದ ಬ್ರಹ್ಮ) | |
| 42. | ಜಲಂಧರದಲ್ಲಿ | ಜಲಾನಂದನೆಂಬ ಬ್ರಹ್ಮ<br>(ಜಲದಲ್ಲಿ ಆನಂದಗೊಳ್ಳುವ ಬ್ರಹ್ಮ) | |
| 43. | ಕೋಂಕಣದಲ್ಲಿ | ಭದ್ರಾಕ್ಷ ಬ್ರಹ್ಮ<br>(ಪ್ರಶಸ್ತಕಣ್ಣುಗಳುಳ್ಳ ಬ್ರಹ್ಮ) | |
| 44. | ಕಾಂಪಿಲ್ಯದಲ್ಲಿ | ಕನಕಪ್ರಿಯ ಬ್ರಹ್ಮ<br>(ಸುವರ್ಣಪ್ರಿಯನಾದ ಬ್ರಹ್ಮ) | 425 |
| 45. | ವೇಂಕಟಾದ್ರಿಪರ್ವತದಲ್ಲಿ | ಅನ್ನದಾತಬ್ರಹ್ಮ<br>(ಅನ್ನವನ್ನು ಕೊಡುವ ಬ್ರಹ್ಮ) | |
| 46. | ಕ್ರತುಸ್ಥಲದಲ್ಲಿ | ಶುಭಬ್ರಹ್ಮ<br>(ಮಂಗಳಸ್ವರೂಪಬ್ರಹ್ಮ) | |
| 47. | ಲಂಕೆಯಲ್ಲಿ | ಪುಲಸ್ತ್ಯಬ್ರಹ್ಮ<br>(ಪುಲಸ್ತ್ಯನೆಂಬ ಹೆಸರಿನ ಬ್ರಹ್ಮ) | |
| 48. | ಕಾಶ್ಮೀರದಲ್ಲಿ | ಹಂಸವಾಹನ ಬ್ರಹ್ಮ<br>(ಹಂಸವನ್ನು ವಾಹನವುಳ್ಳ ಬ್ರಹ್ಮ) | 426 |

49. ಅರ್ಬುದದಲ್ಲಿ ವಸಿಷ್ಠಬ್ರಹ್ಮ
(ವಸಿಷ್ಠನೆಂಬ ಹೆಸರಿನ ಬ್ರಹ್ಮ)

50. ಉತ್ಪಲಾವತದಲ್ಲಿ ನಾರದಬ್ರಹ್ಮ
(ನಾರದನೆಂಬ ಹೆಸರಿನ ಬ್ರಹ್ಮ)

51. ಮೇಲಕದಲ್ಲಿ ಶ್ರುತಿದಾತೃಬ್ರಹ್ಮ
(ವೇದಪ್ರದಾತನಾದ ಬ್ರಹ್ಮ)

52. ಪ್ರಯಾಜದಲ್ಲಿ ಯಾದವಪತಿಬ್ರಹ್ಮ
(ಯಾದವರೊಡೆಯ ರೂಪಿ ಬ್ರಹ್ಮ) 427

53. ಯಜ್ಞದಲ್ಲಿ ಸಾಮವೇದಬ್ರಹ್ಮ
(ಸಾಮವೇದಸ್ವರೂಪದ ಬ್ರಹ್ಮ)

54. ಮಥುರೆಯಲ್ಲಿ ಮಥುರಪ್ರಿಯಬ್ರಹ್ಮ
(ಮಥುರಾಪ್ರಿಯನಾದ ಕೃಷ್ಣರೂಪದ ಬ್ರಹ್ಮ)

55. ಅಂಕೋಲದಲ್ಲಿ ಯಜ್ಞಭೋಕ್ತೃಬ್ರಹ್ಮ
(ಯಜ್ಞದಲ್ಲಿ ಹವಿರಾದಿಗಳನ್ನು ಸ್ವೀಕರಿಸುವ
ಅಗ್ನಿಬ್ರಹ್ಮ)

56. ಬ್ರಹ್ಮಾವಾಸದಲ್ಲಿ ಅಮರಪ್ರಿಯಬ್ರಹ್ಮ
(ದೇವತೆಗಳಿಗೆ ಪ್ರಿಯನಾದ ಬ್ರಹ್ಮ) 428

57. ಗೋವಿಂದದಲ್ಲಿ ನಾರಾಯಣಬ್ರಹ್ಮ
(ನಾರಾಯಣನೆಂಬ ಹೆಸರಿನ ಬ್ರಹ್ಮ)

58. ಮಾಯಾಪುರಿಯಲ್ಲಿ ದ್ವಿಜಪ್ರಿಯಬ್ರಹ್ಮ
(ಬ್ರಾಹ್ಮಣಪ್ರಿಯನಾದ ಬ್ರಹ್ಮ)

59. ಋಷಿಬೃಂದದಲ್ಲಿ ದುರಾಧರ್ಷಬ್ರಹ್ಮ
(ಅಜೇಯನಾದ ಬ್ರಹ್ಮ)

60. ದೇವಾ ಎಂಬಲ್ಲಿ ಮುರಮರ್ದನ ಬ್ರಹ್ಮ
(ಮುರಾರಿರೂಪದ ಬ್ರಹ್ಮ) 429

61. ವಿಜಯಾ ಎಂಬಲ್ಲಿ ಮಹಾರೂಪ ಬ್ರಹ್ಮ
(ಮಹದ್ರೂಪವುಳ್ಳ ಬ್ರಹ್ಮ)

| | | | |
|---|---|---|---|
| 62. | ರಾಷ್ಟ್ರವರ್ಧನದಲ್ಲಿ | ಸುರೂಪಬ್ರಹ್ಮ<br>(ಸುಂದರರರೂಪದ ಬ್ರಹ್ಮ) | |
| 63. | ಮಾಳವಿಯಲ್ಲಿ | ಪೃಥೂದರಬ್ರಹ್ಮ<br>(ದೊಡ್ಡ ಹೊಟ್ಟೆಯುಳ್ಳ ಬ್ರಹ್ಮ) | |
| 64. | ಶಾಕಂಭರಿಯಲ್ಲಿ | ರಸಪ್ರಿಯಬ್ರಹ್ಮ<br>(ರಸಗಳಲ್ಲಿ ಪ್ರಿಯನಾದ ಬ್ರಹ್ಮ) | 430 |
| 65. | ಪಿಂಡಾಲಕದಲ್ಲಿ | ಗೋಪಾಲಬ್ರಹ್ಮ<br>(ಗೋಪಾಲಕ ಬ್ರಹ್ಮ) | |
| 66. | ಶಂಖೋದ್ಧಾರದಲ್ಲಿ | ಅಂಗವರ್ಧನಬ್ರಹ್ಮ<br>(ಅಂಗವರ್ಧನನೆಂಬ ಬ್ರಹ್ಮ) | |
| 67. | ಕಾದಂಬಕದಲ್ಲಿ | ಪ್ರಜಾಧ್ಯಕ್ಷಬ್ರಹ್ಮ<br>(ಪ್ರಜಾನಾಯಕನಾದ ಬ್ರಹ್ಮ) | |
| 68. | ಸಮಸ್ಥಲದಲ್ಲಿ | ದೇವಾಧ್ಯಕ್ಷಬ್ರಹ್ಮ<br>(ದೇವಾಧಿಪ ಬ್ರಹ್ಮ) | 431 |
| 69. | ವಟಕದಲ್ಲಿ | ಮಾರ್ಕಂಡಬ್ರಹ್ಮ<br>(ಮಾರ್ಕಂಡನೆಂಬ ಹೆಸರಿನ ಬ್ರಹ್ಮ) | |
| 70. | ಅಂಬುದದಲ್ಲಿ | ನಾನು ಜಲಶಾಯಿ ಬ್ರಹ್ಮನಾಗಿದ್ದೇನೆ<br>(ನೀರಿನಲ್ಲಿ ನಿದ್ರಿಸುತ್ತಿರುವ ಬ್ರಹ್ಮ) | |
| 71. | ತ್ರಿಪುರವೆಂಬ ದೇಶದಲ್ಲಿ | ತ್ರ್ಯಂಬಕಬ್ರಹ್ಮ<br>(ಮುಕ್ಕಣ್ಣಬ್ರಹ್ಮ) | |
| 72. | ಶ್ರೀಶೈಲದಲ್ಲಿ | ತ್ರಿಲೋಚನಬ್ರಹ್ಮ<br>(ವಿಷಮಲೋಚನಬ್ರಹ್ಮ) | 432 |
| 73. | ಪದ್ಮಪುರದಲ್ಲಿ | ಮಹಾದೇವಬ್ರಹ್ಮ<br>(ಮಹಾದೇವನೆಂಬ ಬ್ರಹ್ಮ) | |
| 74. | ಕಪಾಲದಲ್ಲಿ | ವೈಧವಬ್ರಹ್ಮ<br>(ವೈಧವನೆಂಬ ಬ್ರಹ್ಮ) | |

| | | | |
|---|---|---|---|
| 75. | ಶೃಂಗಿಬೇರಪುರದಲ್ಲಿ | ಶೌರಿಬ್ರಹ್ಮ<br>(ಶೂರಸೇನನ ಮಗನಾದ ಬ್ರಹ್ಮ) | |
| 76. | ನೈಮಿಷದಲ್ಲಿ | ಚಕ್ರಪಾಣಿಬ್ರಹ್ಮ<br>(ಕೈನಲ್ಲಿ ಚಕ್ರ ಹಿಡಿದ ಬ್ರಹ್ಮ) | 433 |
| 77. | ದಂಡಪುರಿಯಲ್ಲಿ | ವಿರೂಪಾಕ್ಷಬ್ರಹ್ಮ<br>(ಮೂರುಕಣ್ಣುಗಳುಳ್ಳ ಬ್ರಹ್ಮ) | |
| 78. | ಧೂತಪಾಪಕದಲ್ಲಿ | ಗೌತಮಬ್ರಹ್ಮ<br>(ಗೌತಮನೆಂಬ ಹೆಸರಿನ ಬ್ರಹ್ಮ) | |
| 79. | ಮಾಲ್ಯವತಿಯಲ್ಲಿ | ಹಂಸನಾಥಬ್ರಹ್ಮ<br>(ಹಂಸಗಳಿಗೆ ಒಡೆಯನಾದ ಬ್ರಹ್ಮ) | |
| 80. | ಬಾಲಿಕದಲ್ಲಿ | ದ್ವಿಜೇಂದ್ರಬ್ರಹ್ಮ<br>(ವಿಪ್ರಶ್ರೇಷ್ಠನಾದ ಬ್ರಹ್ಮ) | 434 |
| 81. | ಇಂದುಪುರಿಯಲ್ಲಿ | ದೇವನಾಥಬ್ರಹ್ಮ<br>(ದೇವತೆಗಳಿಗೆ ಒಡೆಯನಾದ ಬ್ರಹ್ಮ) | |
| 82. | ದ್ಯೂತವಾಹ್ಯದಲ್ಲಿ | ಪುರಂದರಬ್ರಹ್ಮ<br>(ಪಟ್ಟಣಗಳನ್ನು ನಾಶ ಮಾಡುವ ಬ್ರಹ್ಮ) | |
| 83. | ಲಂಬಾದಲ್ಲಿ | ಹಂಸವಾಹಬ್ರಹ್ಮ<br>(ಹಂಸವಾಹನ ಬ್ರಹ್ಮ) | |
| 84. | ಚಂಡಾದಲ್ಲಿ | ಗರುಡಪ್ರಿಯಬ್ರಹ್ಮ<br>(ಗರುಡನಿಗೆ ಪ್ರಿಯನಾದ ಬ್ರಹ್ಮ) | 435 |
| 85. | ಮಹೋದಯದಲ್ಲಿ | ಮಹಾಯಜ್ಞಬ್ರಹ್ಮ<br>(ಮಹಾಯಜ್ಞಸ್ವರೂಪ ಬ್ರಹ್ಮ) | |
| 86. | ಯಜ್ಞಕೇತನದಲ್ಲಿ | ಸುಯಜ್ಞಬ್ರಹ್ಮ<br>(ಒಳ್ಳೆಯ ಯಜ್ಞರೂಪದ ಬ್ರಹ್ಮ) | |
| 87. | ಸಿದ್ಧಿಸಾರದಲ್ಲಿ | ಪದ್ಮವರ್ಣಬ್ರಹ್ಮ<br>(ಪದ್ಮವರ್ಣನೆಂಬ ಬ್ರಹ್ಮ ಅಥವಾ ಕಮಲದ ಬಣ್ಣದಂತೆ ದೇಹಕಾಂತಿಯುಳ್ಳ ಬ್ರಹ್ಮ) | |

| | | | |
|---|---|---|---|
| 88. | ವೇಣಾದಲ್ಲಿ | ಪದ್ಮಬೋಧನ ಬ್ರಹ್ಮ<br>(ಕಮಲಗಳನ್ನು ಅರಳಿಸುವ<br>ಸೂರ್ಯಬ್ರಹ್ಮ) | 436 |
| 89. | ದಾಹನದಲ್ಲಿ | ಕೌಮುದೀನಾಥಬ್ರಹ್ಮ<br>(ಕನ್ನೈದಿಲೆಹೂಗಳಿಗೆ ಒಡೆಯನಾದ<br>ಚಂದ್ರರೂಪಬ್ರಹ್ಮ) | |
| 90. | ಮಹಾಪತ್ತಿಯಲ್ಲಿ | ವಿನಾಯಕಬ್ರಹ್ಮ<br>(ವಿಘ್ನಗಳಿಗೆ ಒಡೆಯನಾದ ಗಣಪತಿರೂಪಿ ಬ್ರಹ್ಮ) | |
| 91. | ಮಾತೃಕಾಸ್ಥಾನದಲ್ಲಿ | ಪದ್ಮಜಬ್ರಹ್ಮ<br>(ನಾಭಿಕಮಲದಲ್ಲಿ ಹುಟ್ಟಿದ ಬ್ರಹ್ಮ) | |
| 92. | ಅಲಕಾದಲ್ಲಿ | ಕುಲಾಧಿಪಬ್ರಹ್ಮ<br>(ಕುಲದಲ್ಲಿ ಉತ್ತಮನಾದ ಬ್ರಹ್ಮ) | 437 |
| 93. | ತ್ರಿಕೂಟದಲ್ಲಿ | ಗೋನರ್ದಬ್ರಹ್ಮ<br>(ಗೋನರ್ದನೆಂಬ ಹೆಸರಿನ ಬ್ರಹ್ಮ) | |
| 94. | ಪಾತಾಲದಲ್ಲಿ | ವಾಸುಕಿಬ್ರಹ್ಮ<br>(ನಾಗರಾಜರೂಪ ಬ್ರಹ್ಮ) | |
| 95. | ಕೇದಾರದಲ್ಲಿ | ಪದ್ಮಾಧ್ಯಕ್ಷಬ್ರಹ್ಮ<br>(ಪದ್ಮಾಧ್ಯಕ್ಷನೆಂಬ ಬ್ರಹ್ಮ) | |
| 96. | ಕೂಷ್ಮಾಂಡದಲ್ಲಿ | ಸುರತಪ್ರಿಯಬ್ರಹ್ಮ<br>(ಸುರತಪ್ರಿಯನೆಂಬ ಬ್ರಹ್ಮ) | 438 |
| 97. | ಕುಂಡವಾಪಿಯಲ್ಲಿ | ಶುಭಾಂಗಬ್ರಹ್ಮ<br>(ಶುಭಾಂಗನೆಂಬ ಹೆಸರಿನ ಬ್ರಹ್ಮ) | |
| 98. | ಸಾರಣೆಯಲ್ಲಿ | ತಕ್ಷಕಬ್ರಹ್ಮ<br>(ತಕ್ಷಕನೆಂಬ ಹೆಸರಿನ ಬ್ರಹ್ಮ) | |
| 99. | ಅಚ್ಛೋದದಲ್ಲಿ | ಪಾಪಹಬ್ರಹ್ಮ<br>(ಪಾಪನಾಶಕನೆಂಬ ಬ್ರಹ್ಮ) | |

100. ಅಂಬಿಕೆಯಲ್ಲಿ ಸುದರ್ಶನಬ್ರಹ್ಮ
(ಸುದರ್ಶನಚಕ್ರರೂಪದ ಬ್ರಹ್ಮ) 439

101. ವರದಾದಲ್ಲಿ ಮಹಾವೀರಬ್ರಹ್ಮ
(ಮಹಾವೀರನಾದ ಬ್ರಹ್ಮ)

102. ಕಾಂತಾರದಲ್ಲಿ ದುರ್ಗನಾಶನ ಬ್ರಹ್ಮ
(ತೊಂದರೆಗಳನ್ನು ನಾಶ ಮಾಡುವ ಬ್ರಹ್ಮ)

103. ಕರ್ಣಾಟಕದಲ್ಲಿ ಅನಂತಬ್ರಹ್ಮ
(ಅನಂತನೆಂಬ ಹೆಸರಿನ ಬ್ರಹ್ಮ)

104. ಪ್ರಕಾಶ್ಯಾದಲ್ಲಿ ದಿವಾಕರಬ್ರಹ್ಮ
(ಪ್ರಭಾಕರಸೂರ್ಯ ಬ್ರಹ್ಮ) 440

105. ವಿರಜಾದಲ್ಲಿ ಪದ್ಮನಾಭಬ್ರಹ್ಮ
(ಪದ್ಮನಾಭನೆಂಬ ಹೆಸರಿನ ಬ್ರಹ್ಮ)

106. ವೃಕಸ್ಥಲದಲ್ಲಿ ಖರುದ್ರಬ್ರಹ್ಮ
(ಖರುದ್ರನೆಂಬ ಹೆಸರಿನ ಬ್ರಹ್ಮ)

107. ಪದ್ಮಾವತಿಯಲ್ಲಿ ಪದ್ಮಗೃಹಬ್ರಹ್ಮ
(ಪದ್ಮಗೃಹನೆಂಬ ಹೆಸರಿನ ಬ್ರಹ್ಮ)

108. ಗಗನದಲ್ಲಿ ಪದ್ಮಕೇತನಬ್ರಹ್ಮ
(ಪದ್ಮಕೇತನನೆಂಬ ಹೆಸರಿನ ಬ್ರಹ್ಮ) 441

ಹೀಗೆ ಎಲೈ ರುದ್ರನೇ ! ಮೂರು ಸಂಧ್ಯಾಕಾಲಗಳಲ್ಲೂ ಎಲ್ಲಿ ನಾನು ವಾಸವಾಗಿರುತ್ತೇನೋ ಅಂತಹ ನೂರೆಂಟು ನನ್ನ ವಾಸಸ್ಥಾನಗಳನ್ನು ನಾನು ನಿನಗೆ ತಿಳಿಸಿದ್ದೇನೆ. 442

ಭಕ್ತಿಯುಕ್ತನಾದ ಯಾವ ಮನುಷ್ಯನು ನನ್ನ ಈ ನೂರೆಂಟು ಬ್ರಹ್ಮಸ್ಥಾನಗಳಲ್ಲಿ ಯಾವುದಾದರೂ ಒಂದು ಸ್ಥಾನವನ್ನು ನೋಡಿದರೂ ಸಾಕು, ಅವನು ಪಾಪಗಳಿಂದ ಮುಕ್ತನಾಗಿ ಸ್ಥಿರವಾದ ವರ್ಷಗಳೂ (ಅಂದರೆ ಸದಾಕಾಲ) ಸಂತೋಷಪಡುತ್ತಾನೆ. 443

ಹೀಗೆ ಒಂದು ನೂರೆಂಟು ಬ್ರಹ್ಮಕ್ಷೇತ್ರಗಳು ಉಕ್ತವಾದುವು

156A

## ಭೃಗ್ವಂಗಿರೋಗಣ

(ನೃಸಿಂಹಪ್ರಾಸಾದದಲ್ಲಿ)

## ಭೃಗುಗಣ

ಭೃಗುಗಣದಲ್ಲಿ ವಾಮದೇವನಿಂದ ಆರಂಭಿಸಿ ಹನ್ನೆಡರು ಜನರಿದ್ದಾರೆ. ಇವರೆಲ್ಲರನ್ನೂ ಶುಕ್ಲವರ್ಣವುಳ್ಳವರನ್ನಾಗಿ ಚಿತ್ರಿಸಬೇಕು.

ಈ ಹನ್ನೆರಡು ಜನರೆಂದರೆ -

| | | | | | |
|---|---|---|---|---|---|
| 1. | ವಾಮದೇವ | 2. | ಭೃವಣ | 3. | ಭಾವನ |
| 4. | ಸುಜನ್ಯ | 5. | ಸುಜನ | 6. | ಕ್ರತುಸರ್ವ |
| 7. | ಸ್ವನು | 8. | ಚವ್ಯ | 9. | ಶ್ರುತ |
| 10. | ಪ್ರವಾಸ | 11. | ಅವ್ಯಯ | 12. | ದಕ್ಷ |

ಈ ಹನ್ನೆರಡು ಜನರು ಭೃಗುಗಳೆಂದು ನಿರ್ದಿಷ್ಟವಾಗಿದ್ದಾರೆ. ಇವರು ಯಾಜ್ಞಿಕರು. **444-445A**

(ಇವರ ದೇಹದ ಬಣ್ಣ ಬಿಳುಪು)

## ಅಂಗಿರೋಗಣ

ಅಂಗಿರೋಗಣದಲ್ಲಿನ ದೇವತೆಗಳನ್ನು ದೇವಗುರು ಬೃಹಸ್ಪತಿಯಂತೆ ಚಿತ್ರಿಸಬೇಕು.

ಅಂಗಿರೋಗಣದಲ್ಲಿ -

| | | | | | |
|---|---|---|---|---|---|
| 1. | ಆತ್ಮಾ | 2. | ಆಯು | 3. | ಮನ |
| 4. | ದಕ್ಷ | 5. | ಪಾದಪ್ರಾಪ | 6. | ಹವಿಷ್ಯ |
| 7. | ಗವಿಷ್ಮ | 8. | ಖುತ | 9. | ಸತ್ಯ |

10. ದೇವಲ ಎಂದು ಪ್ರಸಿದ್ಧರಾದ ಹತ್ತು ಜನ ಮುನಿಗಳು ಅಂಗಿರಸರೆಂದು ಉಕ್ತರಾಗಿದ್ದಾರೆ. **446-447**

(ದೇವಗುರು ಬೃಹಸ್ಪತಿಯಂತೆ ಹಳದಿಬಣ್ಣ)

## ಈ ಹಿಂದೆ ಬಂದು ಹೋದ ಇಪ್ಪತ್ತೆಂಟು ಜನ ಪುರಾತನ ವ್ಯಾಸರ ಹೆಸರುಗಳು

ಮೊದಲನೆಯ ದ್ವಾಪರಯುಗದಲ್ಲಿ ಸ್ವಯಂಜ್ಞಾನಿಯಾದ ಸ್ವಯಂಭೂವ್ಯಾಸನು. ಎರಡನೆಯ ದ್ವಾಪರದಲ್ಲಿ ಪ್ರಜಾಪತಿ ವೇದವ್ಯಾಸನು. **448**

ಮೂರನೆಯ ದ್ವಾಪರದಲ್ಲಿ ಉಶನಸ್ ಎಂಬ ಮೂರನೆಯ ವ್ಯಾಸನು. ನಾಲ್ಕನೆಯ ದ್ವಾಪರದಲ್ಲಿ ಬೃಹಸ್ಪತಿವ್ಯಾಸನು. ಐದನೆಯ ದ್ವಾಪರದಲ್ಲಿ ಸವಿತೃವ್ಯಾಸನು ಐದನೆಯವನು. ಆರನೆಯ ದ್ವಾಪರದಲ್ಲಿ ಪ್ರಭುವಾದ ಮೃತ್ಯುವಾದ ಮೃತ್ಯುವ್ಯಾಸನು ಆರನೆಯವನೆಂದು ಸ್ಮೃತವಾಗಿದೆ. **449**

ಏಳನೆಯ ದ್ವಾಪರದಲ್ಲಿ ಇಂದ್ರವ್ಯಾಸನು, ಎಂಟನೆಯ ದ್ವಾಪರದಲ್ಲಿ ವಸಿಷ್ಠವ್ಯಾಸನು ಸ್ಮೃತನಾಗಿದ್ದಾನೆ. ಒಂಭತ್ತನೆಯ ದ್ವಾಪರದಲ್ಲಿ ಸಾರಸ್ವತನೆಂಬ ಒಂಭತ್ತನೆಯ ವ್ಯಾಸನು, ಹತ್ತನೆಯ ದ್ವಾಪರದಲ್ಲಿ ವಿಧಾತೃವ್ಯಾಸನೆಂದು ಸ್ಮೃತರಾಗಿದ್ದಾರೆ. **450**

ಹನ್ನೊಂದನೆಯ ದ್ವಾಪರದಲ್ಲಿ ತ್ರಿವೃಷಾವ್ಯಾಸನು, ಹನ್ನೆರಡನೆಯ ದ್ವಾಪರದಲ್ಲಿ ಭರದ್ವಾಜ ವ್ಯಾಸನು, ಹದಿಮೂರನೆಯ ದ್ವಾಪರದಲ್ಲಿ ಅಂತರಿಕ್ಷವ್ಯಾಸನು, ಹದಿನಾಲ್ಕನೆಯ ದ್ವಾಪರದಲ್ಲಿ ವಪ್ರೀವ್ಯಾಸನು, **451**

ಹದಿನೈದನೆಯ ದ್ವಾಪರದಲ್ಲಿ ತ್ರೈಯಾರುಣವ್ಯಾಸನು, ಹದಿನಾರನೆಯ ದ್ವಾಪರದಲ್ಲಿ ಧನಂಜಯ ವ್ಯಾಸನು. ಹದಿನೇಳನೆಯ ದ್ವಾಪರದಲ್ಲಿ ಕೃತಂಜಯವ್ಯಾಸನು, ಹದಿನೆಂಟನೆಯ ದ್ವಾಪರದಲ್ಲಿ ಅರುಣಾರ್ಕನು ಹದಿನಂಟನೆಯ ವ್ಯಾಸನೆಂದು ಸ್ಮೃತನಾಗಿದ್ದಾನೆ. **452**

ಅನಂತರ ಹತ್ತೊಂಭತ್ತನೆಯ ದ್ವಾಪರದಲ್ಲಿ ಭಾರದ್ವಾಜನು ಹತ್ತೊಂಬತ್ತನೆಯ ವ್ಯಾಸನಾಗಿದ್ದನು. ಆಮೇಲೆ ಇಪ್ಪತ್ತನೆಯ ದ್ವಾಪರದಲ್ಲಿ ಗೌತಮನು ಇಪ್ಪತ್ತನೆಯ ವ್ಯಾಸನಾದನು. ಇಪ್ಪತ್ತೊಂದನೆಯ ದ್ವಾಪರದಲ್ಲಿ ಉತ್ತಮವ್ಯಾಸನು ಇಪ್ಪತ್ತೊಂದನೆಯ ವ್ಯಾಸನಾದನು. ಇವನಿಗೆ ಹರ್ಯಾತ್ಮ ಎಂಬ ಬೇರೊಂದು ಹೆಸರೂ ಇದ್ದಿತು. **453**

ಉತ್ತಮವ್ಯಾಸನಾದ ಮೇಲೆ ಇಪ್ಪತ್ತೆರಡನೆಯ ದ್ವಾಪರದಲ್ಲಿ ವಾಜಿಶ್ರವಸ್ಸನು ಇಪ್ಪತ್ತೆರಡನೆಯ ವ್ಯಾಸನಾಗಿದ್ದನು. ಇವನಿಗೆ ಸೋಮಶುಷ್ಮಾಯಣ ಎಂಬ ಮತ್ತೊಂದು ಹೆಸರೂ ಇದ್ದಿತು. ಅನಂತರ ಇಪ್ಪತ್ತಮೂರನೆಯ ದ್ವಾಪರದಲ್ಲಿ ತೃಣಬಿಂದುವು ಇಪ್ಪತ್ತಮೂರನೆಯ ವ್ಯಾಸನೆಂದು ಸ್ಮೃತನಾಗಿದ್ದಾನೆ. ಇವನಿಗೆ ಋಕ್ಷ ಎಂದು ಬೇರೊಂದು ಹೆಸರೂ ಇದ್ದಿತು. **454**

ಇಪ್ಪತ್ತನಾಲ್ಕನೆಯ ದ್ವಾಪರದಲ್ಲಿ ಭಾರ್ಗವನು ಇಪ್ಪತ್ತನಾಲ್ಕನೆಯ ವ್ಯಾಸನಾಗಿದ್ದನು. ಇವನಿಗೆ ವಾಲ್ಮೀಕಿ ಎಂದೂ ಹೆಸರುಗಳು ಇದ್ದವು. ಅನಂತರದಲ್ಲಿ ಇಪ್ಪತ್ತೈದನೆಯ ದ್ವಾಪರದಲ್ಲಿ ನಮ್ಮ ತಂದೆಯಾದ ಶಕ್ತಿವ್ಯಾಸನು ಇಪ್ಪತ್ತೈದನೆಯ ವ್ಯಾಸನಾದನು. ಆಮೇಲೆ ಇಪ್ಪತ್ತಾರನೆಯ ದ್ವಾಪರದಲ್ಲಿ (ನಾನು) ಅಹಂಪರಾಶರವ್ಯಾಸನು ಇಪ್ಪತ್ತಾರನೆಯ ವ್ಯಾಸನು. **455**

ನನ್ನ ನಂತರದಲ್ಲಿ ಇಪ್ಪತ್ತೇಳನೆಯ ದ್ವಾಪರದಲ್ಲಿ ಜಾತೂಕರ್ಣ್ಯವ್ಯಾಸನು ಇಪ್ಪತ್ತೇಳನೆಯ ವ್ಯಾಸನಾದನು. ಇವನಾದ ಮೇಲೆ ಇಪ್ಪತ್ತೆಂಟನೆಯ ದ್ವಾಪರದಲ್ಲಿ ಕೃಷ್ಣದ್ವೈಪಾಯನವ್ಯಾಸನು ಇಪ್ಪತ್ತೆಂಟನೆಯ ವ್ಯಾಸನಾದನು. ಹೀಗೆ ಇಪ್ಪತ್ತೆಂಟುದ್ವಾಪರದಲ್ಲಿ ಈ ಇಪ್ಪತ್ತೆಂಟುಜನರು ಪುರಾತನ ವೇದವ್ಯಾಸರೆಂದು ಪ್ರಸಿದ್ಧರಾಗಿದ್ದಾರೆ. **456**

### ಇಪ್ಪತ್ತೆಂಟುಜನ ಪುರಾತನ ವೇದವ್ಯಾಸರುಗಳು

| | | | |
|---|---|---|---|
| 1. | ಸ್ವಯಂಭೂವ್ಯಾಸ | 2. | ಪ್ರಜಾಪತಿವ್ಯಾಸ |
| 3. | ಉಶನಸ್‌ವ್ಯಾಸ | 4. | ಬೃಹಸ್ಪತಿವ್ಯಾಸ |
| 5. | ಸವಿತೃವ್ಯಾಸ | 6. | ಮೃತ್ಯುವ್ಯಾಸ |
| 7. | ಇಂದ್ರವ್ಯಾಸ | 8. | ವಸಿಷ್ಠವ್ಯಾಸ |
| 9. | ಸಾರಸ್ವತವ್ಯಾಸ | 10. | ವಿಧಾತೃವ್ಯಾಸ |
| 11. | ತ್ರಿವೃಷಾವ್ಯಾಸ | 12. | ಭರದ್ವಾಜವ್ಯಾಸ |
| 13. | ಅಂತರಿಕ್ಷವ್ಯಾಸ | 14. | ವಪ್ರೀವ್ಯಾಸ |
| 15. | ತ್ರೈಯಾರುಣವ್ಯಾಸ | 16. | ಧನಂಜಯವ್ಯಾಸ |
| 17. | ಕೃತಂಜಯವ್ಯಾಸ | 18. | ಅರುಣಾರ್ಕವ್ಯಾಸ |
| 19. | ಭಾರದ್ವಾಜವ್ಯಾಸ | 20. | ಗೌತಮವ್ಯಾಸ |
| 21. | ಉತ್ತಮವ್ಯಾಸ | 22. | ವಾಜಿಶ್ರವಸ್‌ವ್ಯಾಸ |
| 23. | ತೃಣಬಿಂದುವ್ಯಾಸ | 24. | ಭಾರ್ಗವವ್ಯಾಸ |
| 25. | ಶಕ್ತಿವ್ಯಾಸ | 26. | ಅಹಂಪರಾಶರವ್ಯಾಸ |
| 27. | ಜಾತೂಕರ್ಣ್ಯವ್ಯಾಸ | 28. | ಕೃಷ್ಣದ್ವೈಪಾಯನವ್ಯಾಸ |

156B ಹಿಂದೆ ಬರೆಯಲ್ಪಟ್ಟ ಇಪ್ಪತ್ತೆಂಟು ಜನವ್ಯಾಸರಲ್ಲಿ ಇಪ್ಪತ್ತೊಂದನೆಯ ಉತ್ತಮವ್ಯಾಸನಿಗೆ ಹರ್ಯಾತ್ಮವ್ಯಾಸ ಎಂಬುದಾಗಿ ಬೇರೊಂದು ಹೆಸರು ಇದೆ. ಇಪ್ಪತ್ತೆರಡನೆಯ ವ್ಯಾಸನಾದ ವಾಜಿಶ್ರವಸ್ಸನೆಂಬುವವನಿಗೆ ಸೋಮಶುಷ್ಮಾಯಣ ಎಂಬುದಾಗಿ ಇನ್ನೊಂದು ಹೆಸರು ಇದೆ. ಇಪ್ಪತ್ತಮೂರನೆಯ ವ್ಯಾಸನಾದ ತೃಣಬಿಂದುವ್ಯಾಸನಿಗೆ ಋಕ್ಷ ಎಂಬುದಾಗಿ ಮತ್ತೊಂದು ಹೆಸರು ಇದೆ. ಇಪ್ಪತ್ತನಾಲ್ಕನೆಯ ವ್ಯಾಸನಾದ ಭಾರ್ಗವನೆಂಬುವವನಿಗೆ ವಾಲ್ಮೀಕಿ ಎಂಬ ಇನ್ನೊಂದು ಹೆಸರು ಇದೆ.

ಸ್ವಯಂಭೂವ್ಯಾಸನಿಂದ ಹಿಡಿದು ಕೃಷ್ಣದ್ವೈಪಾಯನವ್ಯಾಸನವರೆಗಿರುವ ಇಪ್ಪತ್ತೆಂಟು ಜನ ಪ್ರಾಚೀನ ವ್ಯಾಸರೊಡನೆ, "ಮುಂದಿನ ದ್ವಾಪರದಲ್ಲಿ ದ್ರೋಣಪುತ್ರನಾದ ಅಶ್ವತ್ಥಾಮನು ವ್ಯಾಸನಾಗುವನು" ಎಂಬ ವಾಕ್ಯದಿಂದ ದ್ರೋಣಾಚಾರ್ಯರ ಮಗನಾದ ಅಶ್ವತ್ಥಾಮನಿಗೆ ಮುಂದೆ ಬರುವ ದ್ವಾಪರದಲ್ಲಿ

(ಇಪ್ಪತ್ತೊಂಭತ್ತನೆಯ) ಮುಂದಿನ ವ್ಯಾಸನಾಗುವಿಕೆಯು ಇದೆ ಎಂಬುದಾಗಿ ವಿಷ್ಣುಪುರಾಣದಲ್ಲಿ ಹೇಳಲಾಗಿದೆ.

## ಶಿಲ್ಪಪಂಚಬ್ರಹ್ಮಸ್ವರೂಪ

### (ವಿಶ್ವಪುರಾಣದಲ್ಲಿ ಅಂತರ್ಗತವಾದ ದೇವಶಿಲ್ಪಗ್ರಂಥದಲ್ಲಿ)

ಮನು, ಮಯ, ತ್ವಷ್ಟ್ರು, ವಿಶ್ವಜ್ಞ ಮತ್ತು ಶಿಲ್ಪಿಗಳೆಂಬ ಐದು ಜನರ ಮೂರ್ತಿ ಸ್ವರೂಪಗಳನ್ನು ಎಲೈ ಕಾಲಹಸ್ತಿಮಹಾಮುನಿಯೇ ನನಗೆ ತಿಳಿಸು. 457

ಆ ಐದು ಜನರಲ್ಲಿ

## ಮನುಬ್ರಹ್ಮನ ಸ್ವರೂಪ

### (ವಿಶ್ವಪುರಾಣದಲ್ಲಿ)

ಎಲೈ ರಾಜನೇ ! ಮನುಬ್ರಹ್ಮನ ಸ್ವರೂಪವನ್ನು ಹೇಳುತ್ತೇನೆ ಕೇಳು. ಮನುಬ್ರಹ್ಮನು ಸ್ಫಟಿಕಶಿಲೆಯಂತೆ ಶುಭ್ರನಾಗಿದ್ದಾನೆ. ತನ್ನ ದೇಹಕ್ಕೆ ವಿಭೂತಿಯನ್ನು ಬಳಿದುಕೊಂಡಿದ್ದಾನೆ. ಮುಗುಳ್ನಗೆಯುಳ್ಳ, ಪ್ರಸನ್ನವಾದ ಐದು ಮುಖಗಳಿಂದ ಇವನು ಪರಿಶೋಭಿಸುತ್ತಿರುವನು. 458

ಹೊಳೆಯುತ್ತಿರುವ ಅರ್ಧಚಂದ್ರನನ್ನು ಜಟೆಗಳ ರಾಶಿಯಿಂದ ಕಟ್ಟಿ ತಲೆಗೆ ಅಲಂಕರಿಸಿಕೊಂಡಿದ್ದಾನೆ. ಇವನ ತಲೆಯ ಮೇಲಿನಿಂದ ಗಂಗಾನದಿಯ ನೀರು ಹರಿಯುತ್ತಾ ಇಡೀ ಶರೀರವೇ ತೊಯ್ದು ಹೋಗಿದೆ. ನೀಲಿಯ ಬಣ್ಣದ ಕುತ್ತಿಗೆಯುಳ್ಳವನಾಗಿದ್ದಾನೆ. 459

ಸದಾಕಾಲ ಕಾಳಿಯೊಡನೆ ಒಡನಾಡಿಯಾಗಿದ್ದಾನೆ. ಸಾಮವೇದ ಬ್ರಾಹ್ಮಣನು ಇವನು. ಇವನಿಗೆ ಮೂರು ಕಣ್ಣುಗಳು ಇವೆ. ಕಿವಿಗಳಿಗೆ ಕುತ್ತಿಗೆಗೆ ಹಾವುಗಳು ಸುತ್ತಿಕೊಂಡು ಹೆಡೆಯೆತ್ತಿ ನಿಂತಿದ್ದು ಅವುಗಳ ತಲೆಯ ಮೇಲಿನ ಮಾಣಿಕ್ಯ ಮಣಿಗಳಿಂದ ಇವನ ಶರೀರವು ರಂಜಿತವಾಗಿದೆ. 460

ಲೇಖನೀ, ಪುಸ್ತಕ, ಪಾಶ, ಅಕ್ಷಸೂತ್ರ, ದಂಡ, ಕಮಂಡಲು, ಶೂಲ, ವಜ್ರ, ವರದಮುದ್ರೆ, ಅಭಯಮುದ್ರೆಗಳನ್ನು ಹತ್ತು ಕೈಗಳಿಂದ ಹಿಡಿದುಕೊಂಡಿದ್ದಾನೆ. 461

ಸಿದ್ಧರು, ಚಾರಣರು, ಗಂಧರ್ವರು, ಯಕ್ಷರು ಮತ್ತು ಕಿನ್ನರರುಗಳಿಂದ ಸೇವಿತನಾಗಿದ್ದಾನೆ. ಮುನಿಗಣಗಳು ಇವನನ್ನು ಸ್ತೋತ್ರ ಮಾಡುತ್ತಿವೆ. ದೇವತಾಸಮೂಹದ ಒಡೆಯ ಇಂದ್ರನು ಇವನನ್ನು ನಮಸ್ಕರಿಸುತ್ತಿದ್ದಾನೆ. ಈ ಮನುಬ್ರಹ್ಮನು ವಿಶ್ವವನ್ನು ಮೋಹಗೊಳಿಸುತ್ತಾ ಇದ್ದಾನೆ. 462-462A

(ಬಿಳಿಯ ಬಣ್ಣ)

## ಮಯಬ್ರಹ್ಮಸ್ವರೂಪ

(ವಿಶ್ವಪುರಾಣದಲ್ಲಿ)

ಮಯಬ್ರಹ್ಮನು ನೀಲಿಯ ಮೋಡದಂತೆ ಕಪ್ಪಾದ ದೇಹಕಾಂತಿಯುಳ್ಳವನು. ಇವನ ಕಣ್ಣುಗಳು ಕಮಲ ಹೂವಿನಂತೆ ನಿರ್ಮಲವಾಗಿವೆ. ಇವನಿಗೆ ನಾಲ್ಕು ಕೈಗಳಿವೆ. ಇವನು ಗುಡಾಕೇಶ (ನಿದ್ರೆ, ನಿಂದೆ ಎಲ್ಲವನ್ನು ಗೆದ್ದವನು ಗುಡಾಕೇಶ. ಅವನು ಹರಿ). ಗರುಡಾಸನದ ಮೇಲೆ ಕುಳಿತಿದ್ದಾನೆ. 463

ಪೀತಾಂಬರಧಾರಿ. ಶಾಂತರೂಪನು. ಸಾತ್ವಿಕಗುಣವುಳ್ಳವನು. ಭಕ್ತರಲ್ಲಿ ಕರುಣಾಳು ಇವನು ವಕ್ಷಃಸ್ಥಲದಲ್ಲಿ ವನಮಾಲಾಂಕಿತನಾಗಿದ್ದಾನೆ. ಹಾರಗಳು, ಭುಜಕೀರ್ತಿ, ಕೈಬಳೆಗಳಿಂದ ಶೋಭಿತನಾಗಿದ್ದಾನೆ. 464

ಬಿಳಿಯ ಕೆನ್ನೆಗಳಿಂದ ಕಂಗೊಳಿಸುತ್ತಿರುವ ಇವನು ಆ ಕೆನ್ನೆಗಳಲ್ಲಿ ಪ್ರತಿಬಿಂಬಿತವಾಗಿರುವ ಕರ್ಣಕುಂಡಲಗಳನ್ನು ಕಿವಿಗೆ ಹಾಕಿಕೊಂಡು ಶೋಭಿಸುತ್ತಿದ್ದಾನೆ. ಶಂಖ, ಚಕ್ರ, ಗದೆ ಮತ್ತು ಶಾರ್ಙ್ಗವೆಂಬ ಬಿಲ್ಲು ಇವುಗಳನ್ನು ನಾಲ್ಕು ಕೈಗಳಲ್ಲಿ ಧರಿಸಿದ್ದಾನೆ. ದೇವತಾಸಮೂಹದಿಂದ ಕೂಡಿ-ಕೊಂಡಿದ್ದಾನೆ. 465

ಶಾಂತವಾದ ಈ ರೂಪದಿಂದ ಜ್ಞಾನಯೋಗಸಮನ್ವಿತನಾಗಿದ್ದಾನೆ. ಪ್ರಸಿದ್ಧನಾದ ಆ ಮಯನು ಸದಾಕಾಲ ಅನಾಯಾಸವಾಗಿ ಲೀಲೆಯಿಂದ ಪ್ರಪಂಚವನ್ನು ಸಂತೋಷದಿಂದ ಸಂರಕ್ಷಣೆ ಮಾಡುತ್ತಾನೆ. 466

(ನೀಲಿಯ ಮೋಡದ ಬಣ್ಣ)

## ತ್ವಷ್ಟ್ರುಬ್ರಹ್ಮಸ್ವರೂಪ

(ವಿಶ್ವಪುರಾಣದಲ್ಲಿ)

ತ್ವಷ್ಟ್ರುಬ್ರಹ್ಮನಿಗೆ ನಾಲ್ಕು ಮುಖಗಳು. ಕೆಂಪುಬಣ್ಣದ ದೇಹದಿಂದ ಹಂಸವಾಹನದ ಮೇಲೆ ಕುಳಿತು ಶೋಭಿಸುತ್ತಾನೆ. ಕೆಂಪುಬಟ್ಟೆಗಳನ್ನು ಧರಿಸಿದ್ದಾನೆ. ಪ್ರಕಾಶಿಸುತ್ತಿರುವ ಈ ದೇವನು ದಿವ್ಯವಾದ ಶ್ರೀಗಂಧವನ್ನು ಮೈಗೆ ಪೂಸಿಕೊಂಡಿದ್ದಾನೆ. 467

ಈ ಬ್ರಹ್ಮನು ನಾಲ್ಕು ಮುಖಗಳಿಂದ ನಾಲ್ಕು ವೇದಗಳನ್ನು ಪಠಿಸುತ್ತಿದ್ದಾನೆ. ಪದ್ಮ, ಲೇಖನಿ, ಪುಸ್ತಕ, ಕೊಡಲಿ, ಕಮಂಡಲು, 468

ಶೂಲ, ದಂಡ, ಅಕ್ಷಸೂತ್ರಗಳನ್ನು ಈ ದೇವನು ತನ್ನ ಎಂಟು ಕೈಗಳಿಂದ ಹಿಡಿದಿದ್ದಾನೆ. ದೇವತಾ-ಸಮೂಹದಿಂದ ಸೇವಿತನಾಗಿರುವ ಇವನು ಸೃಷ್ಟಿಕಾರ್ಯದಲ್ಲಿ ಸದಾ ತೊಡಗಿರುತ್ತಾನೆ. 469

(ಕೆಂಪುಬಣ್ಣ)

## ವಿಶ್ವಕರ್ಮಬ್ರಹ್ಮಸ್ವರೂಪ

(ವಿಶ್ವಪುರಾಣದಲ್ಲಿ)

ವಿಶ್ವಕರ್ಮನು ಕೆಂಪುಬಣ್ಣದ ದೇಹಕಾಂತಿಯುಳ್ಳವನು. ನಾಲ್ಕು ಕೈಗಳು ಮತ್ತು ಎರಡು ಕಣ್ಣುಗಳು ಇವನಿಗೆ ಇವೆ. ಗದೆ, ಶೂಲ, ವಜ್ರಾಯುಧ, ಇಕ್ಕಳಗಳನ್ನು ನಾಲ್ಕು ಕೈಗಳಿಂದ ಹಿಡಿದಿದ್ದಾನೆ. 470

ಇಡೀ ಶರೀರಕ್ಕೆ ವಿಭೂತಿಯನ್ನು ಬಳಿದುಕೊಂಡಿದ್ದಾನೆ. ನಾನಾವಿಧವಾದ ಅಲಂಕಾರಗಳಿಂದ ಶೋಭಿಸುತ್ತಾನೆ. ಚಿನ್ನದಂತೆ ಹೊಳೆಯುವ ಬಟ್ಟೆಗಳನ್ನು ಧರಿಸಿದ್ದಾನೆ. ಹೂವಿನ ಮಾಲೆಯನ್ನು ಕೊರಳಿಗೆ ಹಾಕಿಕೊಂಡಿದ್ದಾನೆ. ಪದ್ಮಾಸನದಲ್ಲಿ ಕುಳಿತಿದ್ದಾನೆ. ನಿರ್ಮಲವಾದ ದೇಹವುಳ್ಳವನು. ಇವನು ದೇವತೆಗಳ ಶಿಲ್ಪಿ ಎಂದು ಪ್ರಸಿದ್ಧನಾಗಿದ್ದಾನೆ. ಇವನು ದೇವತೆಗಳ ಆಜ್ಞಾಪರಿಪಾಲಕನು. 471-471A

(ಕೆಂಪುಬಣ್ಣ)

## ಶಿಲ್ಪಿಬ್ರಹ್ಮಸ್ವರೂಪ

(ವಿಶ್ವಪುರಾಣದಲ್ಲಿ)

157A ಶಿಲ್ಪಿಯು ಮರಕತಮಣಿಯಂತೆ ಕಪ್ಪಾದ ದೇಹವುಳ್ಳವನು. ಇವನು ಒಂದು ಸಾವಿರ ಕಣ್ಣು-ಗಳಿಂದ ಕಂಗೊಳಿಸುತ್ತಿದ್ದಾನೆ. ಬಣ್ಣಬಣ್ಣದ ಹೂಮಾಲೆಗಳನ್ನು ಧರಿಸಿದ್ದಾನೆ. ಆನೆಯ ಮೇಲೆ ಕುಳಿತಿದ್ದಾನೆ. 472

ದೇವತಾಸ್ತ್ರೀಯರು ಸಂಗೀತ, ನೃತ್ಯ, ವಾದ್ಯಗಳಿಂದ ಇವನನ್ನು ಸದಾ ಸಂತೋಷಗೊಳಿಸುತ್ತಿದ್ದಾರೆ. ಇದರಿಂದ ಅತ್ಯಂತ ಆನಂದವನ್ನು ಇವನು ಹೊಂದಿದ್ದಾನೆ. ಬಿಲ್ಲು ಮತ್ತು ವಜ್ರಾಯುಧಗಳನ್ನು ಎರಡು ಕೈಗಳಿಂದ ಹಿಡಿದಿದ್ದಾನೆ. ಇವನು ಜಿತೇಂದ್ರಿಯನಾಗಿದ್ದಾನೆ. ದೇವತೆಗಳ, ಋಷಿಗಳ ಸಮೂಹದಿಂದ ಸೇವಿತನಾಗಿದ್ದಾನೆ. ಇಂದ್ರನು ದೇವತೆಗಳ ಅಗ್ರೇಸರ ಮತ್ತು ರಾಕ್ಷಸರ ಕುಲನಾಶಕ. 473-473A

(ಮರಕತಮಣಿಯ ಬಣ್ಣ)

ಈ ಐದು ಜನ ಬ್ರಹ್ಮರೇ ಪಂಚಾಲಜಾತಿಗಳಿಗೆ ಕಾರಣೀಭೂತರಾದವರು. ಮೇಲೆ ಹೇಳಿದ ಐದು ಜನರ ಚಿತ್ರಪ್ರತಿಮೆಗಳನ್ನು ಬರೆಯಲಾಗಿದೆ.

## 157A/1 ಅವುಗಳಲ್ಲಿ ಮನುಬ್ರಹ್ಮಸ್ವರೂಪ

(ವಿಶ್ವಪುರಾಣದ ದೇವಶಿಲ್ಪದಲ್ಲಿ)

ಇವನ ಸಂಬಂಧದಿಂದ ಕಬ್ಬಿಣದ ಕೆಲಸ ಮಾಡುವ ಕರ್ಮಾರರೆಂಬ ಜಾತಿಯ ಜನರು ಹುಟ್ಟಿದರು.

(ಸ್ಫಟಿಕಮಣಿಬಣ್ಣ)

157A/2 **ಮಯಬ್ರಹ್ಮಸ್ವರೂಪ**

**(ವಿಶ್ವಪುರಾಣದ ದೇವಶಿಲ್ಪದಲ್ಲಿ)**

ಇವನಿಂದ ಮರಗೆಲಸ ಮಾಡುವ ಬಡಗಿಗಳು ಹುಟ್ಟಿದರು.

(ನೀಲಮೇಘಬಣ್ಣ)

157A/3 **ವಿಶ್ವಕರ್ಮಬ್ರಹ್ಮಸ್ವರೂಪ**

**(ವಿಶ್ವಪುರಾಣದ ದೇವಶಿಲ್ಪದಲ್ಲಿ)**

ಇವನಿಂದ ಚಿನ್ನಬೆಳ್ಳಿ ಕೆಲಸ ಮಾಡುವ ಚಿನಿವಾರ ಜಾತಿಯ ಜನರು ಹುಟ್ಟಿದರು.

(ಕೆಂಪುಬಣ್ಣ)

157A/4 **ಶಿಲ್ಪಬ್ರಹ್ಮಸ್ವರೂಪ**

**(ವಿಶ್ವಪುರಾಣದ ದೇವಶಿಲ್ಪದಲ್ಲಿ)**

ಇವನಿಂದ ಕಲ್ಲುಕೆಲಸ ಮಾಡುವ ಕಲ್ಲುಕುಟಿಕ ಜಾತಿ ಜನರು ಹುಟ್ಟಿದರು.

(ಮರಕತಮಣಿಬಣ್ಣ)

157A/5 **ತ್ವಷ್ಟೃಬ್ರಹ್ಮಸ್ವರೂಪ**

**(ವಿಶ್ವಪುರಾಣದ ದೇವಶಿಲ್ಪದಲ್ಲಿ)**

ಇವನಿಂದ ಹಿತ್ತಾಳೆಪಾತ್ರೆ ಮೊದಲಾದ ಕೆಲಸ ಮಾಡುವ ಕಂಚುಗಾರ ಜಾತಿ ಜನರು ಹುಟ್ಟಿದರು.

(ಕೆಂಪುಬಣ್ಣ)

157B/1 **ಕಾಲಪುರುಷಸ್ವರೂಪ**

**(ಹೇಮಾದ್ರಿಯ ದಾನಖಂಡದ ಕಾಲಪುರುಷದಾನಪ್ರಕರಣದಲ್ಲಿ)**

ಕಾಲಪುರುಷದೇವನು ಕೈಯಲ್ಲಿ ಕತ್ತಿಯನ್ನು ಎತ್ತಿಹಿಡಿದಿದ್ದಾನೆ. ಉದ್ದವಾದ ಶರೀರ ಇವನದು. ದಾಸವಾಳದ ಹೂಗಳನ್ನು ಕಿವಿಗಳಿಗೆ ಕುಂಡಲಗಳನ್ನಾಗಿ ಹಾಕಿಕೊಂಡಿದ್ದಾನೆ. ಕಪ್ಪುದೇಹ ಇವನದು. ಕೆಂಪುಬಟ್ಟೆಗಳನ್ನು ಧರಿಸಿದ್ದಾನೆ. ಕೊರಳಲ್ಲಿ ಹೂಮಾಲೆ ಇದೆ. ಶಂಖಮಾಲೆಯನ್ನು ಅಲಂಕರಿಸಿ-ಕೊಂಡಿದ್ದಾನೆ. **474**

ಹರಿತವಾದ ಸಣ್ಣಕತ್ತಿಯನ್ನು (ಚಾಕುವನ್ನು) ಸೊಂಟಪಟ್ಟಿಯಲ್ಲಿ ಸಿಕ್ಕಿಸಿಕೊಂಡಿದ್ದಾನೆ. ಇದರಿಂದ ಇವನ ನಡುಪಟ್ಟಿಯು ಹೊಳೆಯುತ್ತಿದೆ. ಎರಡೂ ಕಾಲುಗಳಿಗೆ ಚಪ್ಪಲಿಗಳನ್ನು ಹಾಕಿಕೊಂಡಿದ್ದಾನೆ.

ಕಪ್ಪುಕಂಬಳಿಯನ್ನು ಹೊದ್ದುಕೊಂಡಿದ್ದಾನೆ. ತನ್ನ ಎಡ ಅಂಗೈಯಲ್ಲಿ ಮಾಂಸದ ಮುದ್ದೆಯನ್ನು ಹಿಡಿದುಕೊಂಡಿದ್ದಾನೆ. 475-475A

(ನೀಲಿಬಣ್ಣ)

ಅಸಿಪುತ್ರೀ ಎಂದರೆ ಸಣ್ಣಕತ್ತಿ ಅಥವಾ ಚಾಕು ಎಂದು ಅರ್ಥ.

157B/2 ಯಮನ ಕ್ರೂರರೂಪಧ್ಯಾನ

(ಶುಕಸಪ್ತತಿಯಲ್ಲಿ)

ಇವನ ದೇಹವು ಅರವತ್ತು ಯೋಜನ ವಿಸ್ತೀರ್ಣ ಮತ್ತು ನೂರು ಯೋಜನ ಎತ್ತರ ಉಳ್ಳ-ದ್ದಾಗಿದ್ದು, ಕೃಷ್ಣಪಕ್ಷದ ರಾತ್ರಿಯಂತೆ ಕಪ್ಪಾಗಿದೆ. ನೀಲಾಂಜನಬೆಟ್ಟದಂತೆ ಕಪ್ಪಾದ ದೇಹಕಾಂತಿಯು ಇವನಿಗಿದೆ. 476

ಇವನಿಗೆ ಉದ್ದವಾದ ಕೋರೆದಾಡೆಗಳು, ದೊಡ್ಡ ಬಾಯಿ ಇವೆ. ಸದಾಕಾಲ ಯಮದಂಡವನ್ನು ಹಿಡಿದಿರುತ್ತಾನೆ. ಪಾಪಕರ್ಮಿಗಳಲ್ಲಿ ಪ್ರತಿಯೊಬ್ಬನಿಗೂ ನಾನೇ ಇವನ ಕಣ್ಣಿಗೆ ಬೀಳಬಹುದೇನೋ (ಎಂಬ ಹೆದರಿಕೆಯಿರುತ್ತದೆ.) 477

(ಕಪ್ಪುಬಣ್ಣ)

157B/3 ಯಮನ ಸೌಮ್ಯರೂಪಧ್ಯಾನ

(ಶುಕಸಪ್ತತಿಯಲ್ಲಿ)

ವರದಮುದ್ರೆ ಮತ್ತು ಅಭಯಮುದ್ರೆಗಳು ಇವನ ಎರಡು ಕೈಗಳಲ್ಲಿವೆ. ಸೌಮ್ಯವಾದ ಸ್ವರೂಪ ಇವನದು. ಎಲ್ಲ ರೀತಿಯ ಆಭರಣಗಳನ್ನು ಅಲಂಕರಿಸಿಕೊಂಡಿದ್ದಾನೆ. ಪ್ರಿಯವಾಗಿ ಮಾತನಾಡುತ್ತಾನೆ. ವಿಶಾಲವಾದ ಕಣ್ಣುಗಳುಳ್ಳವನು. ಪಾದರಿಯ ಹೂವಿನಂತೆ ನಸುಗೆಂಪು ಬಣ್ಣದ ದೇಹಕಾಂತಿಯುಳ್ಳವನು. ಪ್ರಸನ್ನಮುಖವುಳ್ಳವನು. ಪುಣ್ಯಕರ್ಮಗಳನ್ನು ಮಾಡಿದ ಜನರ ಮಧ್ಯೆ ಪ್ರತಿಯೊಬ್ಬನೂ ನಾನು ಇವನ ಕಣ್ಣಿಗೆ ಬೀಳುವವನಾಗಲಿ ಎಂದು ಅವರು ಹೇಳುವಂತೆ ಇರಬೇಕು. (ಅಂದರೆ ಪುಣ್ಯಕಾರ್ಯ-ಗಳನ್ನು ಮಾಡಿದ ಜನರು "ಇವನ ದರ್ಶನವಾದರೆ ಸಾಕು, ನಾವು ಕೃತಕೃತ್ಯರು" ಎಂದು ಇವನ ಬಗ್ಗೆ ಹೇಳುತ್ತಾರೆ.) 478-479A

(ಪಾದರಿಹೂವಿನ ಬಣ್ಣ)

157B/4 ವನಸ್ಪತಿಯ ಸ್ವರೂಪ

(ಹೇಮಾದ್ರಿಯ ದಾನಖಂಡದಲ್ಲಿ)

ಮರದ ಸ್ಕಂಧಭಾಗವನ್ನು (ಮರದಲ್ಲಿ ಮೊದಲು ಕವಲೊಡೆಯುವ ಮಧ್ಯಭಾಗವನ್ನು) ಹತ್ತಿರುವ, ಚಿಗುರು ಮತ್ತು ಹೂಗೊಂಚಲುಗಳನ್ನು ಧರಿಸಿರುವವನು. 479B

ಎರಡು ತೋಳುಗಳುಳ್ಳವನು ವನಸ್ಪತಿದೇವನು.

(ಔಚಿತ್ಯಾನುಸಾರ ಹಳದಿ ಮತ್ತು ಹಸುರು ಮಿಶ್ರಿತವಾದ ಬಣ್ಣ)

158A/1

## ಬಡಬಾನಲಾಸ್ತ್ರಧ್ಯಾನ

(ಪ್ರಪಂಚಸಾರದಲ್ಲಿ)

ಬಾಣದ ತುದಿಯಲ್ಲಿರುವ ಕೋಣಾಕಾರದ ಮೇಲೆ ಇರುವ, ಬೆಳೆಯುತ್ತಿರುವ ತನ್ನ ಕಿರಣಗಳ ಜಾಲದಿಂದ ಬೇರೆಯವರನ್ನು ಸುಡುತ್ತಿರುವ, ಕೆಂಪುಬಟ್ಟೆಗಳನ್ನು ಧರಿಸಿರುವ, ಅರ್ಧಚಂದ್ರನನ್ನು ತಲೆಯಲ್ಲಿ ಅಲಂಕರಿಸಿಕೊಂಡಿರುವ, ದೇವನಾದ ಬಡಬಾಗ್ನಿಮುಖಾಸ್ತ್ರವನ್ನು ನಮಸ್ಕರಿಸುತ್ತೇನೆ. 480

(ಔಚಿತ್ಯಾನುಸಾರ ಕೆಂಪುಬಣ್ಣ)

158A/2

## ಬಡಬಾಗ್ನಿಸ್ವರೂಪ

(ಪ್ರಪಂಚಸಾರದಲ್ಲಿ)

ಮೂರುಕಣ್ಣುಗಳುಳ್ಳ, ಕೆಂಪಾದ ಚಂದ್ರನನ್ನು ತಲೆಯಲ್ಲಿ ಕಟ್ಟಿರುವ, ಅತ್ಯಂತ ಬೆಳ್ಳಗಿರುವ ಬಟ್ಟೆಗಳನ್ನು ಹಾಕಿಕೊಂಡಿರುವ, ಕೆಂಪಾದ ದೇಹವುಳ್ಳ, ಅನೇಕ ಬಗೆಯ ಅಲಂಕಾರಗಳನ್ನು ಮಾಡಿಕೊಂಡಿರುವ, ಸಮುದ್ರದೊಳಗಿರುವ, ಅಭಿಮತವಾದ ವರದಮುದ್ರೆ, ಶಕ್ತ್ಯಾಯುಧ, ಸ್ವಸ್ತಿಕಚಿಹ್ನೆ, ಅಭಯ-ಮುದ್ರೆಗಳನ್ನು ಕೈಗಳಲ್ಲಿ ಹಿಡಿದಿರುವ, ಚಿನ್ನದ ಸರಗಳನ್ನು ಕೊರಳಿಗೆ ಹಾಕಿಕೊಂಡು ಎಲ್ಲರಿಂದಲೂ ಸ್ತುತಿಸಲ್ಪಡುತ್ತಿರುವ ಬಡಬಾಗ್ನಿಯನ್ನು (ನಾನು ನಮಸ್ಕರಿಸುತ್ತೇನೆ.) 481

(ಕೆಂಪುಬಣ್ಣ)

158A/3

## ಕಾಲಕೂಟವಿಷಸ್ವರೂಪ

(ಮತ್ಸ್ಯಪುರಾಣದಲ್ಲಿ)

ಚಿನ್ನದ ಮುತ್ತಿನ ಆಭರಣಗಳಿಂದ ದೇಹವನ್ನು ಅಲಂಕರಿಸಿಕೊಂಡಿರುವ, ತಲೆಗೆ ಕಿರೀಟವನ್ನು ಧರಿಸಿರುವ, ಪೀತಾಂಬರಧಾರಿಯಾದ, ಕನ್ನೈದಿಲೆ ಮೊದಲಾದ ಹೂಗಳನ್ನು ಅಲಂಕರಿಸಿಕೊಂಡು ಶೋಭಿಸುತ್ತಿರುವ, ಮೋಡಗಳ ಭಯಂಕರವಾದ ಗುಡುಗುಗಳಂತೆ ವೇಗವಾಗಿ ಗರ್ಜಿಸುತ್ತಿರುವ (ಕಾಲಕೂಟವಿಷವನ್ನು ನಾನು ವಂದಿಸುತ್ತೇನೆ.) 482

(ನೀಲಿಬಣ್ಣ)

158A/4

## ಅಮೃತಲಕ್ಷಣ

(ಆಯುರ್ವೇದತಂತ್ರದಲ್ಲಿ)

ಮಧುರರಸವುಳ್ಳ, ಹಸಿವು-ಬಾಯಾರಿಕೆ-ಆಸೆಗಳನ್ನು ಹೋಗಲಾಡಿಸುವ, ಹುಟ್ಟು-ಸಾವು-ಮುಪ್ಪು ಮೊದಲಾದ ದೋಷಗಳನ್ನು ನಿವಾರಿಸುವ, ಸ್ವರ್ಗಲೋಕದಲ್ಲಿ ಜನಿಸಿದ ದೇವತೆಗಳಿಂದ ಉತ್ತಮವಾಗಿ ಸೇವಿಸಲ್ಪಡುತ್ತಿರುವ, ಬಿಳಿಯ ಬಣ್ಣವುಳ್ಳ, ಮಹತ್ತರ ತೇಜಸ್ಸುಳ್ಳ, ಮಂಗಳಮಯನಾದ ಅಮೃತ-ದೇವನನ್ನು ಸದಾ (ಮನಸ್ಸಿನಲ್ಲಿ) ಭಾವಿಸಿಕೊಳ್ಳುತ್ತೇನೆ. 483

(ಬಿಳಿಯಬಣ್ಣ)

## ಅಮೃತಪೂರ್ಣವಾದ ಕಮಂಡಲುವನ್ನು ಹಿಡಿದಿರುವ ಧನ್ವಂತರಿಯ ಸ್ವರೂಪ

(ಮತ್ಸ್ಯಪುರಾಣದಲ್ಲಿ)

ಬಿಳಿಯ ದೇಹವುಳ್ಳ, ಅಮೃತದಿಂದ ತುಂಬಿರುವ ಕಮಂಡಲುವನ್ನು ಹಿಡಿದಿರುವ ಧನ್ವಂತರಿ ದೇವನು (ಸಮುದ್ರಮಧ್ಯದಿಂದ) ಶರೀರರೂಪದಿಂದ ಮೇಲೆದ್ದು ಬಂದನು. 484

(ಬಿಳಿಯಬಣ್ಣ)

158B/1

## ಚಿತ್ರಸೇನಗಂಧರ್ವನ ಧ್ಯಾನ

(ಪ್ರಪಂಚಸಾರದಲ್ಲಿ)

ಮಣಿಗಳಿಂದ ರಚಿತವಾದ ಮಾಲೆಯನ್ನು ತೊಟ್ಟಿರುವ, ಹನ್ನೆರಡು ಜನ ಸ್ತ್ರೀಯರಿಂದ ಸುತ್ತುವರೆದಿರುವ, ದೇವತಾಸಮೂಹವನ್ನು ತನ್ನ ಮುಂದೆ ಉಳ್ಳ, ಬಯಸಿದ ಇಷ್ಟಾರ್ಥಗಳನ್ನು ನೀಡುವ, ಕನ್ಯಾದಾನದಲ್ಲಿ ದೀಕ್ಷಿತನಾದ, ದೇವಸಭೆ ಸುಧರ್ಮಾದಲ್ಲಿ ಸದಾ ಇರುವ, ಶುದ್ಧವಾದ ಚಿನ್ನದಂತೆ ಹೊಳೆಯುವ ಹೊಂಬಣ್ಣದ ದೇಹಕಾಂತಿಯುಳ್ಳ, ಚಿತ್ರಸೇನನೆಂಬ ಹೆಸರಿನ ಗಂಧರ್ವರಾಜನನ್ನು ನಾನು ವಂದಿಸುತ್ತೇನೆ. 485-486

ತಲೆಯ ತುರುಬಿನಲ್ಲಿ ಮಂದಾರಪುಷ್ಪವನ್ನು ಮುಡಿದಿರುವುದರಿಂದ ಮನೋಹರನಾಗಿರುವ, ಸುಂದರವಾದ ಹುಬ್ಬುಗಳುಳ್ಳ ಸುಂದರಿಯರು ಬಯಸುವ ಸುಂದರ ದೇಹವುಳ್ಳ, ಅಪ್ರಮೇಯನಾದ (ಅಳತೆಗೆ ಸಿಗದ), ಮನ್ಮಥನಿಗೆ ಸಮಾನನಾಗಿ ನಿತ್ಯವೂ ಮನೋಹರನಾಗಿ ಗೋಚರಿಸುವ, ಹಾರಾಡುವ ಮುಂಗುರುಳು-ಗಳುಳ್ಳ, ಕಮಲದಳಗಳಂತೆ ವಿಶಾಲವೂ, ಸುಂದರವೂ ಆದ ಕಣ್ಣುಗಳುಳ್ಳ, ಗಂಧರ್ವರಾಜ ಚಿತ್ರಸೇನನನ್ನು ನಾನು ವಂದಿಸುತ್ತೇನೆ. 487

(ಚಿನ್ನದ ಬಣ್ಣ)

158B/2 **ವಿಶ್ವಾವಸುಗಂಧರ್ವನ ಧ್ಯಾನ**

**(ಪ್ರಪಂಚಸಾರದಲ್ಲಿ)**

ಹೊಸದಾದ ರಸಯುತವಾದ ಬಿದಿರುಕಬ್ಬುಗಳ ಜಲ್ಲೆಗಳಿಂದ ಅಲಂಕೃತವಾದ ಶ್ರೇಷ್ಠವಾದ ರಥದಲ್ಲಿ ಕುಳಿತಿರುವ, ಹೆಂಗಳೆಯರು ತಮ್ಮ ಕರಕಮಲಗಳಿಂದ ಕಲ್ಹಾರಪುಷ್ಪಗಳ ಮಾಲೆಗಳನ್ನು ಹಿಡಿದು ಸೇವೆಗೈಯ್ಯುತ್ತಿರುವ, ಪ್ರಸನ್ನಮುಖದ, ಗಂಧರ್ವರ ರಾಜನಾದ ವಿಶ್ವಾವಸುವನ್ನು ಯಾವ ಮನುಷ್ಯನು ಸೇವಿಸುತ್ತಾ ಅವನ ಮಂತ್ರವನ್ನು ಏಕಾಗ್ರಚಿತ್ತನಾಗಿ ಜಪಿಸುತ್ತಾನೋ ಅಂತಹವನು ತಾನು ಬಯಸಿದ ಕನ್ಯೆಯನ್ನು ಪಡೆಯುವನು. **488**

**(ಗಂಧರ್ವನಾದ ಕಾರಣ ಚಿನ್ನದ ಬಣ್ಣ)**

159A/1 **ಸಾಮವೇದದ ಉಪವೇದವಾದ ಗಾಂಧರ್ವವೇದದ ಸ್ವರೂಪ**

**(ಮಂತ್ರರತ್ನಾಕರದಲ್ಲಿ)**

ಗಾಂಧರ್ವವೇದದೇವನು ವೀಣೆಯನ್ನು ಕೈಗಳಲ್ಲಿ ಹಿಡಿದಿದ್ದಾನೆ. ಇವನ ಕಣ್ಣುಗಳು ವಿಶಾಲ-ವಾಗಿವೆ. ಕೆಂಪಾದ ದೇಹ, ಗಿಳಿಯಂತೆ ಮುಖವಿದೆ. ಕೊರಳಲ್ಲಿ ಹೂಮಾಲೆಯನ್ನು ಧರಿಸಿದ್ದಾನೆ. ವಾಯವ್ಯದಿಕ್ಕಿನಲ್ಲಿ ವಾಸ ಮಾಡುತ್ತಾನೆ. ಇವನನ್ನು ಧ್ಯಾನ ಮಾಡಬೇಕು. **489**

**(ಕೆಂಪುಬಣ್ಣ)**

159A/2 **ಗಾಂಧರ್ವವೇದದ ಅಭಿಮಾನಿದೇವತೆಯಾದ ವಾಗ್ದೇವಿಯ ಧ್ಯಾನ**

**(ವಾಗ್ದೇವೀಪೂಜಾಕಲ್ಪದಲ್ಲಿ)**

ಶುಭ್ರವರ್ಣದಿಂದ ಕೂಡಿರುವ, ಬಿಳಿಯ ಬಟ್ಟೆಯನ್ನು ಧರಿಸಿರುವ, ತಲೆಯಲ್ಲಿ ಜಟೆಯನ್ನು ಕಟ್ಟಿ ಕಿರೀಟವನ್ನು ಧರಿಸಿರುವ, ಮೂರು ಕಣ್ಣುಗಳುಳ್ಳ, ನಾಲ್ಕು ಕೈಗಳುಳ್ಳ, ಎರಡು ಕೈಗಳನ್ನು ವೀಣೆಯ ಮೇಲಿಟ್ಟು, ಇನ್ನೆರಡು ಕೈಗಳಿಂದ ಪುಸ್ತಕ ಮತ್ತು ಜಪಮಾಲೆಯನ್ನು ಹಿಡಿದಿರುವ, ಶುಭ್ರವಾಗಿ ಹೊಳೆಯುವ ಆಭರಣಗಳನ್ನು ತೊಟ್ಟಿರುವ, ಬಿಳಿಯ ಹೂವನ್ನು ಮುಡಿದಿರುವ, ಪ್ರಕಾಶಮಾನಳಾಗಿ ದೇವಿ ಎನಿಸಿರುವ, ಜಗನ್ಮಾತೆಯಾದ, ಅಂಬಿಕೆಯಾದ, ಪೂರ್ಣಿಮೆಯ ಚಂದ್ರನಂತೆ ಸುಂದರವಾದ ಮುಖವುಳ್ಳ, ದಿವ್ಯದೇವತೆಯಾದ, ವಾಗ್ದೇವಿಯನ್ನು ನಾನು ಪೂಜಿಸುತ್ತೇನೆ. **490-491A**

**(ಬಿಳಿಯ ಬಣ್ಣ)**

**ಸ್ವರಚೂಡಾಮಣಿಗ್ರಂಥದಲ್ಲಿ ಸಂಗೀತವಿಚಾರ**

**ಈಗ ಷಡ್ಜ ಮೊದಲಾದ ಏಳು ಸ್ವರಗಳ ದೇವತೆ, ವಂಶ, ಜಾತಿ, ವಯಸ್ಸು, ಬಣ್ಣ ಮೊದಲಾದ ಮೂವತ್ತೆರಡು ಲಕ್ಷಣಗಳು**

(ನಾವು ರಚಿಸಿರುವ ಸ್ವರಚೂಡಾಮಣಿ ಎಂಬ

ಗ್ರಂಥಾನುಸಾರ ಬರೆಯಲಾಗುವುದು)

ಪೂರ್ಣದಯಾಮಯಿಯಾದ, ಬಯಸಿದ ಸಕಲ ಇಷ್ಟಾರ್ಥಗಳನ್ನು ನೀಡುವ, ಸಕಲ ಲೋಕಗಳಿಗೂ ಏಕೈಕಜನನಿಯಾದ, ತ್ರಿಪುರಸುಂದರಿ, ಶ್ರೀಚಾಮುಂಡಾದೇವಿಯನ್ನು ನಾನು ವಂದಿಸುತ್ತೇನೆ. 492

ನಂದಿ, ಭರತ ಮೊದಲಾದ ಆಚಾರ್ಯರು ರಚಿಸಿದ ಸಂಗೀತಶಾಸ್ತ್ರ ಸಮುದ್ರದಿಂದ ಸಾರವನ್ನು ಮೇಲೆತ್ತಿ ಬುದ್ಧಿವಂತರ ಸಂತೋಷಕ್ಕಾಗಿ, ನನ್ನ ಬುದ್ಧಿಗೆ ತಿಳಿದಷ್ಟು, 493

ಷಡ್ಜ ಮುಂತಾದ ಶ್ರೇಷ್ಠಸ್ವರಗಳ ಮೂವತ್ತೆರಡು ಲಕ್ಷಣಗಳಾದ - 1. ಕುಲ 2. ಜಾತಿ 3. ವಯಸ್ಸು 4. ಬಣ್ಣ 5. ದ್ವೀಪ 6. ರಸ 7. ಗೋತ್ರ 8. ವಾಹನ 9. ಅಧಿದೇವತೆ 10. ಮುಖ 11. ಕೈಗಳು 12. ಕಿವಿಗಳು 13. ಕಣ್ಣುಗಳು 14. ಮೂಗು 15. ಪಾದಗಳು 16. ಶರೀರ 17. ಆಯುಧಗಳು 18. ವಸ್ತ್ರಗಳು 19. ಹೂಗಳು 20. ಗಂಧ 21. ಭೋಜನ 22. ಭೂಷಣಗಳು 23. ವೃಕ್ಷ 24. ವನಿತಾ 25. ತಿಥಿ 26. ವಾರ 27. ನಕ್ಷತ್ರ 28. ರಾಶಿ 29. ಛಂದಸ್ಸು 30. ಸಮುದ್ರ 31. ಶೈಲ 32. ನದಿಗಳನ್ನು ಕ್ರಮವಾಗಿ ವರ್ಣಿಸುತ್ತೇನೆ. 494-496

ಈ ರೀತಿಯಾಗಿ ಇದು ಪೂರ್ವಪೀಠಿಕೆ.

### ಷಡ್ಜಸ್ವರಸ್ವರೂಪಲಕ್ಷಣ ಶ್ಲೋಕಗಳು

1. ಶ್ರೇಷ್ಠನಾದ ಷಡ್ಜಸ್ವರದೇವನು ದೇವವಂಶದಲ್ಲಿ ಹುಟ್ಟಿದವನು.
2. ಇವನು ಬ್ರಾಹ್ಮಣಜಾತಿಗೆ ಸೇರಿದವನು.
3. ಇವನಿಗೆ ಎಂಭತ್ತು ವರ್ಷ ವಯಸ್ಸು.
4. ಪಾದರಿಯ ಹೂವಿನಂತೆ ದೇಹಕಾಂತಿ ಇವನದು. 497

159B 5. ಜಂಬೂದ್ವೀಪದಲ್ಲಿ ಇರುತ್ತಾನೆ.
6. ವೀರರಸವುಳ್ಳವನು.
7. ವಹ್ನಿಗೋತ್ರದಲ್ಲಿ ಹುಟ್ಟಿದವನು.
8. ಹಂಸವಾಹನದ ಮೇಲೇರಿ ಹೋಗುತ್ತಾನೆ.
9. ಅಗ್ನಿಯು ಅಧಿದೇವತೆ.
10. ಇವನಿಗೆ ನಾಲ್ಕು ಮುಖಗಳಿವೆ.
11. ಎಂಟು ತೋಳುಗಳಿವೆ. 498

12. ಎಂಟು ಕಿವಿಗಳಿವೆ.

13. ಎಂಟು ಕಣ್ಣುಗಳಿವೆ.

14. ನಾಲ್ಕು ಮೂಗುಗಳು ಇವನಿಗೆ ಇವೆ.

15. ಇವನಿಗೆ ಎರಡು ಕಾಲುಗಳು.

16. ಸ್ಥೂಲವಾದ ದೇಹವುಳ್ಳವನು.

17. ಖಡ್ಗವನ್ನು ಹಿಡಿದಿದ್ದಾನೆ.

18. ಬಿಳಿಯ ಬಟ್ಟೆಗಳನ್ನು ಧರಿಸಿದ್ದಾನೆ. 499

19. ಜಾಜಿಯ ಹೂವು ಇವನಿಗೆ ಪ್ರಿಯವಾದುದು.

20. ಮೈಗೆ ಕಾಶ್ಮೀರ ಕುಂಕುಮವನ್ನು ಲೇಪಿಸಿಕೊಂಡಿದ್ದಾನೆ.

21. ಮೊಸರನ್ನವನ್ನು ತಿನ್ನುವುದು ಇವನಿಗೆ ಇಷ್ಟವಾದುದು.

22. ಮುತ್ತಿನ ಆಭರಣಗಳನ್ನು ಅಲಂಕರಿಸಿಕೊಂಡಿದ್ದಾನೆ. 500

23. ಮಾವಿನ ಮರವನ್ನು ಆಶ್ರಯಿಸಿದ್ದಾನೆ.

24. ಗಂಧರ್ವಯುವತಿಯರ ಮನಸ್ಸನ್ನು ರಂಜಿಸುವವನು.

25. ಪ್ರತಿಪತ್ತಿಥಿಯಲ್ಲಿ (ಪಾಡ್ಯಮಿಯಲ್ಲಿ) ಹುಟ್ಟಿದವನು.

26. ಶನಿವಾರ ಹುಟ್ಟಿದವನು.

27. ವರುಣನಕ್ಷತ್ರದಲ್ಲಿ (ಶತಭಿಷಾನಕ್ಷತ್ರ) ಹುಟ್ಟಿದವನು. 501

28. ಕುಂಭರಾಶಿಯಲ್ಲಿ ಜನಿಸಿದವನು.

29. ಅನುಷ್ಟುಪ್ ಛಂದಸ್ಸು ಇವನದು.

30. ಲವಣಸಮುದ್ರ ಇವನದು.

31. ಮೇರುಪರ್ವತದ ಮೇಲೆ ವಾಸಿಸುವವನು.

32. ಗಂಗಾನದಿಯ ದಡದಲ್ಲಿರುವವನು.

ಹೀಗೆ ಷಡ್ಜಸ್ವರದೇವನ ಸ್ವರೂಪವು ಉಕ್ತವಾಯಿತು. 502

(ಪಾದರಿಯ ಹೂವಿನ ಬಣ್ಣ)

ಬೇರೆ ಗ್ರಂಥದಲ್ಲಿ ಸಪ್ತಸ್ವರಗಳಿಗೆ ಬ್ರಾಹ್ಮೀ ಮೊದಲಾದ ದೇವತೆಗಳನ್ನು ಹೇಳಲಾಗಿದೆ.

159B ಎಲ್ಲವೂ ಚಿತ್ರಗಳೇ

160A

## ಋಷಭಸ್ವರ ಸ್ವರೂಪಲಕ್ಷಣ ಶ್ಲೋಕಗಳು

1. ಶ್ರೇಷ್ಠ ಋಷಭಸ್ವರದೇವನು ಋಷಿವಂಶದಲ್ಲಿ ಹುಟ್ಟಿದವನು.
2. ಕ್ಷತ್ರಿಯ ಜಾತಿಗೆ ಸೇರಿದವನು.
3. ಇವನಿಗೆ ಎಪ್ಪತ್ತು ವರ್ಷ ವಯಸ್ಸು.
4. ಹಳದಿಯ ಬಣ್ಣದ ದೇಹ. 503
5. ಶಾಕದ್ವೀಪದಲ್ಲಿದ್ದಾನೆ.
6. ಅದ್ಭುತರಸವನ್ನು ಆಶ್ರಯಿಸಿ ಉತ್ತಮನಾಗಿದ್ದಾನೆ.
7. ವೇದಗೋತ್ರದಲ್ಲಿ ಜನಿಸಿದವನು.
8. ಸಿಂಹವು ಇವನ ವಾಹನ.
9. ಬ್ರಹ್ಮನು ಇವನ ಅಧಿದೇವತೆ. 504
10. ಇವನಿಗೆ ಮೂರು ಮುಖಗಳು.
11. ಆರು ತೋಳುಗಳು.
12. ಆರು ಕಿವಿಗಳು.
13. ಆರು ಕಣ್ಣುಗಳು.
14. ಮೂರು ಮೂಗುಗಳು.
15. ಎರಡು ಪಾದಗಳು.
16. ಸೂಕ್ಷ್ಮವಾದ ಶರೀರ ಇವನದು.
17. ಈಟಿಯನ್ನು ಕೈನಿಂದ ಹಿಡಿದಿದ್ದಾನೆ. 505
18. ಹಳದಿಯ ಬಟ್ಟೆಗಳನ್ನು ಧರಿಸಿದ್ದಾನೆ.
19. ಸಂಪಿಗೆಯ ಹೂವು ಇವನಿಗೆ ಇಷ್ಟವಾದ ಹೂವು.
20. ಕಪ್ಪು ಅಗುರುವನ್ನು ಮೈಗೆ ಲೇಪಿಸಿಕೊಂಡಿದ್ದಾನೆ.
21. ಪಾಯಸಾನ್ನವು ಇವನಿಗೆ ಇಷ್ಟವಾದ ಭೋಜನ.
22. ನೀಲಮಣಿಯ ಆಭರಣಗಳನ್ನು ಧರಿಸಿದ್ದಾನೆ.
23. ಖರ್ಜೂರದ ಮರವನ್ನು ಆಶ್ರಯಿಸಿದ್ದಾನೆ. 506
24. ಕಿನ್ನರಸ್ತ್ರೀಯರೊಡನೆ ಇದ್ದಾನೆ.
25. ಇವನ ಜನ್ಮತಿಥಿಯು ಅಷ್ಟಮೀ.

26. ಇವನು ಹುಟ್ಟಿದ ವಾರ ಶುಕ್ರವಾರ.

27. ಚಿತ್ರಾನಕ್ಷತ್ರದಲ್ಲಿ ಇವನು ಹುಟ್ಟಿದವನು.

28. ಇವನ ಜನ್ಮರಾಶಿಯು ತುಲಾ.

29. ಇವನ ಛಂದಸ್ಸು ಗಾಯತ್ರೀ. 507

30. ಮೊಸರಿನ ಸಮುದ್ರವು ಇವನ ಸಮುದ್ರ.

31. ಮಹಾನಸಗಿರಿಯು ಇವನಿಗೆ ಇಷ್ಟವಾದ ಪರ್ವತ.

32. ಅನಘಾನದೀತೀರದಲ್ಲಿ ವಾಸಿಸುವವನು.

ಹೀಗೆ ಈ ಋಷಭಸ್ವರದೇವನು ಉಕ್ತನಾದನು. 508

(ಹಳದಿಯ ಬಣ್ಣ)

160A ಎಲ್ಲವೂ ಚಿತ್ರಗಳೇ

160B

## ಗಾಂಧಾರಸ್ವರಸ್ವರೂಪಲಕ್ಷಣ ಶ್ಲೋಕಗಳು

1. ಗಾಂಧಾರವೆಂಬ ಶ್ರೇಷ್ಠನಾದ ಸ್ವರದೇವನು ದೇವವಂಶದಲ್ಲಿ ಹುಟ್ಟಿದ್ದಾನೆ.
2. ವೈಶ್ಯಜಾತಿಗೆ ಸೇರಿದ್ದಾನೆ.
3. ಇವನಿಗೆ ಅರವತ್ತು ವರ್ಷಗಳು.
4. ಸಂಪಿಗೆ ಹೂವಿನಂತೆ ದೇಹದ ಬಣ್ಣವಿದೆ. 509
5. ಕುಶದ್ವೀಪದಲ್ಲಿ ವಾಸಿಸುತ್ತಾನೆ.
6. ರೌದ್ರರಸದೇವನು ಇವನು. (ರೌದ್ರಸ್ವರೂಪವುಳ್ಳವನು)
7. ಚಂದ್ರಗೋತ್ರದಲ್ಲಿ ಹುಟ್ಟಿದ್ದಾನೆ.
8. ಇವನ ವಾಹನ ಭೇರುಂಡ.
9. ಅಧಿದೇವತೆ ಸರಸ್ವತೀದೇವೀ. 510
10. ಇವನಿಗೆ ಎರಡು ಮುಖಗಳಿವೆ.
11. ನಾಲ್ಕು ತೋಳುಗಳಿವೆ.
12. ನಾಲ್ಕು ಕಿವಿಗಳಿವೆ.
13. ನಾಲ್ಕು ಕಣ್ಣುಗಳಿವೆ.
14. ಎರಡು ಮೂಗುಗಳಿವೆ.
15. ಎರಡು ಪಾದಗಳಿವೆ.

16. ಇವನ ಶರೀರವು ಉದ್ದವಾಗಿ ವಿಶಾಲವಾಗಿದೆ. 511

17. ಗದೆಯು ಇವನ ಆಯುಧ.

18. ಕೆಂಪುಬಟ್ಟೆಗಳನ್ನು ತೊಟ್ಟಿದ್ದಾನೆ.

19. ಇವನಿಗೆ ಪುನ್ನಾಗಪುಷ್ಪವು (ಸುರಹೊನ್ನೆಹೂವು) ಪ್ರಿಯವಾದುದು.

20. ಕಸ್ತೂರೀಮೃಗದ ಪರಿಮಳವನ್ನು ಮೈಗೆ ಲೇಪಿಸಿಕೊಂಡಿದ್ದಾನೆ.

21. ಭಕ್ಷ್ಯಗಳನ್ನು (ಕರಿದ ತಿಂಡಿಗಳನ್ನು) ತಿನ್ನುತ್ತಾನೆ.

22. ವಜ್ರಾಯುಧವನ್ನು ಅಲಂಕರಿಸಿಕೊಂಡಿದ್ದಾನೆ. 512

23. ಬಾಳೆಯ ಮರದಲ್ಲಿ ವಾಸಿಸುತ್ತಾನೆ.

24. ಯಕ್ಷಸ್ತ್ರೀಗೆ ಮುತ್ತುಕೊಡುವುದು ಇವನಿಗೆ ಪ್ರಿಯವಾದುದು.

25. ನವಮೀತಿಥಿಯಲ್ಲಿ ಇವನು ಹುಟ್ಟಿದ್ದಾನೆ.

26. ಶನಿವಾರದಲ್ಲಿ ಹುಟ್ಟಿದ್ದಾನೆ.

27. ವಸುನಕ್ಷತ್ರದಲ್ಲಿ (ಧನಿಷ್ಠಾನಕ್ಷತ್ರದಲ್ಲಿ) ಹುಟ್ಟಿದ್ದಾನೆ. 513

28. ಇವನು ಸಿಂಹರಾಶಿಯಲ್ಲಿ ಹುಟ್ಟಿದವನು.

29. ತ್ರಿಷ್ಟುಪ್‌ಛಂದಸ್ಸು ಇವನ ಛಂದಸ್ಸು.

30. ಮದ್ಯಸಮುದ್ರದಲ್ಲಿ ಹುಟ್ಟಿದವನು.

31. ದ್ರವಿಣಾಚಲಶಿಖರದಲ್ಲಿ ವಾಸಿಸುವವನು.

32. ಅದ್ಭುತರಸವನ್ನು ಆಶ್ರಯಿಸಿದ್ದಾನೆ.

33. ಬಾವಿ-ನದೀ ತೀರಗಳಲ್ಲಿಯೂ ವಾಸಿಸುತ್ತಾನೆ. 514

ಹೀಗೆ ಹೇಳಿದ ಲಕ್ಷಣಗಳಿಂದ ಗಾಂಧಾರವೆಂಬ ಮೂರನೆಯ ಶ್ರೇಷ್ಠನಾದ ಶ್ರೀಯುಕ್ತನಾದ ಸ್ವರದೇವನು ನಾಟ್ಯಾಚಾರ್ಯರಿಂದ ಉದಾಹೃತನಾಗಿದ್ದಾನೆ. 515

(ಸಂಪಿಗೆ ಹೂವಿನ ಬಣ್ಣ)

160B ಎಲ್ಲವೂ ಚಿತ್ರಗಳೇ

161A ಮಧ್ಯಮಸ್ವರಸ್ವರೂಪಲಕ್ಷಣಶ್ಲೋಕಗಳು

1. ಮಧ್ಯಮಸ್ವರದೇವನು ದೇವವಂಶದಲ್ಲಿ ಹುಟ್ಟಿದವನು.

2. ಬ್ರಾಹ್ಮಣಜಾತಿಯವನು.

3. ಇವನಿಗೆ ನಲವತ್ತುವರ್ಷಗಳ ವಯಸ್ಸು ಎಂದು ಹೇಳಲಾಗಿದೆ.
4. ಕುಂದಪುಷ್ಪಕ್ಕೆ ಸಮನಾದ ದೇಹಕಾಂತಿ ಇದೆ. 516
5. ಕ್ರೌಂಚದ್ವೀಪದಲ್ಲಿ ಇರುತ್ತಾನೆ.
6. ಬೀಭತ್ಸರಸದಿಂದ ಕೂಡಿರುತ್ತಾನೆ.
7. ಇವನು ವಿಷ್ಣುಗೋತ್ರದವನು.
8. ಮೃಗದ ಮೇಲೆ (ಜಿಂಕೆಯ ಮೇಲೆ) ಏರಿ ಕುಳಿತಿದ್ದಾನೆ.
9. ಇವನಿಗೆ ಶೈಲಪುತ್ರಿ ಪಾರ್ವತಿಯು ಅಧಿದೇವತೆಯಾಗಿದ್ದಾಳೆ. 517
10. ಇವನಿಗೆ ನಾಲ್ಕು ಮುಖಗಳಿವೆ.
11. ಎಂಟು ತೋಳುಗಳಿವೆ.
12. ಎಂಟು ಕಿವಿಗಳಿವೆ.
13. ಎಂಟು ಕಣ್ಣುಗಳಿವೆ.
14. ನಾಲ್ಕು ಮೂಗುಗಳು ಇವೆ.
15. ಎರಡು ಪಾದಗಳಿವೆ.
16. ಸಮವಾದ ದೇಹವುಳ್ಳವನಾಗಿದ್ದಾನೆ.
17. ಕೈಯಲ್ಲಿ ಚಕ್ರವನ್ನು ಹಿಡಿದಿದ್ದಾನೆ. 518
18. ನೀಲವಸ್ತ್ರಧಾರಿ ಇವನು.
19. ಮಲ್ಲಿಗೆಹೂಗಳನ್ನು ಮುಡಿದಿದ್ದಾನೆ.
20. ಹೈಮವಾಲಕಗಂಧವನ್ನು ಮೈಗೆ ಪೂಸಿಕೊಂಡಿದ್ದಾನೆ.
21. ಚಿತ್ರಾನ್ನಭೋಜನವು ಇವನಿಗೆ ಇಷ್ಟವಾದುದು.
22. ವೈದೂರ್ಯಮಣಿಗಳಿಂದ ಭೂಷಿತನಾಗಿದ್ದಾನೆ. 519
23. ನೇರಳೆಮರವನ್ನು ಆಶ್ರಯಿಸಿದ್ದಾನೆ.
24. ಕಿಂಪುರುಷಸ್ತ್ರೀಯೊಂದಿಗೆ ಇದ್ದಾನೆ.
25. ತದಿಗೆಯ ದಿವಸ ಇವನು ಹುಟ್ಟಿದವನು.
26. ಇವನು ಹುಟ್ಟಿದ ವಾರ ಭಾನುವಾರ.
27. ಇವನ ಜನ್ಮನಕ್ಷತ್ರ ಪಿತೃನಕ್ಷತ್ರ (ಭರಣಿನಕ್ಷತ್ರ) 520
28. ಸಿಂಹರಾಶಿಯಲ್ಲಿ ಇವನು ಹುಟ್ಟಿದ್ದಾನೆ.

29. ಬೃಹತೀಛಂದಸ್ಸಿನಿಂದ ಕೂಡಿದ್ದಾನೆ.

30. ಪೂಜ್ಯನಾದ ಇವನು ಘೃತಸಮುದ್ರದಲ್ಲಿ (ತುಪ್ಪದ ಸಮುದ್ರದಲ್ಲಿ) ವಾಸಿಸುತ್ತಾನೆ.

31. ಸರ್ವತೋಭದ್ರಶೈಲದಲ್ಲಿ ಹುಟ್ಟಿದವನು. **521**

32. ಇವನ ಮನಸ್ಸು ಸದಾ ಅಭಯಾನದೀತೀರದಲ್ಲಿ ವಿಹರಿಸಬೇಕೆಂದು ಬಯಸುತ್ತಿರುತ್ತದೆ. ಹೀಗೆ ಶ್ರೇಷ್ಠನಾದ ಮಧ್ಯಮಸ್ವರದೇವನು ಮೇಲೆ ಹೇಳಿದ ಲಕ್ಷಣಗಳಿಂದ ಉದಾಹೃತನಾಗಿದ್ದಾನೆ. **522**

(ಶುಭ್ರವಾದ ಬಣ್ಣ)

**161A** ಎಲ್ಲವೂ ಚಿತ್ರಗಳೇ

**161B** **ಪಂಚಮಸ್ವರಸ್ವರೂಪಲಕ್ಷಣಶ್ಲೋಕಗಳು**

1. ಪಂಚಮವೆಂಬ ಹೆಸರಿನ ಸ್ವರದೇವನು ಪಿತೃವಂಶದಲ್ಲಿ ಹುಟ್ಟಿದವನು.
2. ಶೂದ್ರಜಾತಿಗೆ ಸೇರಿದವನು.
3. ಇವನಿಗೆ ಮೂವತ್ತುವರ್ಷ ವಯಸ್ಸು.
4. ಕಪ್ಪುಬಣ್ಣವುಳ್ಳವನು.
5. ಶಾಲ್ಮಲೀದ್ವೀಪದಲ್ಲಿ ಹುಟ್ಟಿದವನು. 523
6. ಭಯಾನಕರಸವುಳ್ಳವನು.
7. ಶಂಭುಗೋತ್ರಕ್ಕೆ ಸೇರಿದವನು.
8. ಮೊಸಳೆಯು ಇವನ ವಾಹನ.
9. ಮಹಾವಿಷ್ಣುವು ಇವನ ಅಧಿದೇವತೆ.
10. ಇವನಿಗೆ ನಾಲ್ಕು ಮುಖಗಳಿವೆ.
11. ಇವನಿಗೆ ಎಂಟು ಕಣ್ಣುಗಳಿವೆ. 524
12. ಆನೆಯಂತೆ ಅಗಲವಾದ ಕಿವಿಗಳುಳ್ಳವನು.
13. ಆನೆಯಂತೆ ಸಣ್ಣ ಕಣ್ಣುಗಳುಳ್ಳವನು.
14. ನಾಲ್ಕು ಮೂಗುಗಳಿವೆ.
15. ಇವನಿಗೆ ಎರಡು ಕಾಲುಗಳು ಇವೆ.
16. ಇವನದು ದಷ್ಟಪುಷ್ಟವಾದ ಶರೀರ.

17. ಭಿಂಡಿವಾಳವೆಂಬ ಆಯುಧವನ್ನು ಚಿಗುರಿನಂತೆ ಸುಂದರವಾದ ಕೈಯಿಂದ ಹಿಡಿದುಕೊಂಡಿದ್ದಾನೆ. **525**

18. ಹಸಿರುಬಣ್ಣದ ಬಟ್ಟೆಗಳನ್ನು ತೊಟ್ಟಿದ್ದಾನೆ.

19. ಸಂಪಿಗೆಯ ಹೂವನ್ನು ತಲೆಯಲ್ಲಿ ಮುಡಿದಿದ್ದಾನೆ.

20. ಗೋರೋಚನವನ್ನು ಮೈಗೆ ಲೇಪಿಸಿಕೊಂಡಿದ್ದಾನೆ.

21. ಹಿಟ್ಟು ಮತ್ತು ಹಾಲು ಇವನ ಆಹಾರಗಳು. **526**

22. ಮರಕತ ಮಣಿಗಳಿಂದಾದ ಆಭರಣಗಳನ್ನು ಧರಿಸುವುದರಲ್ಲಿ ಇವನಿಗೆ ಆಸಕ್ತಿ.

23. ದಾಳಿಂಬೆಗಿಡವು ಇವನಿಗೆ ಪ್ರಿಯವಾದ ಗಿಡ.

24. ನಾಗಕನ್ಯೆಯೊಡನೆ ರತಿಸುಖವನ್ನು ಹೊಂದಲು ಇವನಿಗೆ ಅತ್ಯಂತ ಇಷ್ಟವಾದುದು.

25. ದ್ವಾದಶಿಯು ಇವನು ಹುಟ್ಟಿದ ತಿಥಿ.

26. ಇವನು ಬುಧವಾರ ಹುಟ್ಟಿದವನು. **527**

27. ಇವನ ಜನ್ಮನಕ್ಷತ್ರ ಉತ್ತರಾ.

28. ಇವನು ಕನ್ಯಾರಾಶಿಯಲ್ಲಿ ಹುಟ್ಟಿದವನು.

29. ಪಂಕ್ತಿ ಎಂಬ ಛಂದಸ್ಸಿನಿಂದ ಕೂಡಿರುವವನು.

30. ಇಕ್ಷುಸಮುದ್ರದಲ್ಲಿ ಆಶ್ರಯವನ್ನು ಪಡೆದಿದ್ದಾನೆ. **528**

31. ಸಹ್ಯಾದ್ರಿಬೆಟ್ಟದಲ್ಲಿ ವಾಸಿಸುತ್ತಾನೆ.

32. ಅನುಮತಿಯೆಂಬ ನದಿಯ ಪ್ರಿಯನು ಇವನು.

ಹೀಗೆ ಪಂಚಮಸ್ವರದೇವನು ಶಾಸ್ತ್ರಕುಶಲರೊಡಗೂಡಿ ಪ್ರಸಿದ್ಧನಾಗಿರುವನು. **529**

**(ಕಪ್ಪುಬಣ್ಣ)**

161B ಎಲ್ಲವೂ ಚಿತ್ರಗಳೇ

162A **ಧೈವತಸ್ವರಸ್ವರೂಪಲಕ್ಷಣಶ್ಲೋಕಗಳು**

1. ಧೈವತವೆಂಬ ಶ್ರೇಷ್ಠ ಸ್ವರದೇವನು ಋಷಿವಂಶದಲ್ಲಿ ಹುಟ್ಟಿದವನು.

2. ಕ್ಷತ್ರಿಯಜಾತಿಗೆ ಸೇರಿದವನು.

3. ಇವನಿಗೆ ಇಪ್ಪತ್ತುವರ್ಷ ವಯಸ್ಸು.

4. ಹಳದಿಬಣ್ಣದಂತೆ ಕಾಂತಿಯುಳ್ಳವನು. **530**

5. ಶ್ವೇತದ್ವೀಪದಲ್ಲಿ ಇರುತ್ತಾನೆ.
6. ಹಾಸ್ಯರಸದಿಂದ ಕೂಡಿದ್ದಾನೆ.
7. ನಾರದಗೋತ್ರದಲ್ಲಿ ಹುಟ್ಟಿದವನು.
8. ಗಿಳಿಯವಾಹನದ ಮೇಲೆ ಕುಳಿತು ಸಂಚರಿಸುತ್ತಾನೆ.
9. ತೇಜಸ್ವಿಯಾದ ಸೂರ್ಯನು ಇವನಿಗೆ ಅಧಿದೇವತೆ. 531
10. ಇವನಿಗೆ ಮೂರು ಮುಖಗಳು ಇವೆ.
11. ಇವನಿಗೆ ಆರು ಕೈಗಳಿವೆ.
12. ಇವನಿಗೆ ಆರು ಕಿವಿಗಳಿವೆ.
13. ಇವನಿಗೆ ಆರು ಕಣ್ಣುಗಳಿವೆ.
14. ಇವನಿಗೆ ಮೂರು ಮೂಗುಗಳಿವೆ.
15. ಇವನಿಗೆ ಎರಡು ಕಾಲುಗಳಿವೆ.
16. ಇವನ ದೇಹವು ಉದ್ದವಾಗಿದೆ.
17. ಬಾಣವು ಇವನ ಆಯುಧ. 532
18. ಚಿತ್ರವಸ್ತ್ರಗಳನ್ನು (ಬಣ್ಣಬಣ್ಣದ ಬಟ್ಟೆಗಳನ್ನು) ಧರಿಸಿದ್ದಾನೆ.
19. ಪೂಜ್ಯನಾದ ಇವನು ಕರವೀರಹೂಗಳ ಮಾಲೆಯನ್ನು (ಕೆಂಪುಕಣಗಿಲೆಹೂವಿನ ಮಾಲೆಯನ್ನು) ಧರಿಸಿದ್ದಾನೆ.
20. ಶ್ರೀಗಂಧವನ್ನು ಮೈಗೆ ಬಳಿದುಕೊಂಡಿರುತ್ತಾನೆ.
21. ಕ್ಷೀರಾನ್ನವನ್ನು ತಿನ್ನುವ ಮನಸ್ಸುಳ್ಳವನು. 533
22. ಗೋಮೇಧಿಕಾಮಣಿಯು ಇವನಿಗೆ ಪ್ರಿಯವಾದ ಮಣಿ.
23. ದ್ರಾಕ್ಷಿಯ ಬಳ್ಳಿಗಳಲ್ಲಿ ಆಶ್ರಯ ಪಡೆದಿದ್ದಾನೆ.
24. ದೇವತಾಸ್ತ್ರೀಯೊಡನೆ (ಅಪ್ಸರಸ್ಸ್ತ್ರೀಯೊಡನೆ) ಸಂಗ ಮಾಡಲು ಮನಸ್ಸುಳ್ಳವನು.
25. ಸಪ್ತಮೀ ತಿಥಿಯಲ್ಲಿ ಹುಟ್ಟಿದವನು.
26. ಗುರುವಾರದಲ್ಲಿ ಹುಟ್ಟಿದವನು. 534
27. ಪೂರ್ವಾಷಾಢಾನಕ್ಷತ್ರದಲ್ಲಿ ಹುಟ್ಟಿದವನು.
28. ಧನೂರಾಶಿಯಲ್ಲಿ ಹುಟ್ಟಿದವನು.

29. ಉಷ್ಣಿಕ್‌ಛಂದಸ್ಸಿನಿಂದ ಕೂಡಿದ್ದಾನೆ.

30. ಕ್ಷೀರಸಮುದ್ರದಲ್ಲಿ ಆಶ್ರಯಪಡೆದಿದ್ದಾನೆ. 535

31. ಶೈಲೇಂದ್ರಪರ್ವತದಲ್ಲಿ ವಾಸಿಸುವ ಮನಸ್ಸುಳ್ಳವನು.

32. ನಿಷ್ಪಾಪಾನದಿಯದಡದಲ್ಲಿ ವಿಹರಿಸುವವನು.

ಹೀಗೆ ಮೇಲೆ ಹೇಳಿದ ಎಲ್ಲ ಗುಣಗಳಿಂದ ಧೈವತಸ್ವರದೇವನು ಕೂಡಿ ಸುಪ್ರಸಿದ್ಧನಾಗಿದ್ದಾನೆ. 536

(ಹಳದಿಯ ಬಣ್ಣ)

162A ಎಲ್ಲವೂ ಚಿತ್ರಗಳೇ

162B

## ನಿಷಾದಸ್ವರಸ್ವರೂಪಲಕ್ಷಣಶ್ಲೋಕಗಳು

1. ನಿಷಾದವೆಂಬ ಹೆಸರಿನ ಶ್ರೇಷ್ಠನಾದ ಸ್ವರದೇವನು ದೈತ್ಯವಂಶದಲ್ಲಿ ಹುಟ್ಟಿದವನು.
2. ಇವನು ವೈಶ್ಯಜಾತಿಯವನು.
3. ಇವನು ಹತ್ತುವರ್ಷ ವಯಸ್ಸಿನವನು.
4. ಬೂದುಬಣ್ಣದಿಂದ ಕಂಗೊಳಿಸುತ್ತಾನೆ. 537
5. ಪುಷ್ಕರದ್ವೀಪವಾಸಿ ಇವನು.
6. ಶೃಂಗಾರರಸನಾಯಕನಿವನು.
7. ತುಂಬುರುಗೋತ್ರದಲ್ಲಿ ಹುಟ್ಟಿದವನು.
8. ಗಿಳಿಯು ಇವನ ಪ್ರಿಯವಾದ ವಾಹನ. 538
9. ಇವನ ಅಧಿದೇವತೆ ಗಣಪತಿ.
10. ಇವನಿಗೆ ಎರಡು ಮುಖಗಳಿವೆ.
11. ಇವನಿಗೆ ನಾಲ್ಕು ಕೈಗಳಿವೆ.
12. ಇವನಿಗೆ ನಾಲ್ಕು ಕಿವಿಗಳಿವೆ.
13. ಇವನಿಗೆ ನಾಲ್ಕು ಕಣ್ಣುಗಳಿವೆ.
14. ಇವನಿಗೆ ಎರಡು ಮೂಗುಗಳಿವೆ.
15. ಇವನಿಗೆ ಎರಡು ಕಾಲುಗಳಿವೆ. 539
16. ಅತಿದಪ್ಪವಾದ ಶರೀರವುಳ್ಳವನು.
17. ಇವನು ಅಂಕುಶವೆಂಬ ಆಯುಧವನ್ನು ಕೈಯಿಂದ ಹಿಡಿದಿದ್ದಾನೆ.
18. ರೇಷ್ಮೆಯ ವಸ್ತ್ರಗಳನ್ನು ತೊಟ್ಟಿದ್ದಾನೆ.

19. ಕಮಲದ ಹೂವನ್ನು ಮುಡಿದಿದ್ದಾನೆ.
20. ದೇವದಾರುಮರದ ಗಂಧವನ್ನು ಮೈಗೆ ಬಳಿದುಕೊಂಡಿದ್ದಾನೆ. 540
21. ಶಾಲ್ಯನ್ನವನ್ನು ತಿನ್ನುವುದು ಇವನಿಗೆ ಇಷ್ಟವಾದುದು.
22. ಪುಷ್ಯರಾಗವು ಇವನಿಗೆ ಪ್ರಿಯವಾದ ಮಣಿ.
23. ಬೇಲದ ಮರದ ಬುಡದಲ್ಲಿ ಇರುತ್ತಾನೆ.
24. ರಾಕ್ಷಸಹೆಂಗಸರ ಕುಚಗಳನ್ನು ಮರ್ದಿಸುತ್ತಾನೆ. 541
25. ಚತುರ್ಥೀತಿಥಿಯಲ್ಲಿ ಇವನು ಹುಟ್ಟಿದ್ದಾನೆ.
26. ಇವನು ಹುಟ್ಟಿದ ವಾರ ಮಂಗಳವಾರ.
27. ಮಿತ್ರನಕ್ಷತ್ರದಲ್ಲಿ (ಅನುರಾಧಾನಕ್ಷತ್ರದಲ್ಲಿ) ಹುಟ್ಟಿದವನು.
28. ವೃಶ್ಚಿಕರಾಶಿಯಲ್ಲಿ ಹುಟ್ಟಿದವನು.
29. ಇವನು ಜಗತೀಛಂದಸ್ಸಿನಿಂದ ಕೂಡಿದ್ದಾನೆ.
30. ಶುಭಸಮುದ್ರದಲ್ಲಿ ಆಶ್ರಿತನಾದವನು. 542
31. ಮಾನಸಸರೋವರದ ಉತ್ತರದಲ್ಲಿರುವ ಬೆಟ್ಟದಲ್ಲಿ ಇರುತ್ತಾನೆ.
32. ಅಮೃತಸರೋವರದಲ್ಲಿ ಆಶ್ರಯ ಪಡೆದಿದ್ದಾನೆ.

ಹೀಗೆ ನಿಷಾದಸ್ವರಪುಂಗವನು ನಾಟ್ಯಶಾಸ್ತ್ರವನ್ನು ಬಲ್ಲವರಿಂದ ವರ್ಣಿತನಾಗಿದ್ದಾನೆ. 543

(ಬೂದುಬಣ್ಣ)

ಮೂವತ್ತೆರಡು ಲಕ್ಷಣಗಳಿಂದ ಕೂಡಿರುವ, ವಂಶಾದಿಯಿಂದ ನದೀಪರ್ಯಂತವಾಗಿರುವ, ಗಾಯಕರಿಗೆ ಸುಖವನ್ನು ಉಂಟುಮಾಡುವ ಷಡ್ಜ ಮೊದಲಾದ ಶ್ರೇಷ್ಠಸ್ವರಗಳಿಗೆ ಸಂಬಂಧಿಸಿದ ಶ್ರೀ ಚಾಮುಂಡಾ ದೇವಿಯ ಕೃಪಾಪೂರ್ಣರಾದ ಕೃಷ್ಣರಾಜರಿಂದ ರಚಿತವಾದ ಸ್ವರಚೂಡಾಮಣಿಗ್ರಂಥವು ಚಂದ್ರ-ನಕ್ಷತ್ರಗಳಿರುವ ತನಕವೂ ಜಯಿಸಲಿ. 544-545

(ಸ್ವರಚೂಡಾಮಣಿಯು ಸಂಪೂರ್ಣವಾಯಿತು)

162B ಎಲ್ಲವೂ ಚಿತ್ರಗಳೇ

163A

## ಸಪ್ತಸ್ವರಗಳ ಹೆಸರುಗಳು

(ಅಮರಕೋಶದಲ್ಲಿ)

ನಿಷಾದ, ರಿಷಭ, ಗಾಂಧಾರ, ಷಡ್ಜ, ಮಧ್ಯಮ, ಧೈವತ, ಪಂಚಮಗಳೆಂದು ಏಳು ಸ್ವರಗಳು ಇವೆ. ಇವು ತಂತಿಗಳಿಂದಲೂ, ಕಂಠದಿಂದಲೂ ಹುಟ್ಟುವ ಸಂಗೀತದ ಸ್ವರಗಳು. 546

ಈ ಏಳುಸ್ವರಗಳನ್ನು ಹೇಳಿದ ಮೇಲೆ ಅಮರಸಿಂಹನು, ಏಳು ಸ್ವರಗಳ ಹಾಗೂ ವಿವಿಧ ದನಿಗಳ (ಶಬ್ದಗಳ) ಸಾದೃಶ್ಯವನ್ನು ಹೇಳುತ್ತಾನೆ -

ನವಿಲು ಷಡ್ಜಸ್ವರವನ್ನು ನುಡಿಯುತ್ತದೆ. ಹಸು ಮತ್ತು ಎತ್ತುಗಳು ರಿಷಭಸ್ವರದಿಂದ ಕೂಗುತ್ತವೆ. ಆಡು, ಕುರಿ, ಮೇಕೆಗಳ ಗುಂಪು ಗಾಂಧಾರಸ್ವರದಿಂದ ದನಿಗೈಯ್ಯುತ್ತವೆ. ಕ್ರೌಂಚಹಕ್ಕಿಯು ಮಧ್ಯಮಸ್ವರದಿಂದ ಕೂಗುತ್ತದೆ. 547

ಮರಗಿಡಗಳು ಹೂಬಿಡುವ ಕಾಲದಲ್ಲಿ ಕೋಗಿಲೆಯು ಪಂಚಮಸ್ವರದಲ್ಲಿ ಕೂಗುತ್ತದೆ. ಕುದುರೆಯು ಧೈವತಸ್ವರದಿಂದ ಕೆನೆಯುತ್ತದೆ. ಆನೆಯು ನಿಷಾದಸ್ವರದಿಂದ ಘೀಳಿಡುತ್ತದೆ. 548

### ಇನ್ನು ಮುಂದೆ ಮೂವತ್ತೆರಡು ರಾಗಗಳ ಲಕ್ಷಣಗಳು

(ಪ್ರಾಚೀನ ಸಂಗೀತಶಾಸ್ತ್ರ ಗ್ರಂಥವಾದ ಸಂಗೀತರತ್ನಾಕರದಲ್ಲಿ
ಹೇಳಿರುವಂತೆ ಬರೆಯಲ್ಪಡುತ್ತವೆ)

ಉಮಾಪತಿಯಾದ ಶಿವನಿಂದ ಹೇಳಲ್ಪಟ್ಟಿದ್ದೆಂದರೆ - ಹಿಂದೆ ಕುತೂಹಲದಿಂದ ನನ್ನದೇ ಐದು ಮುಖಗಳಿಂದ ರಾಗಗಳು ಹುಟ್ಟಿ, ಅವೆಲ್ಲ ಒಟ್ಟುಗೂಡಿ ಮೂವತ್ತಾರು ಸಂಖ್ಯೆಯ ರಾಗಗಳೆಂದು ನನ್ನಿಂದ ಉಕ್ತವಾಗಿವೆ. 549

163A/1 ### ಭೈರವರಾಗಸ್ವರೂಪ

ತಲೆಯಲ್ಲಿ ಗಂಗೆಯನ್ನು ಧರಿಸಿರುವ, ಹಣೆಯಲ್ಲಿ ಅರ್ಧಚಂದ್ರಾಕಾರದ ತಿಲಕವನ್ನಿಟ್ಟಿರುವ, ಮೂರು ಕಣ್ಣುಗಳುಳ್ಳ, ಹಾವುಗಳಿಂದ ತನ್ನ ಶರೀರವನ್ನು ಅಲಂಕರಿಸಿಕೊಂಡಿರುವ, ಆನೆಯ ಚರ್ಮವನ್ನು ತೊಟ್ಟುಕೊಂಡಿರುವ, ಹೊಳೆಯುವ ತ್ರಿಶೂಲ ಮತ್ತು ಕತ್ತಿಗಳನ್ನು ಕೈಗಳಿಂದ ಹಿಡಿದಿರುವ, ಮನುಷ್ಯರ ಮುಂಡಗಳ ಮಾಲೆಯನ್ನು ಕೊರಳಿನಲ್ಲಿ ಹಾಕಿಕೊಂಡಿರುವ, ಶುಭ್ರವಾದ ಬಟ್ಟೆಗಳನ್ನು ತೊಟ್ಟಿರುವ, ಶ್ರೇಷ್ಠನಾದ ಭೈರವರಾಗ ದೇವನು ಸರ್ವೋತ್ಕೃಷ್ಟನಾಗಿ ಜಯಿಸುತ್ತಿದ್ದಾನೆ. 550

### ಈ ರಾಗದ ಲಕ್ಷಣ

ಭೈರವರಾಗವು ಪುರುಷರಾಗ. ಧೈವತಸ್ವರವು ಈ ರಾಗದಲ್ಲಿ ಅಂಶ-ಗ್ರಹ-ನ್ಯಾಸವಾಗಿರುತ್ತದೆ. ರಿಷಭ ಮತ್ತು ಪಂಚಮಸ್ವರಗಳು ಇರುವುದಿಲ್ಲ. ಧೈವತ ಮತ್ತು ಮಧ್ಯಮಸ್ವರಗಳು ಅಂಶವಾಗಿರುತ್ತವೆ. ಧೈವತಾದಿಯು ಮೂರ್ಛನವಾಗಿರುತ್ತದೆ. ಯಾವ ರಾಗದಲ್ಲಿ ಧೈವತಸ್ವರವು ವಿಕೃತವಾಗಿ ಔಡವವಾಗಿರುತ್ತದೋ ಆ ರಾಗವು ಭೈರವರಾಗವೆಂದು ಹೇಳಲ್ಪಟ್ಟಿದೆ. ಹೀಗೆ ಮೇಲಿನ ಲಕ್ಷಣಗಳುಳ್ಳ ರಾಗವನ್ನು ಭೈರವರಾಗವೆಂದು ತಿಳಿಯಬೇಕು. 551-552A

### ಬೇರೆ ಕೆಲವರ ಅಭಿಮತದಲ್ಲಿ

ದೇವಕ್ರಿಯಾ, ಮೇಘರಂಜಿನೀ, ಕುರಂಜಿಗಳು ಈ ಭೈರವರಾಗದ ಸ್ತ್ರೀಯರೆಂದು (ರಾಗಿಣಿಯರೆಂದು) ಹೇಳಲಾಗಿದೆ. **552B**

ಮೂರ್ಛನಾ : ಮ ಪ ಧ ನಿ ಸ ರಿ ಗ ಮ.

**163A/2**

### ಮಧ್ಯಮಾದಿರಾಗಸ್ವರೂಪ

ಮಧ್ಯಮಾದಿಯು ಸ್ತ್ರೀರಾಗ. ಈ ರಾಗದೇವತೆಯನ್ನು ಇವಳ ಪತಿಯು ನಗುತ್ತಾ ತಬ್ಬಿಕೊಂಡು ತುಟಿಗಳನ್ನು ಮುತ್ತಿಕ್ಕುತ್ತಿದ್ದಾನೆ. ಇವಳ ಕಣ್ಣುಗಳು ಕಮಲದಂತೆ ವಿಶಾಲವಾಗಿ ಸುಂದರವಾಗಿವೆ. ಚಿನ್ನದಂತೆ ದೇಹವು ಹೊಂಬಣ್ಣದಿಂದ ಹೊಳೆಯುತ್ತಿದೆ. (ಕಾಶ್ಮೀರ) ಕುಂಕುಮವನ್ನು ಮೈಗೆ ಬಳಿದುಕೊಂಡಿದ್ದಾಳೆ. ಹೀಗಿರುವ ಇವಳನ್ನು ಮುನಿಶ್ರೇಷ್ಠರು ಮಧ್ಯಮಾದಿರಾಗದೇವತೆಯೆಂದು ಹೇಳಿದ್ದಾರೆ. **553**

### ಈ ರಾಗದ ಲಕ್ಷಣ

ಈ ರಾಗದಲ್ಲಿ ಮಧ್ಯಮಸ್ವರವು ರಾಗಾಂಗ, ಗ್ರಹ, ಅಂಶ, ನ್ಯಾಸಗಳಾಗಿರುತ್ತದೆ. ಇದನ್ನು ಏಳು ಸ್ವರಗಳಿಂದ ಹಾಡಬೇಕು. ಮೂರ್ಛನೆಯ ಪ್ರಾರಂಭದಲ್ಲಿ ಮಧ್ಯಮಸ್ವರವಿರುತ್ತದೆ. ಸಂಗೀತಶಾಸ್ತ್ರಕೋವಿದರು ಇದನ್ನು ಸಂಪೂರ್ಣರಾಗವೆಂದು ಹೇಳಿದ್ದಾರೆ. ಕೆಲವು ವೇಳೆ ರಿಷಭ ಮತ್ತು ಧೈವತ ಸ್ವರಗಳು ಇರುವುದಿಲ್ಲ ಎಂಬ ಅಭಿಪ್ರಾಯವೂ ಇದೆ. **554-554A**

ಮೂರ್ಛನಾ : ಸ ರಿ ಗ ಮ ಪ ಧ ನಿ

**163B/1**

### ಭೈರವೀರಾಗಸ್ವರೂಪ

ರಮಣೀಯವಾದ ಕೈಲಾಸಪರ್ವತದ ಶಿಖರದ ಮೇಲೆ ಸ್ಫಟಿಕಮಣಿಗಳಿಂದ ರಚಿತವಾದ ಪೀಠದ ಮೇಲೆ ಕುಳಿತಿರುವ ಮಹೇಶನನ್ನು ಅರಳಿರುವ ಕಮಲದಳಗಳಿಂದ ಪೂಜಿಸುತ್ತಿರುವ, ಕಂಚಿನ ವಾದ್ಯವನ್ನು ಕೈನಲ್ಲಿ ಹಿಡಿದಿರುವ, ಹಳದಿಯ ಬಣ್ಣದ ವಿಶಾಲವಾದ ಕಣ್ಣುಗಳುಳ್ಳ ಈ ಭೈರವಿಯು ಭೈರವನ ಸ್ತ್ರೀಯೆಂದು ಶ್ರೇಷ್ಠಕವಿಗಳಿಂದ ಉಕ್ತಳಾಗಿದ್ದಾಳೆ. **555**

### ಈ ರಾಗದ ಲಕ್ಷಣ

ಭೈರವಿಯು ಸ್ತ್ರೀರಾಗ. ಸಂಪೂರ್ಣರಾಗವೆಂದು ತಿಳಿಯಬೇಕು. ಮಧ್ಯಮಗ್ರಾಮ ಸಂಚಾರವಿರುತ್ತದೆ. ಚತುರರಾದ ಸಂಗೀತಶಾಸ್ತ್ರ ವಿದ್ವಾಂಸರು ಏಳು ಸ್ವರಗಳಿಂದ ಇದನ್ನು ಹಾಡಬೇಕು ಎಂದು ಹೇಳಿದ್ದಾರೆ. **556**

ಮೂರ್ಛನಾ : ಮ ಪ ಧ ನಿ ಸ ಗ ಮ

163B/2 ## ಬಂಗಾಳೀರಾಗಸ್ವರೂಪ

ಸಂಗೀತಶಾಸ್ತ್ರವೇತ್ತರು ಬಂಗಾಳೀರಾಗಸ್ವರೂಪವನ್ನು ಈ ಮುಂದಿನಂತೆ ಹೇಳಿದ್ದಾರೆ. ಇದು ಸ್ತ್ರೀರಾಗ. ಬಂಗಾಳೀ ರಾಗಿಣಿಯು ಅಂದವಾದ ಚಿಕ್ಕ ಪೆಟ್ಟಿಗೆಯನ್ನು ಕಂಕುಳಿನಲ್ಲಿಟ್ಟು ಕೊಂಡಿದ್ದಾಳೆ. ತನ್ನ ಎಡಗೈನಿಂದ ತ್ರಿಶೂಲವನ್ನು ಮೇಲಕ್ಕೆ ಎತ್ತಿ ಹಿಡಿದಿದ್ದಾಳೆ. ವಿಭೂತಿಯನ್ನು ಮೈಗೆ ಬಳಿದುಕೊಂಡು ಹೊಳೆಯುತ್ತಿದ್ದಾಳೆ. ದಟ್ಟವಾಗಿ ಬೆಳೆದಿರುವ ಜಟೆಗಳನ್ನು ಬಿಗಿದು ಕಟ್ಟಿ ಅಲಂಕಾರ ಮಾಡಿಕೊಂಡಿದ್ದಾಳೆ. ಮಧ್ಯಾಹ್ನಕಾಲದ ಸೂರ್ಯನಂತೆ ಪ್ರಖರವಾದ ತೇಜಸ್ಸಿನಿಂದ ಕಂಗೊಳಿಸುತ್ತಿದ್ದಾಳೆ. **557**

### ಈ ರಾಗದ ಲಕ್ಷಣ

ಬಂಗಾಳೀರಾಗವನ್ನು ಔಡವರಾಗವೆಂದು ತಿಳಿಯಬೇಕು. ಗ್ರಹ-ಅಂಶ-ನ್ಯಾಸಗಳಲ್ಲಿ ಷಡ್ಜಸ್ವರವನ್ನು ಹೊಂದಿರುತ್ತದೆ. ರಿಷಭ ಮತ್ತು ಧೈವತಸ್ವರಗಳು ಇರುವುದಿಲ್ಲ ಎಂದೂ ಅರಿಯಬೇಕು. ಷಡ್ಜಸ್ವರವು ಮೂರ್ಛನೆಯ ಪ್ರಾರಂಭದಲ್ಲಿ ಇರುತ್ತದೆ. ಇದು ಸಂಪೂರ್ಣ ರಾಗ. ಮೂರು ಗಾಂಧಾರಸ್ವರಗಳು ಇರುತ್ತವೆ ಎಂಬುದಾಗಿ ಕಲ್ಲಿನಾಥನು ಹೇಳಿದ್ದಾನೆ. **558-558A**

ಮೂರ್ಛನಾ : ಸ ಗ ಮ ಪ ನಿ ಸ

164A/1 ## ವರಾಟೀರಾಗಸ್ವರೂಪ

ಸುಂದರ ಬಳೆಗಳನ್ನು ತೊಟ್ಟ ಕೈನಿಂದ ಚಾಮರವನ್ನು ಹಿಡಿದು ತನ್ನ ಗಂಡನಿಗೆ ಬೀಸುತ್ತಾ ಅವನನ್ನು ವಿನೋದಗೊಳಿಸುತ್ತಿರುವ, ಮನೋಹರವಾದ ಕೂದಲುಳ್ಳ, ದೇವದಾರು ಮರದ ಹೂವುಗಳನ್ನು ಕಿವಿಯಲ್ಲಿ ಮುಡಿದಿರುವ, ಈ ಶ್ರೇಷ್ಠನಾರಿಯೇ ವರಾಟೀರಾಗದೇವತೆಯೆಂದು ಬಲ್ಲವರಿಂದ ಉಕ್ತಳಾಗಿದ್ದಾಳೆ. **559**

### ಈ ರಾಗದ ಲಕ್ಷಣ

ಸಂಗೀತಶಾಸ್ತ್ರವನ್ನು ಬಲ್ಲವರು ವರಾಟೀರಾಗವು (ಸ್ತ್ರೀರಾಗವೆಂದು), ಈ ರಾಗವು ಷಡ್ಜಸ್ವರವನ್ನು ಗ್ರಹ-ಅಂಶ-ನ್ಯಾಸಗಳಲ್ಲಿ ಹೊಂದಿದೆಯೆಂದು ಹೇಳಿದ್ದಾರೆ. ಇದು ಸಂಪೂರ್ಣರಾಗವಾಗಿದೆ. ಮೂರ್ಛನೆಯ ಆರಂಭದಲ್ಲಿ ಷಡ್ಜಸ್ವರವು ಇರುತ್ತದೆ. ಇದು ಕೀರ್ತಿಯನ್ನು ಹೆಚ್ಚಿಸುವ ರಾಗಿಣಿಯೆಂದೂ ತಿಳಿಸಿದ್ದಾರೆ. **560**

ಮೂರ್ಛನಾ : ಸ ರಿ ಗ ಮ ಪ ಧ ನಿ

164A/2 ## ಸೈಂಧವೀರಾಗಸ್ವರೂಪ

ಸೈಂಧವಿಯು ಭೈರವರಾಗದ ಸ್ತ್ರೀಯೆಂದು ಪ್ರಸಿದ್ಧಳಾಗಿದ್ದಾಳೆ. ಇವಳ ಕೈಯಲ್ಲಿ ತ್ರಿಶೂಲವಿದೆ. ಇವಳು

ಶಿವನಲ್ಲಿ ಭಕ್ತಿಯಿಟ್ಟವಳಾಗಿದ್ದಾಳೆ. ಕೆಂಪುಬಟ್ಟೆಗಳನ್ನು ತೊಟ್ಟಿದ್ದಾಳೆ. ಕೆಂಪು ದಾಸವಾಳದ ಹೂವುಗಳನ್ನು ಮುಡಿದಿದ್ದಾಳೆ. ಇವಳು ಅತ್ಯಂತ ಕೋಪಿಷ್ಠೆ. ವೀರರಸದಿಂದ ಕೂಡಿದ್ದಾಳೆ. 561

### ಈ ರಾಗದ ಲಕ್ಷಣ

ಸೈಂಧವೀರಾಗವು ಪೂರ್ಣರಾಗ. ಇದು ಸ್ತ್ರೀರಾಗ (ರಾಗಿಣಿ). ಗ್ರಹ-ಅಂಶ-ನ್ಯಾಸಗಳಲ್ಲಿ ಷಡ್ಜಸ್ವರವು ಇರುತ್ತದೆ. ಮೂರ್ಛನೋತ್ತರಮಂತ್ರದಿಂದ ಆಢ್ಯಳಾಗಿದ್ದಾಳೆ. ಕೆಲವರು ಇದನ್ನು ಔಡವಿಕರಾಗವೆಂದು ಹೇಳುತ್ತಾರೆ. ಈ ರಾಗದಲ್ಲಿ ಯಾವಾಗಲೂ ರಿಷಭಸ್ವರವು ಇರುವುದಿಲ್ಲ. ವೀರರಸದಲ್ಲಿ ಈ ರಾಗವನ್ನು ಬಳಸುತ್ತಾರೆ. 562-562A

ಮೂರ್ಛನಾ : ಸ ಗ ಮ ಪ ಧ ನಿ

164B/1

### ಮಾಲವಕೌಶಿಕರಾಗಸ್ವರೂಪ

ಮಾಲವಕೌಶಿಕರಾಗವು ಪುರುಷರಾಗ. ಇವನು ತನ್ನ ಮೈಗೆಲ್ಲ ಕೆಂಪುಬಣ್ಣವನ್ನು ಬಳಿದುಕೊಂಡಿದ್ದಾನೆ. ಬಿಳಿಯ ಕೋಲನ್ನು ಕೈಯಲ್ಲಿ ಹಿಡಿದಿದ್ದಾನೆ. ಇವನು ವೀರರಲ್ಲಿ ವೀರನು. ಎಲ್ಲರಿಗೂ ಹೊಡೆತಗಳನ್ನು ಕೊಡುತ್ತಾನೆ. ವೀರರು ಇವನನ್ನು ಸುತ್ತುವರಿದಿದ್ದಾರೆ. ಕೊರಳಿಗೆ ವೀರರ ಕಪಾಲಗಳನ್ನು ಮಾಲೆ ಮಾಡಿಕೊಂಡು ಹಾಕಿಕೊಂಡಿದ್ದಾನೆ. 563

### ಈ ರಾಗದ ಲಕ್ಷಣ

ಅಂಶ-ಗ್ರಹ-ನ್ಯಾಸಗಳಲ್ಲಿ ಷಡ್ಜಸ್ವರವು ಇರುತ್ತದೆ. ಇದು ಪೂರ್ಣಸ್ವರ. ಷಡ್ಜಸ್ವರವು ಮೂರ್ಛನೆಯ ಮೊದಲು ಇರುತ್ತದೆ. ಇದು ಕಾಕಲೀಸ್ವರದಿಂದ ಕೂಡಿರುತ್ತದೆ. (ಕಾಕಲೀನಿಷಾದಸ್ವರವು ಕಾಕಲೀ ಸ್ವರವೆಂದು ಕರೆಯಲ್ಪಡುತ್ತದೆ. ಕಾಕಲೀನಿಷಾದಸ್ವರ ಮತ್ತು ಅಂತರಗಾಂಧಾರಸ್ವರಗಳು ಷಡ್ಜಗ್ರಾಮದ ಶುದ್ಧಸ್ವರಗಳಾದ ಮೇಲೆ ತಿಳಿದು ಬಂದ ಅತಿ ಪ್ರಾಚೀನವಾದ ಸ್ವರಗಳು.) 564

ಮೂರ್ಛನಾ : ಸ ರಿ ಗ ಮ ಪ ಧ ನಿ

164B/2

### ತೋಡೀರಾಗಸ್ವರೂಪ

ತೋಡೀರಾಗವು ಸ್ತ್ರೀರಾಗ (ರಾಗಿಣಿ). ಇವಳ ದೇಹವು ಕಡ್ಡಿಯಂತೆ ಸಿಲುಪಾಗಿದ್ದು ಹಿಮ ಮತ್ತು ಬೆಟ್ಟದ ಮಲ್ಲಿಗೆ ಹೂವಿನಂತೆ ಬೆಳ್ಳಗೆ ಹೊಳೆಯುತ್ತಿದೆ. ಇವಳು ತನ್ನ ಮೈಗೆ ಕಾಶ್ಮೀರ ಕರ್ಪೂರವನ್ನು (ಪಚ್ಚಕರ್ಪೂರ)ವನ್ನು ಬಳಿದುಕೊಂಡಿದ್ದಾಳೆ. ಈ ರಾಗಿಣಿಯು ಕಾಡಿನ ಎಲ್ಲೆಗಳಲ್ಲಿ ತಿರುಗಾಡುವ ಜಿಂಕೆಗಳಿಗೆ ಆನಂದವನ್ನು ಉಂಟುಮಾಡುತ್ತಿದ್ದಾಳೆ. ಕೈಯಲ್ಲಿ ವೀಣೆಯನ್ನು ಇಟ್ಟುಕೊಂಡು ಕಂಗೊಳಿಸುತ್ತಿದ್ದಾಳೆ. 565

### ಈ ರಾಗದ ಲಕ್ಷಣ

ಈ ರಾಗವು ಅಂಶ-ಗ್ರಹ-ನ್ಯಾಸಗಳಲ್ಲಿ ಮಧ್ಯಮಸ್ವರವನ್ನು ಹೊಂದಿದೆ. ಇದರಲ್ಲಿ ಸೌವೀರೀ ಮೂರ್ಛನೆಯಿದೆ. (ಮಧ್ಯಮಸ್ವರದಿಂದ - ಮಧ್ಯಮಗ್ರಾಮವಿದ್ದರೆ ಅದು ಸೌವೀರೀ ಮೂರ್ಛನಾ.) ಅಂದರೆ ಇದರ ಮೂರ್ಛನೆಯ ಮೊದಲು ಮಧ್ಯಮಸ್ವರವಿದ್ದು, ಕೊನೆಯಲ್ಲೂ ಮಧ್ಯಮಸ್ವರವು ಬರುತ್ತದೆ. ಇದು ಸಂಪೂರ್ಣರಾಗ. ಸಂಗೀತವನ್ನು ಬಲ್ಲ ಜನರು ಇದನ್ನು ಶ್ರೀ ಕೌಶಿಕೀರಾಗವೆಂದೂ ಹೇಳಿದ್ದಾರೆ. ಕೆಲವರು ಷಡ್ಜಸ್ವರವು ಗ್ರಹ-ನ್ಯಾಸಗಳಲ್ಲಿ ಇರುತ್ತದೆಂದು ಹೇಳಿದ್ದಾರೆ. **566-566A**

ಮೂರ್ಛನಾ : ಮ ಪ ಧ ನಿ ಸ ರಿ ಗ ಮ

165A/1

### ಕುಂಭಾವತೀರಾಗಸ್ವರೂಪ

ಇದು ಸ್ತ್ರೀರಾಗ (ರಾಗಿಣಿ). ಈ ರಾಗವು ಸುಖವನ್ನು ಕೊಡುವಂತಹುದು. ರಸವನ್ನು ಅರಿಯುವಂತಹುದು. ಈ ರಾಗದೇವತೆಯ ಶರೀರವು ತಾರುಣ್ಯದಿಂದಲೂ ಮತ್ತು ಲಾವಣ್ಯದಿಂದಲೂ ಕೂಡಿದೆ. ಇವಳು ಗಾನಪ್ರಿಯಳಾಗಿದ್ದಾಳೆ. ಇವಳ ಸ್ವರವು ಕೋಗಿಲೆಯ ಸ್ವರದಂತೆ ಇಂಪಾಗಿದೆ. ಪ್ರಿಯಂವದೆಯಾದ ಇವಳಿಗೆ ಕೌಶಿಕೀರಾಗದೇವತೆಯೆಂದೂ ಹೆಸರಿದೆ. **567**

### ಈ ರಾಗದ ಲಕ್ಷಣ

ಧೈವತಸ್ವರವು ಈ ರಾಗದ ಅಂಶ-ಗ್ರಹ-ನ್ಯಾಸದಲ್ಲಿರುತ್ತದೆ. ಇದು ಷಾಡವರಾಗವಾಗಿದೆ. (ಆರೋಹಣ-ಅವರೋಹಣಗಳೆರಡರಲ್ಲೂ ಆರು ಸ್ವರಗಳಿದ್ದರೆ ಅದು ಷಾಡವರಾಗ.) ಇದರಲ್ಲಿ ಪಂಚಮಸ್ವರವು ಇರುವುದಿಲ್ಲ. ಈ ರಾಗಕ್ಕೆ ಕುಂಭಾವತೀರಾಗವೆಂದು ಹೆಸರಿದೆಯೆಂದು ತಿಳಿಯಬೇಕು. ಇದರಲ್ಲಿ ಪೌರವೀ ಮೂರ್ಛನೆಯಿರುತ್ತದೆ. (ಧೈವತದಿಂದ ಉಂಟಾಗುವ ಗ್ರಾಮಮೂರ್ಛನೆಗೆ ಪೌರವೀ ಮೂರ್ಛನಾ ಎಂದು ಹೆಸರು.) **568**

ಮೂರ್ಛನಾ : ಧ ನಿ ಸ ರಿ ಗ ಮ

165A/2

### ಗೌಡೀರಾಗಸ್ವರೂಪ

ಗೌಡೀರಾಗವು ಸ್ತ್ರೀರಾಗ (ರಾಗಿಣಿ). ಈ ರಾಗದೇವತೆಯು ಮಾವಿನ ಚಿಗುರುಗಳನ್ನು ಕಿವಿಗಳಲ್ಲಿ ಅಲಂಕರಿಸಿಕೊಂಡಿದ್ದಾಳೆ. ಕೋಗಿಲೆಯ ದನಿಯಂತೆ ಇವಳ ದನಿಯು ಇಂಪಾಗಿದೆ. ಇವಳು ಶ್ಯಾಮಲವರ್ಣೆ (ಕಪ್ಪುಬಣ್ಣದ ಶರೀರದವಳು). ಜೇನುತುಪ್ಪವು ನಿಧಾನವಾಗಿ ಹರಿಯುವಂತೆ ಅತ್ಯಂತ ಸೂಕ್ಷ್ಮ ನಾದವುಳ್ಳವಳು ಎಂಬುದಾಗಿ ಕೋಹಲನು ಹೇಳಿದ್ದಾನೆ. **569**

## ಈ ರಾಗದ ಲಕ್ಷಣ

ಈ ರಾಗದೇವತೆಯು ಸರ್ವಾಂಗಸುಂದರಿಯಾಗಿದ್ದಾಳೆ. ಷಡ್ಜಸ್ವರವು ಈ ರಾಗದ ಗ್ರಹ-ಅಂಶ-ನ್ಯಾಸಗಳಲ್ಲಿರುತ್ತದೆ. ರಿಷಭ ಮತ್ತು ಪಂಚಮಸ್ವರಗಳು ಈ ರಾಗದಲ್ಲಿ ಇರುವುದಿಲ್ಲ. ಇದು ಎಲ್ಲರಿಗೂ ಸುಖವನ್ನು ಕೊಡುವ ರಾಗವಾಗಿದೆ. ಇದರ ಮೂರ್ಛನೆಯ ಮೊದಲು ಷಡ್ಜಸ್ವರವು ಇರುತ್ತದೆಂದು ತಿಳಿಯಬೇಕು. **570**

ಮೂರ್ಛನಾ : ಸ ಗ ಮ ಧ ನಿ

**165B/1** ## ಗುಂಡಕ್ರಿಯಾರಾಗಸ್ವರೂಪ

ಇದು ಸ್ತ್ರೀರಾಗ. ಗುಂಡಕ್ರಿಯಾರಾಗಿಣಿಯೆಂದು ಈ ರಾಗದ ಹೆಸರು. ಇವಳ ಕಣ್ಣುಗಳು ದುಃಖದಿಂದ ಕೂಡಿವೆ. ಇವಳು ಕಠೋರವಾಗಿ ಮಾತನಾಡುತ್ತಾಳೆ. ಇವಳ ಮುಖವು ಬಾಗಿದೆ. ಇವಳ ಶರೀರವು ಕೋಲಿನಂತೆ ತೆಳ್ಳಗಿದ್ದು, ಭೂಮಿಯ ಧೂಳಿನಂತೆ ಕಂದುಬಣ್ಣವಾಗಿದೆ. ಇವಳು ತನ್ನ ಪ್ರಿಯನಿಂದ ದೂರವಾಗಿರುವುದರಿಂದ ಇವಳ ತಲೆಗಂಟು ಕೆದರಿಹೋಗಿ ತನ್ನ ಸೊಬಗನ್ನು ಕಳೆದುಕೊಂಡಿದೆ. ಅಂದರೆ ತನ್ನ ತಲೆಯನ್ನು ಬಾಚಿ ಅಲಂಕರಿಸಿಕೊಂಡಿಲ್ಲ. ಇವಳು ಗುಣಗಳನ್ನು ಉಂಟುಮಾಡುವವಳು. ಯುವತಿಯಾಗಿದ್ದಾಳೆ. ಇವಳದು ಬಡಕಲು ಶರೀರ - ಎಂಬುದಾಗಿ ಶಾಸ್ತ್ರದಲ್ಲಿ ವರ್ಣಿತಳಾಗಿದ್ದಾಳೆ. **571**

## ಈ ರಾಗದ ಲಕ್ಷಣ

ಈ ರಾಗದಲ್ಲಿ ರಿಷಭ ಮತ್ತು ಧೈವತ ಸ್ವರಗಳು ಇರುವುದಿಲ್ಲ. ಇದು ಗುಣವನ್ನುಂಟುಮಾಡುವ ಸ್ತ್ರೀರಾಗವಾಗಿದೆ (ರಾಗಿಣಿ). ಇದು ಔಡವರಾಗವೆಂದೂ ಕರೆಯಲ್ಪಟ್ಟಿದೆ. ನಿಗ್ರಹಾಂಶಗಳಲ್ಲಿ ನಿಷಾದ ಸ್ವರವು ಇರುತ್ತದೆ. ಇದರಲ್ಲಿ ಮೂರು ಷಡ್ಜಸ್ವರಗಳು ಇರುತ್ತವೆ ಎಂದು ಕೆಲವರು ಹೇಳುತ್ತಾರೆ. ಇದರಲ್ಲಿ ರಜನೀ ಮೂರ್ಛನೆಯಿರುತ್ತದೆ. (ನಿಷಾದಸ್ವರದಿಂದ ಪ್ರಾರಂಭವಾಗುವ ಷಡ್ಜಗ್ರಾಮದ ಮೂರ್ಛನೆಗೆ ರಜನೀಮೂರ್ಛನಾ ಎಂದು ಹೆಸರು. ಇದರಲ್ಲಿ ಸ್ವರಗಳು ನಿಷಾದದಿಂದ ಪ್ರಾರಂಭವಾಗಿ ನಿಷಾದದಲ್ಲಿ ಮುಗಿಯುತ್ತವೆ.) ಇದು ಮಾಳವರಾಗವನ್ನು ಆಶ್ರಯಿಸಿಕೊಂಡಿರುವ ಸ್ತ್ರೀರಾಗ (ರಾಗಿಣಿ). **572-572A**

ಮೂರ್ಛನಾ : ನಿ ಸ ಗ ಮ ಪ ನಿ | ಸ ಗ ಮ ಪ ನಿ ಸ |

**165B/2** ## ಕಕುಭಾರಾಗಸ್ವರೂಪ

ಕಕುಭಾರಾಗವು ಸ್ತ್ರೀರಾಗ (ರಾಗಿಣಿ). ಸಂಗೀತಶಾಸ್ತ್ರದಲ್ಲಿ ಈ ರಾಗದೇವತೆಯನ್ನು "ದಷ್ಟಪುಷ್ಟವಾದ,

ರಸವತ್ತಾದ, ಅಲಂಕೃತವಾದ ದೇಹವುಳ್ಳವಳು, ಚಂದ್ರನಂತೆ ಸುಂದರವಾದ ಮುಖವುಳ್ಳವಳು, (ಕೊರಳಿಗೆ) ಸಂಪಿಗೆ ಹೂವಿನ ಮಾಲೆಯನ್ನು ಹಾಕಿಕೊಂಡಿದ್ದಾಳೆ. ಕುಡಿಗಣ್ಣೋಟವನ್ನು ಬೀರುವ ಇವಳು ಅತ್ಯಂತ ವಿಚಿತ್ರವಾದ ಗಾನವುಳ್ಳವಳು. ಮನೋಹರೆ" ಎಂಬುದಾಗಿ ಹೇಳಲ್ಪಟ್ಟಿದ್ದಾಳೆ. **573**

### ಈ ರಾಗದ ಸ್ವರೂಪ

ಧೈವತಸ್ವರವು ಈ ರಾಗದ ಅಂಶ-ಗ್ರಹ-ನ್ಯಾಸಗಳಲ್ಲಿ ಇರುತ್ತದೆ. ಇದು ಸಂಪೂರ್ಣರಾಗ. ತೃತೀಯ ಮೂರ್ಛನೆಯಿಂದ ಹುಟ್ಟಿದುದು. ಶ್ರೀರಾಗರಸದಿಂದ ಭೂಷಿತವಾಗಿದೆ. **574**

ಮೂರ್ಛನಾ : ಧ ನಿ ಸ ರಿ ಗ ಮ ಪ ಧ

166A/1

### ಹಿಂದೋಳರಾಗದ ಸ್ವರೂಪ

ನಿತಂಬಿನೀ ಸ್ತ್ರೀಯಂತೆ ಮೆಲ್ಲಮೆಲ್ಲನೆ ಅಲೆಅಲೆಯಂತೆ ಅತ್ತಿಂದಿತ್ತ ಚಲಿಸುತ್ತಿರುವ ಉಯ್ಯಾಲೆಗಳಲ್ಲಿ ಆಟವಾಡುತ್ತಾ ಸುಖಪಡುತ್ತಿರುವ, ಆ ನಿತಂಬಿನೀ ಸ್ತ್ರೀಯರ ಕೆನ್ನೆಗಳಲ್ಲಿ ಆಸೆಯುಳ್ಳ ಹಿಂದೋಳರಾಗ ದೇವನು ಮುನಿಶ್ರೇಷ್ಠರಿಂದ ಉಕ್ತನಾಗಿದ್ದಾನೆ. **575**

### ಈ ರಾಗದ ಲಕ್ಷಣ

ಇದು ಪುರುಷರಾಗ. ಹಿಂದೋಳರಾಗದಲ್ಲಿ ರಿಷಭ, ಧೈವತಸ್ವರಗಳು ಇರುವುದಿಲ್ಲ. ಸಂಗೀತಶಾಸ್ತ್ರವೇತ್ತರು ಇದರಲ್ಲಿ ಮೂರು ರಿಷಭಸ್ವರಗಳು ಇರುತ್ತವೆ ಎಂದು ಹೇಳಿದ್ದಾರೆ. ಇದರಲ್ಲಿ ಶುದ್ಧಮಧ್ಯಮಗ್ರಾಮ ಮೂರ್ಛನೆಯಿರುತ್ತದೆ. ಇದು ಕಾಕಲಿನಿಷಾದಸ್ವರದಿಂದ ಕೂಡಿದೆ. ಇದು ಔಡವರಾಗವಾಗಿದೆ. **576**

ಮೂರ್ಛನಾ : ಸ ಗ ಮ ಪ ನಿ ಸ

166A/2

### ವೇಳಾವಲೀರಾಗಸ್ವರೂಪ

ಇದು ಸ್ತ್ರೀರಾಗ (ರಾಗಿಣಿ). ಈ ರಾಗದೇವತೆಯು ಭಾಷಣ ಮೊದಲಾದ ಮಂಗಲ (ಉತ್ಸವ)ಗಳಲ್ಲಿ ತನ್ನ ಪ್ರಿಯನಿಗೆ ಕಣ್ಸನ್ನೆಯಿಂದಲೇ ಮನ್ಮಥನನ್ನು ಬಾರಿಬಾರಿಗೂ ನೆನಪಿಸಿಕೊಡುತ್ತಾ ಇದ್ದಾಳೆ. ನಿತಂಬಿನಿಯಾದ ಇವಳು ನೀಲಿಯ ಕಮಲದಂತೆ ದೇಹಕಾಂತಿಯುಳ್ಳವಳಾಗಿದ್ದಾಳೆ. **577**

### ಈ ರಾಗದ ಲಕ್ಷಣ

ಧೈವತಸ್ವರವು ಈ ರಾಗದಲ್ಲಿ ಅಂಶ-ನ್ಯಾಸ-ಗ್ರಹವಾಗಿರುತ್ತದೆ. ಇದು ಪೂರ್ಣರಾಗ. ಇದಕ್ಕೆ ವೇಲಾವಳೀ ಎಂದು ಹೆಸರು. ಇದರಲ್ಲಿ ಪೌರವೀ ಮೂರ್ಛನೆಯಿರುತ್ತದೆ. (ಧೈವತದಿಂದ ಪ್ರಾರಂಭವಾಗುವ ಮಧ್ಯಮಗ್ರಾಮ ಮೂರ್ಛನೆಗೆ ಪೌರವೀ ಮೂರ್ಛನಾ ಎಂದು ಹೆಸರು.) ಈ ರಾಗವನ್ನು ವೀರರಸದಲ್ಲಿ ಬಳಸುತ್ತಾರೆ. **578**

ಮೂರ್ಛನಾ : ಧ ನಿ ಸ ರಿ ಗ ಮ ಪ ಧ

166B/1 ## ರಾಮಕಲಿರಾಗಸ್ವರೂಪ

ರಾಮಕಲಿರಾಗವು ಸ್ತ್ರೀರಾಗ. ಇವಳು ರಾಗಿಣೀ. ಈ ದೇವತೆಯು ಚಿನ್ನದ ಕಾಂತಿಯಿಂದ ಮಿರುಗುವ ಆಭರಣಗಳನ್ನು ತೊಟ್ಟಿದ್ದಾಳೆ. ದೇಹಕ್ಕೆ ನೀಲಿಯ ಕವಚವನ್ನು (ನೀಲಿಬಣ್ಣದ ರವಿಕೆಯನ್ನು) ತೊಟ್ಟಿದ್ದಾಳೆ. ತನ್ನ ಪ್ರಿಯಕರನು ಕಾಲಬುಡದಲ್ಲಿದ್ದರೂ ಗಮನಿಸದೆ ಅತಿಯಾದ ಪ್ರಣಯ ಕೋಪದಿಂದ ಕೂಡಿದ್ದಾಳೆ. 579

### ಈ ರಾಗದ ಲಕ್ಷಣ

ಇದರ ಗ್ರಹ-ಅಂಶ-ನ್ಯಾಸಗಳಲ್ಲಿ ಷಡ್ಜಸ್ವರವು ಇರುತ್ತದೆ. ಇದು ಪೂರ್ಣರಾಗವಾಗಿದೆ. ಈ ರಾಗದ ಮೂರ್ಛನೆಯ ಆದಿಯಲ್ಲಿ ಷಡ್ಜಸ್ವರವು ಇರುತ್ತದೆ. ಕರುಣರಸದಲ್ಲಿ ಈ ರಾಗವನ್ನು ಬಳಸುತ್ತಾರೆ. ಇದರಲ್ಲಿ ರಿಷಭ ಮತ್ತು ಧೈವತಸ್ವರಗಳು ಇರುವುದಿಲ್ಲವೆಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ಇಲ್ಲಿ ಪಂಚಮಸ್ವರವು ಬರುವುದಿಲ್ಲವೆಂದು ಹೇಳುತ್ತಾರೆ. 580-580A

ಮೂರ್ಛನಾ : ಸ ಗ ಮ ಪ ನಿ ಸ - ಸ ರಿ ಗ ಮ ಪ ಧ ನಿ ಸ

166B/2 ## ದೇಶಾಕ್ಷೀರಾಗದ ಸ್ವರೂಪ

ದೇಶಾಕ್ಷೀರಾಗದೇವನು ವೀರರಸದಲ್ಲಿ ವ್ಯಕ್ತವಾದ ರೋಮಾಂಚವನ್ನು ತಡೆದು ಕೊಂಡು, ಎರಡು ಕೈಗಳನ್ನು ವಿಲಾಸದಿಂದ ಕಟ್ಟಿಕೊಂಡಿದ್ದಾನೆ, ಎತ್ತರವಾಗಿದ್ದಾನೆ, ಪ್ರಚಂಡನಾಗಿದ್ದಾನೆ (ಅತ್ಯಂತ ಕೋಪವುಳ್ಳವನಾಗಿದ್ದಾನೆ), ತಲೆಯಲ್ಲಿ ಚಂದ್ರನನ್ನು ಧರಿಸಿ ಮನೋಹರನಾಗಿದ್ದಾನೆ ಎಂಬುದಾಗಿ ಮುನಿಶ್ರೇಷ್ಠರು ಹೇಳಿದ್ದಾರೆ. ಇದು ಪುರುಷರಾಗ. 581

### ಈ ರಾಗದ ಲಕ್ಷಣ

ಇದನ್ನು ಷಾಡವರಾಗವೆಂದು ತಿಳಿಯಬೇಕು. ಇದರಲ್ಲಿ ಮೂರು ಗಾಂಧಾರಸ್ವರಗಳಿರುತ್ತವೆ. ಋಷಭಸ್ವರವು ಇರುವುದಿಲ್ಲ ಎಂಬುದಾಗಿ ಶಾರ್ಙ್ಗದೇವನು ಹೇಳಿದ್ದಾನೆ. ಮೂರ್ಛನೆಯಲ್ಲಿ ಸಪ್ತಸ್ವರಗಳು ಇದ್ದು ಮನೋಹರವಾಗಿರುತ್ತದೆ. ಇದು ಪೂರ್ಣಸ್ವರವಾಗಿದೆ ಎಂಬುದಾಗಿ ಕೆಲವರು ಹೇಳಿದ್ದಾರೆ. 582-582A

ಮೂರ್ಛನಾ : ಸ ಮ ಪ ಧ ನಿ ಸ ರಿ ಗ

167A/1 ## ಫಲಮಂಜರೀರಾಗಸ್ವರೂಪ

ಫಲಮಂಜರೀರಾಗವು ಸ್ತ್ರೀರಾಗ, ಪ್ರಿಯನಿಂದ ವಿರಹಿತಳಾಗಿದ್ದಾಳೆ. ಆಯಾಸದಿಂದ ಶರೀರವು ಬೆಂಡಾಗಿದೆ. ಕೊರಳಲ್ಲಿ ಹಾಕಿಕೊಂಡಿರುವ ಹೂಮಾಲೆಯೂ ಶರೀರತಾಪದಿಂದ ಬಾಡಿ ಹೋಗಿದೆ. ಇವಳ

ಪ್ರಿಯಸಖಿಯು ಇವಳನ್ನು ಸಮಾಧಾನಪಡಿಸುತ್ತಿದ್ದಾಳೆ. ಇವಳ ಶರೀರವು ಬೂದುಬಣ್ಣದಿಂದ ಕೂಡಿದೆ. ಇವಳೇ ಫಲಮಂಜರಿಯೆಂಬ ರಾಗದೇವತೆ. 583

### ಈ ರಾಗದ ಲಕ್ಷಣ

ಅಂಶ-ಗ್ರಹ-ನ್ಯಾಸಗಳಲ್ಲಿ ಪಂಚಮಸ್ವರವು ಇರುತ್ತದೆ. ಫಲಮಂಜರಿಯು ಪರಿಪೂರ್ಣವಾದ ರಾಗ. ಇದರಲ್ಲಿ ಹೃಷ್ಯಕ ಮೂರ್ಛನೆಯಿರುತ್ತದೆ ಅಥವಾ ಇದರ ಮೂರ್ಛನೆಯು ಮನೋಹರವಾದುದೆಂದು ತಿಳಿಯಬೇಕು. ಸಂಗೀತರಸಿಕರಿಗೆ ಈ ರಾಗವು ಸುಖವನ್ನು ನೀಡುತ್ತದೆ. 584

ಮೂರ್ಛನಾ : ಪ ಧ ನಿ ಸ ರಿ ಗ ಮ ಪ

167A/2

### ಲಲಿತಾರಾಗಸ್ವರೂಪ

ಲಲಿತಾರಾಗವು ಸ್ತ್ರೀರಾಗ. ಈ ರಾಗದೇವತೆಯು ಏಳೆಲೆ ಬಾಳೆಲೆಯ ಅರಳಿರುವ ಹೂವುಗಳ ಮಾಲೆಯನ್ನು ಧರಿಸಿಕೊಂಡಿದ್ದಾಳೆ. ಬಿಳಿಯ ದೇಹಕಾಂತಿಯಿಂದ ಕೂಡಿದವಳಾಗಿ ಕಪ್ಪಾದ ನೈದಿಲೆಯಂತೆ ಕಣ್ಣುಗಳು ಕಪ್ಪಾಗಿ ಹೊಳೆಯುತ್ತಿವೆ. ದೈವವಶಾತ್ ಬೆಳಿಗ್ಗೆ ಹೊರಟವಳಾಗಿದ್ದಾಳೆ. ವಿಲಾಸಯುತವಾದ ವೇಷಗಳನ್ನು ಹೊಂದಿ ಪ್ರಸಿದ್ಧಳಾಗಿದ್ದಾಳೆ. 585

### ಈ ರಾಗದ ಲಕ್ಷಣ

ಲಲಿತಾರಾಗವು ರಿಷಭ ಮತ್ತು ಪಂಚಮಸ್ವರರಹಿತವಾಗಿದೆ. ಇದು ಔಡವರಾಗವಾಗಿದೆ. ಇದರಲ್ಲಿ ಮೂರು ಷಡ್ಜಸ್ವರಗಳಿರುತ್ತವೆ. ಶುದ್ಧಮಧ್ಯವೆಂಬ ಮೂರ್ಛನೆಯು ಇರುತ್ತದೆ. ಇದು ಸಂಪೂರ್ಣವಾದ ರಾಗವಾಗಿದೆ. ಕೆಲವರು ಈ ರಾಗವು ಮೂರು ಧೈವತಸ್ವರಗಳಿಂದ ಕೂಡಿರುತ್ತದೆ. ಅಥವಾ ಎರಡು ಧೈವತಸ್ವರಗಳಿಂದ ಕೂಡಿರುತ್ತದೆ ಎಂದೂ ಹೇಳಿದ್ದಾರೆ. 586-586A

ಮೂರ್ಛನಾ : ಸ ಗ ಮ ಧ ನಿ ಸ - ಧ ನಿ ಸ ಗ ಮ ಧ

167B/1

### ಪ್ರದೀಪಕರಾಗಸ್ವರೂಪ

ಪ್ರದೀಪರಾಗದೇವನ ಬಾಲೆಯಾದ ಹೆಂಡತಿಯು ರತಿಸುಖಕ್ಕಾಗಿ (ನಾಚಿಕೆಯಿಂದ ದೀಪವನ್ನು ಆರಿಸಿ) ಕತ್ತಲೆಯಲ್ಲಿ ವೇಷಭೂಷಣಗಳಿಂದ ಅಲಂಕೃತವಾದ ತನ್ನ ದೇಹವನ್ನು ಮರೆ ಮಾಡಿಕೊಂಡು, ತನ್ನ ಗಂಡನೊಡನೆ ರತಿಸುಖವನ್ನು ಅನುಭವಿಸುತ್ತಿರುವಾಗ, ಪ್ರದೀಪರಾಗದೇವನು, ಅವಳ ತಲೆಯಲ್ಲಿ ಧರಿಸಿರುವ ಆಭರಣಗಳ ರತ್ನಗಳಿಂದ ಹೊರಹೊಮ್ಮುತ್ತಿರುವ ದೀಪಗಳಿಂದ ಅವಳಿಗೆ ಅತಿಯಾದ ನಾಚಿಕೆಯನ್ನು ಉಂಟುಮಾಡಿದನು. (ಇಂತಹ ರಸಿಕನಾದವನು ಪ್ರದೀಪರಾಗದೇವನು ಎಂಬುದು ಭಾವಾರ್ಥ.) 587

### ಈ ರಾಗದ ಲಕ್ಷಣ

ದೀಪಕರಾಗವು ಷಡ್ಜಸ್ವರದ ಗ್ರಹ-ಅಂಶ-ನ್ಯಾಸಗಳನ್ನು ಹೊಂದಿದೆ. ಇದು ಪರಿಪೂರ್ಣರಾಗವೆಂದು ಎಲ್ಲರಿಂದಲೂ ತಿಳಿಯಲ್ಪಟ್ಟಿದೆ. ಇದರಲ್ಲಿ ಶುದ್ಧಮಧ್ಯವೆಂಬ ಮೂರ್ಛನೆಯಿರುತ್ತದೆ. ಸಂಗೀತದಲ್ಲಿ ಯಾವಾಗಲೂ ಇದನ್ನು ಹಾಡುವಂತಹ ರಾಗವಾಗಿದೆ. 588

ಮೂರ್ಛನಾ : ಸ ರಿ ಗ ಮ ಪ ಧ ನಿ ಸ

167B/2

### ಕೇತಾರರಾಗಸ್ವರೂಪ

ಕೇತಾರರಾಗವು ಪುರುಷರಾಗ. ಈ ರಾಗದೇವನು ತಲೆಯಲ್ಲಿ ಜಟೆಯನ್ನು ಕಟ್ಟಿಕೊಂಡು ಅದರಲ್ಲಿ ಚಂದ್ರನನ್ನು ಅಲಂಕರಿಸಿಕೊಂಡು, ಗಂಗೆಯನ್ನು ಧರಿಸಿ ಗಂಗಾಧರನಾಗಿದ್ದಾನೆ. ಹಾವನ್ನು ಉತ್ತರೀಯ-ದಂತೆ ಹೊದ್ದಿದ್ದಾನೆ. (ಅಂದರೆ ಉತ್ತರೀಯದಂತೆ ಕುತ್ತಿಗೆ, ಬೆನ್ನುಗಳಲ್ಲಿ ಹಾವನ್ನು ಸುತ್ತಿಕೊಂಡಿ-ದ್ದಾನೆ.) ಯೋಗಪೀಠದಲ್ಲಿ ಕುಳಿತು ಯೋಗಪಟ್ಟವನ್ನು ಧರಿಸಿದ್ದಾನೆ. ಕಣ್ಣುಮುಚ್ಚಿಕೊಂಡು ಧ್ಯಾನ ಮಾಡುತ್ತಾ ಕುಳಿತಿದ್ದಾನೆ. ತಪಸ್ಸನ್ನು ಮಾಡುತ್ತಾ ತಪಸ್ವಿಯಾಗಿದ್ದಾನೆ. ಹೀಗೆ ಕೇತಾರರಾಗದೇವನು ಉಕ್ತನಾಗಿದ್ದಾನೆ. 589

### ಈ ರಾಗದ ಲಕ್ಷಣ

ಈ ಕೇತಾರರಾಗದಲ್ಲಿ ರಿಷಭ ಮತ್ತು ಧೈವತಸ್ವರಗಳು ಇರುವುದಿಲ್ಲ. ಇದು ಔಡವರಾಗವೆಂದು ಹೇಳಲ್ಪಟ್ಟಿದೆ. ಇದರಲ್ಲಿ ಮೂರು ನಿಷಾದಸ್ವರಗಳಿರುತ್ತವೆ. ಮಾರ್ಗೀ ಮೂರ್ಛನಾ ಇರುತ್ತದೆ. ಕಾಕಲೀಸ್ವರದಿಂದ ಅಲಂಕೃತವಾಗಿರುತ್ತದೆ. 590

ಮೂರ್ಛನಾ : ನಿ ಸ ಗ ಮ ಪ ನಿ

168A/1

### ಕರ್ಣಾಟರಾಗಸ್ವರೂಪ

ಬಲಗೈಯಲ್ಲಿ ಕತ್ತಿಯನ್ನು, ಎಡಗೈಯಲ್ಲಿ ಆನೆಯ ಒಂದು ದಂತ ಪತ್ರವನ್ನು ಹಿಡಿದುಕೊಂಡಿರುವ, ದೇವತೆಗಳ ಮತ್ತು ಚಾರರ ಸಮುದಾಯಗಳಿಂದ ಸ್ತುತಿಸಲ್ಪಡುತ್ತಿರುವ ಕ್ಷಿತಿಪಾಲಮೂರ್ತಿಯೇ (ರಾಜನೇ) ಈ ಕರ್ಣಾಟಕರಾಗದೇವನಾಗಿದ್ದಾನೆ. 591

### ಈ ರಾಗದ ಲಕ್ಷಣ

ಇದರಲ್ಲಿ ರಿಷಭ, ನಿಷಾದ, ಧೈವತಸ್ವರಗಳು ಪರಿಪೂರ್ಣವಾಗಿರುತ್ತವೆ. ನಿಷಾದಸ್ವರವು ವಿಕೃತ ಸ್ವರವಾಗಿರಬೇಕು. ಮಾರ್ಗೀ ಎಂಬ ಮೂರ್ಛನೆಯು ಇದರಲ್ಲಿ ಇರುತ್ತದೆ. ಈ ಕರ್ಣಾಟರಾಗವು ಸುಖವನ್ನು ನೀಡುವುದಾಗಿದೆ. 592

ಮೂರ್ಛನಾ : ನಿ ಸ ರಿ ಗ ಮ ಪ ಧ ನಿ

168A/2 **ದೇಶೀರಾಗಸ್ವರೂಪ**

ಇದು ಸ್ತ್ರೀರಾಗ. ದೇಶೀರಾಗದೇವಿಯು ಕಳ್ಳನಿದ್ರೆ ಮಾಡುತ್ತಾ ಸೋಮಾರಿತನದಿಂದ ಮಲಗಿರುವ ತನ್ನ ಕಾಂತನನ್ನು ರತಿಸುಖಕ್ಕಾಗಿ, ಚೆನ್ನಾಗಿ ಎಚ್ಚರಗೊಳಿಸುತ್ತಾ ಇದ್ದಾಳೆ. ಬಿಳುಪಾದ ಶರೀರದಿಂದ ಸುಂದರಿಯಾಗಿದ್ದಾಳೆ. ನವಿಲುಗರಿಗಳನ್ನು ಬಟ್ಟೆಯನ್ನಾಗಿ ಮೈಗೆ ಹಾಕಿಕೊಂಡಿದ್ದಾಳೆ. ಇವಳ ಮನಸ್ಸು ರಸದಿಂದ ಆನಂದಗೊಂಡಿದೆ. ಹೀಗೆ ದೇಶೀರಾಗಿಣಿಯು ಪ್ರಸಿದ್ಧಳಾಗಿದ್ದಾಳೆ. **593**

**ಈ ರಾಗದ ಲಕ್ಷಣ**

ದೇಶೀರಾಗವು ಪಂಚಮಸ್ವರ ರಹಿತವಾಗಿದೆ. ಮೂರು ರಿಷಭ ಸ್ವರಗಳಿಂದ ಕೂಡಿರುತ್ತದೆ. ಕಪೋಲಲಲಿತಾ ಮೂರ್ಛನೆಯು ಇರುತ್ತದೆ. ರಿಷಭಸ್ವರವು ಇಲ್ಲಿ ವಿಕೃತಸ್ವರ. ಇದು ಸ್ತ್ರೀರಾಗ. **594**

ಮೂರ್ಛನಾ : ರಿ ಗ ಮ ಪ ಧ ನಿ ಸ ರಿ

168B/1 **ಕಾಂಭೋಜಿರಾಗಸ್ವರೂಪ**

ಇದು ಸ್ತ್ರೀರಾಗ. ಕಾಂಭೋಜಿಕಾರಾಗವು ಸ್ತ್ರೀರಾಗ. ಈ ಕಾಂಭೋಜಿಕಾ ರಾಗದೇವಿಯು ಹಳದಿಯ ಬಟ್ಟೆಯನ್ನು ಹಾಕಿಕೊಂಡು, ಸುಂದರ ಕೂದಲುಗಳಿಂದ ಕೂಡಿದವಳಾಗಿ, ಕಾಡಿನಲ್ಲಿ ಅಳುತ್ತಾ, ಗಿಳಿಗಳ ಕಲರವವನ್ನು ಕೇಳಿ ದುಃಖಗೊಂಡು, ಹೆದರಿಕೆಯಿಂದ ವಿದಿಕ್ಕುಗಳಲ್ಲಿ ನೋಟವನ್ನು ಹರಿಸುತ್ತಾ, ಕಾಂತನನ್ನು ಹಿಂಬಾಲಿಸಿ ಹೋಗುತ್ತಿದ್ದಾಳೆ. **595**

**ಈ ರಾಗದ ಲಕ್ಷಣ**

ಧೈವತಸ್ವರದ ಅಂಶ-ನ್ಯಾಸ-ಗ್ರಹಗಳಿಂದ ಪೂರ್ಣಳಾಗಿ, ಪೌರವೀ ಮೂರ್ಛನೆಯಿಂದ ಕೂಡಿ, ಕಾಂಭೋಜೀರಾಗದೇವಿಯು ಮಲ್ಹಾರಿ ರಾಗದ ಬಳಿ ಇದ್ದಾಳೆಂದು ಹೇಳಿದೆಯೆಂದು ತಿಳಿಯ-ಬೇಕು. **596**

ಮೂರ್ಛನಾ : ನಿ ಸ ರಿ ಗ ಮ ಪ ಧ

168B/2 **ನಾಟರಾಗಸ್ವರೂಪ**

ಇದು ಪುರುಷರಾಗ. ನಾಟರಾಗದೇವನು ಕುದುರೆಯ ಬೆನ್ನ ಮೇಲೆ ಕೈಯನ್ನು ಇಟ್ಟುಕೊಂಡಿದ್ದಾನೆ. ಚಿನ್ನದ ದೇಹಕಾಂತಿ ಹಾಗೂ ರಕ್ತದಂತಹ ಕೆಂಪು ಶರೀರ ಇವನದು. ಯುದ್ಧರಂಗದಲ್ಲಿ ಪ್ರತಾಪಶಾಲಿಯಾದ ಇವನು ಸಂಚರಿಸುತ್ತಿದ್ದಾನೆ. ಇವನ ತಲೆಯಲ್ಲಿ ಕೊಂಬು ಇದೆ, ಹೀಗೆಂದು ಉಕ್ತನಾಗಿದ್ದಾನೆ. **597**

## ಈ ರಾಗದ ಲಕ್ಷಣ

ಈ ರಾಗದ ಗ್ರಹ-ಅಂಶ-ನ್ಯಾಸಗಳಲ್ಲಿ ಷಡ್ಜಸ್ವರವು ಇರುತ್ತದೆ. ಇದು ಪೂರ್ಣರಾಗ. ನಾಟಿಕಾ (ಮೂರ್ಛನೆಯಿಂದ) ಇದು ಕೂಡಿರುತ್ತದೆಂದು ಬಲ್ಲವರ ಅಭಿಮತ. ಕೆಲವರು ಈ ರಾಗವು ಮೂರು ರಿಷಭಸ್ವರಗಳಿಂದ ಕೂಡಿರುತ್ತದೆಯೆಂದು ಹೇಳುತ್ತಾರೆ. **598**

ಮೂರ್ಛನಾ : ಸ ರಿ ಗ ಮ ಪ ಧ ನಿ ಸ

**169A/1**

## ಶ್ರೀರಾಗದಸ್ವರೂಪ

ಶ್ರೀರಾಗನು ಶ್ರೇಷ್ಠನಾದ ರಾಜನಾಗಿದ್ದಾನೆ. ರಾಜವೇಷದಿಂದ ಕಂಗೊಳಿಸುವ ಇವನು ಪುರುಷರಾಗನಾಗಿದ್ದಾನೆ. ಹದಿನೆಂಟು ವರ್ಷದ ಮನ್ಮಥನಂತೆ ಸುಂದರ ತರುಣ ಇವನು. ಧೀರನಾದ ಇವನು ಉತ್ಸಾಹಿತನಾಗಿ ಎಳೆಯ ಕೆಂಪಾದ ಚಿಗುರುಗಳನ್ನು ಕಿವಿಗಳಿಗೆ ಅಲಂಕಾರವಾಗಿ ಸಿಕ್ಕಿಸಿಕೊಂಡಿದ್ದಾನೆ. ಷಡ್ಜವೊದಲಾದ ಸ್ವರಗಳಿಂದ ಸೇವಿತನಾಗುತ್ತಿದ್ದಾನೆ. ಕೆಂಪು ಬಟ್ಟೆಗಳನ್ನು ತೊಟ್ಟಿದ್ದಾನೆ. **599**

## ಈ ರಾಗದ ಲಕ್ಷಣ

ಶ್ರೀರಾಗವು ಪುರುಷರಾಗ. ಈ ರಾಗವು ಮೂರು ಷಡ್ಜಸ್ವರದಿಂದ ಕೂಡಿದೆಯೆಂದು ಪ್ರಸಿದ್ಧವಾಗಿದೆ. ಇದು ಪೂರ್ಣರಾಗವಾಗಿದ್ದು, ರಾಗದ ಸಕಲ ಗುಣಗಳಿಂದ ಕೂಡಿದೆ. ಪ್ರಥಮ ಮೂರ್ಛನೆ ಈ ರಾಗದಲ್ಲಿದೆ. (ಮೂರ್ಛನೆಯ ಪ್ರಾರಂಭದಲ್ಲಿ ಷಡ್ಜಸ್ವರವಿರುತ್ತದೆ.) ಕೆಲವರು ಈ ರಾಗವನ್ನು ಮೂರು ರಿಷಭ ಸ್ವರಗಳಿಂದ ಕೂಡಿದೆಯೆಂದು ಹೇಳುತ್ತಾರೆ. **600-600A**

ಮೂರ್ಛನಾ : ಸ ರಿ ಗ ಮ ಪ ಧ ನಿ ಸ ರಿ

**169A/2**

## ವಸಂತರಾಗಸ್ವರೂಪ

ವಸಂತರಾಗವು ಪುರುಷರಾಗ. ಇವನು ತಲೆಗೂದಲನ್ನು ಎತ್ತಿ ಕಟ್ಟಿ ಜಟೆಯನ್ನು ಕಟ್ಟಿಕೊಂಡಿದ್ದಾನೆ. ಆ ಜಟೆಯಲ್ಲಿ ನವಿಲುಗರಿಗಳನ್ನು ಅಲಂಕಾರವಾಗಿ ಸಿಕ್ಕಿಸಿಕೊಂಡಿದ್ದಾನೆ. ಕಿವಿಗಳಿಗೆ ಅಲಂಕರಿಸಿಕೊಂಡು ಶೋಭಿಸುತ್ತಿದ್ದಾನೆ. ಕನ್ನೈದಿಲೆ ಹೂವಿನಂತೆ ಕಪ್ಪಾದ ದೇಹ ಇವನದು. ವಿಲಾಸಿ ಪುರುಷ ಇವನು. ಈ ವಸಂತಕನು ಮನೋಹರವಾದ ದೇಹಸಿರಿಯಿಂದ ಕೂಡಿದ್ದಾನೆ. **601**

## ಈ ರಾಗದ ಲಕ್ಷಣ

ಇದು ಸಂಪೂರ್ಣ ರಾಗವಾಗಿದೆ. ಇದರಲ್ಲಿ ಮೂರು ಷಡ್ಜ ಸ್ವರಗಳು ಇವೆಯೆಂದು ಬಲ್ಲವರು ಹೇಳುತ್ತಾರೆ. ಸಂಗೀತಗಾನಚತುರರು ಇದರಲ್ಲಿ ಶ್ರೀರಾಗದ ಮೂರ್ಛನೆಯೇ ಇರುತ್ತದೆಯೆಂದು ಹೇಳಿದ್ದಾರೆ. (ಅಂದರೆ ಮೂರ್ಛನೆಯ ಪ್ರಾರಂಭದಲ್ಲಿ ಷಡ್ಜಸ್ವರವು ಇರುತ್ತದೆಯೆಂದು ಅರ್ಥ.) **602**

ಮೂರ್ಛನಾ : ಸ ರಿ ಗ ಮ ಪ ಧ ನಿ ಸ

169B/1 ## ಮಾಳವಶ್ರೀರಾಗಸ್ವರೂಪ

ಮಾಳವಶ್ರೀರಾಗವು ಸ್ತ್ರೀರಾಗ. ಇವಳ ದೇಹವು ಕಡ್ಡಿಯಂತೆ ತೆಳುವಾಗಿದೆ. ಅಂಗೈಯಲ್ಲಿ ಕೆಂಪುಕಮಲವನ್ನು ಇಟ್ಟುಕೊಂಡಿದ್ದಾಳೆ. ಪ್ರಸಿದ್ಧಳಾದ ಇವಳು ಮುಗುಳ್ನಗುತ್ತಾ ಮರದ ಬುಡದಲ್ಲಿ ನೆಲದ ಮೇಲೆ ಕುಳಿತಿದ್ದಾಳೆ. **603**

### ಈ ರಾಗದ ಲಕ್ಷಣ

ಮಾಳವಶ್ರೀರಾಗವು ಸಕಲಾಂಗಗಳಿಂದ ಕೂಡಿದ ಸಂಪೂರ್ಣ ರಾಗವಾಗಿದೆ. ಮೂರು ಷಡ್ಜಸ್ವರಗಳಿಂದ ಇದು ಕೂಡಿದೆ. ಮೂರ್ಛನೆಯ ಉತ್ತರ ಭಾಗದಲ್ಲಿ ಮಂದ್ರಸ್ವರದಿಂದ ಸಂಯುತವಾಗಿ, ಶೃಂಗಾರ ರಸದಿಂದ ಅಲಂಕೃತವಾಗಿದೆ. **604**

ಮೂರ್ಛನಾ : ಸ ಗ ಮ ಪ ಧ ನಿ ಧ ಮ ಗ ಸ

169B/2 ## ಮಾಲವರಾಗಸ್ವರೂಪ

ಇವನು ಪುರುಷರಾಗ. ಇವನು ತನ್ನ ಮುಖಕಮಲದಲ್ಲಿರುವ ಕಿವಿಗಳಿಗೆ ಹೊಳೆಯುವ ಕರ್ಣ-ಕುಂಡಲಗಳನ್ನು ಹಾಕಿಕೊಂಡಿದ್ದಾನೆ. ನಿತಂಬಿನೀ ಸ್ತ್ರೀಯು ಈ ರಾಗದೇವನ ಮುಖಕ್ಕೆ ಮುತ್ತು ಕೊಡುತ್ತಿದ್ದಾಳೆ. ಉನ್ಮತ್ತನಾಗಿ, ಪ್ರದೋಷಸಮಯದಲ್ಲಿ (ರಾತ್ರಿಯ ಪ್ರಾರಂಭದಲ್ಲಿ) ಶ್ರೇಷ್ಠನಾದ ಮಾಲವರಾಗದೇವನು ಸಂಗೀತಶಾಲೆಯನ್ನು ಪ್ರವೇಶಿಸುತ್ತಿದ್ದಾನೆ. **605**

### ಈ ರಾಗದ ಲಕ್ಷಣ

ಮಾಲವವು ಪುರುಷರಾಗ ಹಾಗೂ ಔಡವರಾಗ ಎಂಬುದಾಗಿ ತಿಳಿಯಬೇಕು. ಇಲ್ಲಿ ಮೂರು ನಿಷಾದ ಸ್ವರಗಳಿರುತ್ತವೆ. ಪಂಚಮ ಮತ್ತು ರಿಷಭ ಸ್ವರಗಳು ಇರುವುದಿಲ್ಲ. ಈ ರಾಗದಲ್ಲಿ ರಜನೀ ಮೂರ್ಛನೆಯಿರುತ್ತದೆ. ಈ ರಾಗವು ಕಾಕಲೀಸ್ವರದಿಂದ ಭೂಷಿತವಾಗಿದೆ. **606**

ಮೂರ್ಛನಾ : ಸ ಗ ಮ ಧ ನಿ ಸ

[(i) **ರಜನೀ ಮೂರ್ಛನಾ :** ಇದು ನಿಷಾದಸ್ವರದಿಂದ ಆಗುವ ಷಡ್ಜಗ್ರಾಮದ ಮೂರ್ಛನೆ. ಆರಂಭಸ್ವರವು ಷಡ್ಜವಾಗಿರುತ್ತದೆ. ಇದರ ಸ್ವರಗಳು ನಿಷಾದದಿಂದ ನಿಷಾದದವರೆಗೆ ಇರುತ್ತವೆ. **(ii) ಕಾಕಲೀಸ್ವರ :** ಕಾಕಲೀನಿಷಾದಸ್ವರಕ್ಕೆ ಕಾಕಲೀಸ್ವರವೆಂದು ಹೆಸರು. ಅಂತರಗಾಂಧಾರ ಮತ್ತು ಕಾಕಲೀನಿಷಾದಸ್ವರಗಳು ಷಡ್ಜಗ್ರಾಮದ ಶುದ್ಧಸ್ವರಗಳು ತಿಳಿದು ಬಂದ ಮೇಲೆ ಮನುಷ್ಯನಿಗೆ ಗೋಚರವಾದ ಬಹು ಪ್ರಾಚೀನಸ್ವರಗಳಾಗಿವೆ.)]

170A/1 ## ಸಾವೇರೀರಾಗಸ್ವರೂಪ

ಶ್ರೀಗಂಧದ ಮರಗಳಿಂದ ತುಂಬಿದ ಬೆಟ್ಟದ ಶಿಖರದಲ್ಲಿ, ಸಾವೇರೀರಾಗದೇವಿಯು, ಗಿಳಿಗಳ ಗರಿಗಳಿಂದ ಮಾಡಿದ ವಸ್ತ್ರವನ್ನುಟ್ಟು, ಆನೆಯ ಕುಂಭಸ್ಥಳದಲ್ಲಿ ದೊರಕಿದ ಮುತ್ತುಗಳಿಂದ ಹಾರವನ್ನು ರಚಿಸಿ ಕುತ್ತಿಗೆಯಲ್ಲಿ ಹಾಕಿಕೊಂಡು, ಶ್ರೀಗಂಧದ ಮರದಲ್ಲಿ ನೆಲಸಿರುವ ಹಾವನ್ನು ಎಳೆದುಕೊಂಡು ಮೈಮೇಲೆ ಹಾಕಿಕೊಂಡು, ಮಲಯಪರ್ವತದಂತೆ ಉಜ್ವಲವಾದ ನೀಲಕಾಂತಿಯಿಂದ ಕಂಗೊಳಿಸುತ್ತಿದ್ದಾಳೆ. 607

### ಈ ರಾಗದ ಲಕ್ಷಣ

ಈ ಸಾವೇರೀ ರಾಗವು ಗಾಂಧಾರ ಮತ್ತು ರಿಷಭಸ್ವರಗಳಿಂದ ರಹಿತವಾಗಿದೆ. ಧೈವತಸ್ವರವು ಗ್ರಹ ಮತ್ತು ಅಂಶಗಳಲ್ಲಿರುತ್ತವೆ. ಹಾಗೆಯೇ ವಾಡವಸ್ವರವೂ ಇರುತ್ತದೆ. ಧೈವತಸ್ವರವು ನ್ಯಾಸವಾಗಿರುತ್ತದೆ. ಕರುಣಾರಸದಿಂದ ತುಂಬಿರುತ್ತದೆ ಎಂದು ತಿಳಿಯಬೇಕು. ಇದು ಸ್ತ್ರೀರಾಗ. 608

ಅಥವಾ - ಕಕುಭರಾಗದಿಂದ ಹುಟ್ಟಿದ, ಬಿದಿರಿನ ಕೊಳಲಿನಿಂದ ನುಡಿಸಲ್ಪಡುವ, ಪಂಚಮಸ್ವರರಹಿತವಾದ, ಷಾಡವರಾಗ ಸಾವೇರೀರಾಗವೆಂದು ಬೇರೊಂದು ರೀತಿಯಲ್ಲಿ ಹೇಳಲ್ಪಡುತ್ತದೆ. 609

ಮೂರ್ಛನಾ : ಸ ರಿ ಮ ಪ ಧ ಸ ನಿ - ಧ ಪ ಮ ಗ ರಿ ಸ

(ಕಕುಭ - ಈ ರಾಗವನ್ನು ಸಂಗೀತರತ್ನಾಕರದಲ್ಲಿ ಹೇಳಿದ್ದಾರೆ. ಈಗ ಈ ರಾಗವು ಪ್ರಚಲಿತವಾಗಿಲ್ಲ.)

170A/2 ## ಧನಶ್ರೀರಾಗಸ್ವರೂಪ

ಧನಶ್ರೀರಾಗವು ಸ್ತ್ರೀರಾಗ. ಧನಶ್ರೀರಾಗದೇವಿಯು ಗರಿಕೆಯ ಹುಲ್ಲಿನಂತೆ ನೀಲಿಯಬಣ್ಣದ ದೇಹದಿಂದ ಮನೋಹರೆಯಾಗಿದ್ದಾಳೆ. ಭೂಮಿಯ ಮೇಲೆ ಪರಿತಾಪಗೊಂಡು ದುಃಖಿತನಾದ ತನ್ನ ಕಾಂತನನ್ನು ಕಾಲಿನಿಂದ ಬರೆಯುತ್ತಿದ್ದಾಳೆ. ಅಳುತ್ತಿರುವ ಇವಳ ಕಣ್ಣೀರ ಹನಿಗಳು ಕೆನ್ನೆಯ ಮೇಲೆ ಬೀಳುತ್ತಿವೆ. ಕೂದಲುಗಳು ಬಿಚ್ಚಿಹೋಗಿವೆ. 610

### ಈ ರಾಗದ ಲಕ್ಷಣ

ಈ ರಾಗವು ಮೂರು ಷಡ್ಜಸ್ವರಗಳಿಂದ ಕೂಡಿ, ರಿಷಭಸ್ವರದಿಂದ ರಹಿತವಾಗಿದೆ. ಪ್ರಥಮ ಮೂರ್ಛನೆಯಿಂದ ಕೂಡಿದೆ (ಷಡ್ಜವು ಮೂರ್ಛನೆಯ ಪ್ರಾರಂಭಸ್ವರವಾಗಿರುತ್ತದೆ). ವೀರರಸದಲ್ಲಿ ಈ ರಾಗವನ್ನು ಬಳಸುತ್ತಾರೆ. 611

ಮೂರ್ಛನಾ : ಸ ಗ ಮ ಪ ನಿ - ಸ ನಿ ಧ ಪ ಮ ಗ ರಿ ಸ

170B/1 **ಮಲ್ಲಾರೀರಾಗಸ್ವರೂಪ**

ಮಲ್ಲಾರೀರಾಗವು ಸ್ತ್ರೀರಾಗ. ಇವಳ ದೇಹವು ಬಿಳಿಯ ಬಣ್ಣದಿಂದ ಕೂಡಿದೆ. ತೆಳು ಶರೀರ ಇವಳದು. ಮಾತನಾಡಿದರೆ ಕೋಗಿಲೆಯಂತೆ ಮಧುರವಾದ ದನಿ ಇವಳದಾಗಿದೆ. (ಇವಳ ಪತಿಯು ಈಗ ಹತ್ತಿರ-ದಲ್ಲಿಲ್ಲ) ತಾರುಣ್ಯದ ಪ್ರಣಯಕೋಪದಿಂದ ಮನಸ್ಸು ವಿಕಾರವಾಗಿದೆ. ಕುಪಿತಳಾದ ಇವಳು ಯಾವುದೇ ಅಲಂಕಾರಗಳನ್ನು ಮಾಡಿಕೊಳ್ಳದೆ ಮಲಿನವಾಗಿದ್ದಾಳೆ. ಅಳುತ್ತಿರುವ ಇವಳು ವೀಣೆಯನ್ನು ಕೈಗೆತ್ತಿಕೊಂಡು ಸಂಗೀತವನ್ನು ನುಡಿಸುವ ನೆಪದಿಂದ ತನ್ನ ಪತಿಯನ್ನು ನೆನಪಿಸಿಕೊಳ್ಳುತ್ತಿದ್ದಾಳೆ. **612**

**ಈ ರಾಗದ ಲಕ್ಷಣ**

ಈ ಮಲ್ಲಾರೀರಾಗವು ಷಡ್ಜ, ರಿಷಭ ಸ್ವರಗಳಿಂದ ಹೀನವಾಗಿ ಔಡವರಾಗವಾಗಿದೆ. ಇದು ಪೌರವೀ ಮೂರ್ಛನೆಯಿಂದ ಕೂಡಿದ ರಾಗ. ವರ್ಷಾಕಾಲಗಳಲ್ಲಿ ಸುಖದಾಯಕರಾಗವೆಂದು ತಿಳಿಯಬೇಕು. ಅಂಶ-ನ್ಯಾಸ-ಗ್ರಹಗಳಲ್ಲಿ ಧೈವತಸ್ವರದಿಂದ ಕೂಡಿದೆ. **613**

ಮೂರ್ಛನಾ : ಸ ರಿ ಮ ಪ ಧ | ಸ ಧ ಪ ಮ ಗ ರಿ ಸ |

(ಪೌರವೀ - ಧೈವತಸ್ವರದಿಂದ ಹುಟ್ಟುವ ಮಧ್ಯಮಗ್ರಾಮ ಮೂರ್ಛನೆ.)

170B/2 **ಮೇಘರಾಗಸ್ವರೂಪ**

ಮೇಘರಾಗವು ಪುರುಷರಾಗ. ಈ ದೇವನ ಶರೀರವು ಕಪ್ಪಾದ ನೈದಿಲೆಯಂತೆ ನೀಲಿಯ ಬಣ್ಣವಾಗಿದೆ. ಚಂದ್ರನಂತೆ ಮನೋಹರನಾದವನು. ಪೀತಾಂಬರಧಾರಿ. ಬಾಯಾರಿದ ಚಾತಕಪಕ್ಷಿಯು, ಮಳೆಗರೆ-ಯುವಂತೆ ಈ ಮೇಘರಾಗದೇವನನ್ನು ಬೇಡುತ್ತಿದೆ. ಅಮೃತದಂತೆ ಬಿಳುಪಾದ ಮುಗುಳ್ನಗೆಯಿಂದ ಕೂಡಿದ್ದಾನೆ. (ಮುಗುಳ್ನಕ್ಕಾಗ ಇವನ ಹಲ್ಲುಗಳು ಅಮೃತದಂತೆ ಬಿಳಿಯ ಕಾಂತಿಯಿಂದ ಕೂಡಿವೆ ಎಂದು ಅರ್ಥ.) ಮರದ ಮಧ್ಯದಲ್ಲಿ ನಿವಾಸವುಳ್ಳವನು. ಶ್ರೇಷ್ಠನೂ, ಯುವಕನೂ ಆದ ಈ ದೇವನು ವೀರರ ಮಧ್ಯದಲ್ಲಿ ಶೋಭಿಸುತ್ತಿದ್ದಾನೆ. **614**

**ಈ ರಾಗದ ಲಕ್ಷಣ**

ಮೇಘವು ಪೂರ್ಣೋದಯದ ರಾಗ. ಉತ್ತರಾಯಣ ಮೂರ್ಛನೆಯಿಂದ ಕೂಡಿದೆ. ಇಲ್ಲಿ ಧೈವತವು ವಿಕಲ್ಪವಾಗಿದೆಯೆಂದು ತಿಳಿಯಬೇಕು. ಶೃಂಗಾರರಸದಿಂದ ಕೂಡಿದ ಇವನು ಶೃಂಗಾರಿ-ಯಾಗಿದ್ದಾನೆ. **615**

ಮೂರ್ಛನಾ : ಸ ರಿ ಗ ಮ ಪ ಧ ನಿ ಸ - ಸ ನಿ ಧ ಪ ಮ ಗ ರಿ ಸ

171A/1 ## ಭೂಪಾಲೀರಾಗಸ್ವರೂಪ

ಇದು ಸ್ತ್ರೀರಾಗ. ಬಿಳಿಯ ಬಣ್ಣದ ದೇಹಕಾಂತಿ. ಮೈಗೆಲ್ಲಾ ಕುಂಕುಮವನ್ನು ಈ ರಾಗದೇವಿಯು ಬಳಿದುಕೊಂಡಿದ್ದಾಳೆ. ಇವಳಿಗೆ ಉನ್ನತವಾದ ಸ್ತನಗಳಿವೆ. ಚಂದ್ರನಂತೆ ಸುಂದರ ಮೊಗದಿಂದ ಮನೋಹರೆಯಾಗಿದ್ದಾಳೆ. ಪತಿಯ ವಿರಹದಿಂದ ದುಃಖಿತಳಾಗಿ ಗಂಡನನ್ನು ನೆನಪಿಸಿಕೊಳ್ಳುತ್ತಾ ಇವಳು ಸಂತೋಷವಿಲ್ಲದವಳಾಗಿದ್ದಾಳೆ. **616**

### ಈ ರಾಗದ ಲಕ್ಷಣ

ಈ ರಾಗದಲ್ಲಿ ಷಡ್ಜಸ್ವರವು ಗ್ರಹ-ಅಂಶ-ನ್ಯಾಸಗಳಲ್ಲಿರುತ್ತವೆ. ಪ್ರಥಮ ಮೂರ್ಛನೆಯು ಇದರಲ್ಲಿದೆ. (ಷಡ್ಜಸ್ವರವು ಮೂರ್ಛನೆಯ ಪ್ರಾರಂಭದಲ್ಲಿರುತ್ತದೆ.) ಶಾಂತರಸದಲ್ಲಿ ಈ ರಾಗದ ಪ್ರಯೋಗವಿದೆ. ಇದು ಪರಿಪೂರ್ಣರಾಗವಾಗಿದೆ. **617**

ಮೂರ್ಛನಾ : ಸ ರಿ ಗ ಮ ಪ ಧ ನಿ ಸ - ಸ ನಿ ಧ ಪ ಮ ಗ ರಿ ಸ

171A/2 ## ದೇಶಕಾರೀರಾಗಸ್ವರೂಪ

ಇವಳು ಸ್ತ್ರೀರಾಗದೇವತೆ. ಇವಳ ಕೂದಲುಗಳು ಸುಂದರವಾಗಿವೆ. ಸಕಲಾವಯವ ಪರಿಪೂರ್ಣೆಯಾದ ಇವಳ ಕಣ್ಣುಗಳು ಕಮಲದಂತೆ ಸುಂದರವೂ, ವಿಶಾಲವೂ ಆಗಿವೆ. ಉನ್ನತವಾದ ಸ್ತನದಿಂದ ಕೂಡಿ, ಚಿನ್ನದಂತೆ ಹೊಳೆಯುವ ದೇಹವುಳ್ಳವಳಾಗಿ, ಚಂದ್ರನಂತೆ ಸುಂದರ ಮೊಗದವಳಾಗಿ ದೇಶಕಾರೀ ರಾಗಿಣಿಯು ಪರಿಪೂರ್ಣೆಯೆನಿಸಿದ್ದಾಳೆ. ಗಂಡನೊಡನೆ ರತಿಕ್ರೀಡೆಯಲ್ಲಿ ತೊಡಗಿದ್ದಾಳೆ. **618**

### ಈ ರಾಗದ ಲಕ್ಷಣ

ದೇಶಕಾರಿಯು ಪೂರ್ಣರಾಗ. ನ್ಯಾಸ-ಗ್ರಹ-ಅಂಶಗಳಲ್ಲಿ ಷಡ್ಜಸ್ವರವಿದೆ. ಪ್ರಥಮಾ ಮೂರ್ಛನಾ ಈ ರಾಗದಲ್ಲಿದೆ. (ಮೂರ್ಛನೆಯ ಪ್ರಾರಂಭಸ್ವರ ಷಡ್ಜ). ಇದು ವರಾಟೀ ರಾಗದೊಡನೆ ಕೂಡಿ ಕೊಂಡಿದೆ. **619**

ಮೂರ್ಛನಾ : ಸ ರಿ ಗ ಮ ಪ ಧ ನಿ ಸ | ಸ ನಿ ಧ ಪ ಮ ಗ ರಿ ಸ |

171B/1 ## ಟಕ್ಕಾರಾಗಸ್ವರೂಪ

ತಾವರೆಯ ಎಲೆಗಳ ಹಾಸಿಗೆಗಳ ಮೇಲೆ ಪ್ರಿಯಾವಿರಹಿತನಾಗಿ ಒಂಟಿಯಾಗಿ ಮಲಗಿರುವ ಕಾಂತನನ್ನು ನೋಡಿ, ಮನಸ್ಸಿನಲ್ಲಿ ದುಃಖಪಡುತ್ತಿದ್ದಾಳೆ. ಚಿನ್ನದಂತೆ ಮಿರುಗುವ ದೇಹವುಳ್ಳ ಅವಳು ಮನೆಗೆ ಬಂದು (ಕಾಂತನೊಡನೆ) ಒಳ್ಳೆಯ ಮಾತುಗಳನ್ನು ಆಡುತ್ತಿದ್ದಾಳೆ. ಟಕ್ಕಾರಾಗವು ಸ್ತ್ರೀರಾಗ. **620**

## ಈ ರಾಗದ ಲಕ್ಷಣ

ಟಕ್ಕಾರಾಗದಲ್ಲಿ ಮೂರು ರೀತಿಯ ಷಡ್ಜಸ್ವರವು ಇರುತ್ತದೆ. ಮೂರ್ಛನೆಯ ಆದಿಯಲ್ಲಿ ಷಡ್ಜಸ್ವರವಿರುತ್ತದೆ. 620A

ಮೂರ್ಛನಾ : ಸ ರಿ ಗ ಮ ಪ ಧ ನಿ ಸ | ಸ ನಿ ಧ ಪ ಮ ಗ ರಿ ಸ |

171B/2 ## ಘೂರ್ಜರೀರಾಗಸ್ವರೂಪ

ಘೂರ್ಜರಿಯು ಸ್ತ್ರೀಯಾದ್ದರಿಂದ ರಾಗಿಣೀ. ಸ್ತ್ರೀರಾಗಿಣಿಯಾದ ಇವಳು ನೀಲಶರೀರೆ. ಸುಂದರ ಕೂದಲುಗಳುಳ್ಳವಳು. ಶ್ರೀಗಂಧದ ಎಲೆಗಳ ಹಾಸಿಗೆಯ ಮಧ್ಯದಲ್ಲಿ ಕುಳಿತು, ತಂತಿಯ ವಾದ್ಯ-ವಾದ ವೀಣೆಯ ಬಲಭಾಗದಲ್ಲಿ ವಾದ್ಯವನ್ನು ನುಡಿಸುತ್ತಾ ಶ್ರುತಿಸ್ವರಗಳ ವಿಭಾಗಗಳನ್ನು ನುಡಿಸುತ್ತಿದ್ದಾಳೆ. 621

## ಈ ರಾಗದ ಲಕ್ಷಣ

ಗ್ರಹ-ಅಂಶ-ನ್ಯಾಸಗಳಲ್ಲಿ ರಿಷಭಸ್ವರದಿಂದ ಕೂಡಿದ ರಾಗವಿದು. ಇದರಲ್ಲಿ ಸಪ್ತಮೀ ಮೂರ್ಛನೆಯು ಇರುತ್ತದೆ. ಇದು ಭೂಪಾಲೀರಾಗದೊಡನೆ ಇರುತ್ತದೆ. 622

ಮೂರ್ಛನಾ : ಸ ರಿ ಗ ಮ ಪ ಧ ನಿ ಸ - ಸ ನಿ ಧ ಪ ಮ ಗ ರಿ ಸ

(ಸಪ್ತಮೀ ಮೂರ್ಛನೆ : ಮೂರ್ಛನೆಯ ಏಳನೆಯ ಸ್ವರವು ಷಡ್ಜವಾಗಿರುವ ಮೂರ್ಛನೆ.)

172A ## ಇನ್ನು ಮುಂದೆ ತಾಳಗಳ ಹೆಸರುಗಳು, ಸ್ವರೂಪಗಳು, ಲಕ್ಷಣಗಳು ಸಂಗೀತಶಾಸ್ತ್ರಕ್ಕೆ ಅನುಸಾರವಾಗಿ ಬರೆಯಲ್ಪಡುತ್ತದೆ

## ತಾಳಗಳ ಹೆಸರುಗಳು, ಸ್ವರೂಪಗಳು, ಲಕ್ಷಣಗಳು

I. ### ತಾಳಗಳ ಹೆಸರುಗಳು

ತಾಳಗಳು ಧ್ರುವ, ಮಟ್ಟ, ರೂಪಕ, ಝುಂಪಾ, ತ್ರಿಪುಟ, ಅಟ್ಟತಾಳ, ಏಕತಾಳಗಳೆಂದು ಏಳು ವಿಧವಾಗಿ ಉಕ್ತವಾಗಿವೆ. 623

i) ಧ್ರುವತಾಳಕ್ಕೆ — ಹದಿನಾಲ್ಕು ಅಕ್ಷರಗಳ ಕಾಲ

ii) ಮಟ್ಟತಾಳಕ್ಕೆ — ಹತ್ತು ಅಕ್ಷರಗಳ ಕಾಲ

iii) ರೂಪಕತಾಳಕ್ಕೆ — ಆರು ಅಕ್ಷರಗಳ ಕಾಲ

iv) ಝುಂಪಾತಾಳಕ್ಕೆ — ಹತ್ತು ಅಕ್ಷರಗಳ ಕಾಲ

v) ತ್ರಿಪುಟತಾಳಕ್ಕೆ — ಏಳು ಅಕ್ಷರಗಳ ಕಾಲ

| | | |
|---|---|---|
| vi) | ಅಟ್ಟತಾಳಕ್ಕೆ | ಹದಿನಾಲ್ಕು ಅಕ್ಷರಗಳ ಕಾಲ |
| vii) | ಏಕತಾಳಕ್ಕೆ | ಹದಿನಾಲ್ಕು ಅಕ್ಷರಗಳ ಕಾಲ |

ಆದಿತಾಳವೂ ಸಹ ಈ ಏಕತಾಳದಲ್ಲಿಯೇ ಸೇರಿಹೋಗುತ್ತದೆ. ಏಕತಾಳವೇ ಎರಡು ಬಾರಿ ಆವೃತ್ತವಾಗಿ ಎಂಟು ಮಾತ್ರೆಗಳಿಂದ ಕೂಡಿ ಆದಿತಾಳವೆಂದು ವ್ಯವಹಾರದಲ್ಲಿ ಕರೆಯಲ್ಪಡುತ್ತದೆ.

## II. ಇನ್ನು ಮುಂದೆ, ತಾಳಗಳ ಜಾತಿ, ಲಕ್ಷಣಗಳು, ಕಲೆಗಳು ಮತ್ತು ಸಂಖ್ಯಾಕ್ರಮಗಳು

ತಾಳಗಳಲ್ಲಿ ಚತುರಶ್ರ (4), ತ್ರ್ಯಶ್ರ (3), ಮಿಶ್ರ (7), ಖಂಡ (5), ಸಂಕೀರ್ಣ (9)ಗಳೆಂದು ಐದು ಬಗೆಯ ಜಾತಿಗಳಿವೆ. ಈ ಐದು ಜಾತಿಯ ತಾಳಗಳು ಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮತ್ತು ಸಂಕೀರ್ಣಗಳೆಂಬ ಐದು ಜಾತಿಗೆ ಸೇರಿದ ತಾಳಗಳು. (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರಜಾತಿಗಳು ಸೇರಿ ಆದುದು ಸಂಕೀರ್ಣಜಾತಿ.) 624

ಈ ಐದು ಜಾತಿಗಳ ತಾಳಗಳನ್ನು ಕ್ರಮವಾಗಿ ವೇದ (4), ಅಗ್ನಿ (3), ಶೈಲ (7), ಶರ (5), ಪದ್ಮ (9)ಗಳೆಂಬ ಸಂಕೇತಿತ ಸಂಖ್ಯೆಗಳಿಂದ ಕೂಡಿದ್ದೆಂದು ತಿಳಿಯಬೇಕು. ಅಂದರೆ - ಇದರ ವಿವರಣೆ ಹೀಗಿದೆ -

ವೇದಗಳು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳೆಂದು ನಾಲ್ಕು. ಆದ್ದರಿಂದ ವೇದ ಶಬ್ದಕ್ಕೆ ಸಂಖ್ಯೆ ನಾಲ್ಕು ಎಂದು ಅರ್ಥ. ಅಗ್ನಿಯು ಗಾರ್ಹಪತ್ಯ, ದಾಕ್ಷಿಣಾಗ್ನಿ, ಆಹವನೀಯ ಎಂದು ಮೂರು ವಿಧ. ಆದ್ದರಿಂದ ಅಗ್ನಿ ಶಬ್ದಕ್ಕೆ ಸಂಖ್ಯೆ ಮೂರು ಎಂದು ಅರ್ಥ. ಶೈಲವೆಂದರೆ ಬೆಟ್ಟ ಅಥವಾ ಪರ್ವತವೆಂದು ಅರ್ಥ. ಸಪ್ತ ಅಚಲಗಳೆಂದು ಪ್ರಸಿದ್ಧಿ. ಆ ಕಾರಣ ಶೈಲಶಬ್ದದಿಂದ ಸಂಖ್ಯೆ ಏಳು ಎಂದು ಗ್ರಹಿಸಬೇಕು. ಶರ ಎಂದರೆ ಬಾಣ. ಮನ್ಮಥನ ಐದು ಪುಷ್ಪಬಾಣಗಳು ಪ್ರಸಿದ್ಧವಾಗಿವೆ. ಆದ್ದರಿಂದ ಶರ ಶಬ್ದಕ್ಕೆ ಸಂಖ್ಯೆ ಐದು ಎಂದು ಅರ್ಥ. ಪದ್ಮವು ಒಂಭತ್ತು ನಿಧಿಗಳಲ್ಲಿ ಒಂದು ನಿಧಿ. ಆದ್ದರಿಂದ ಪದ್ಮ ಶಬ್ದಕ್ಕೆ ಒಂಭತ್ತು ಎಂದು ಅರ್ಥ. ಈ ಕ್ರಮದಂತೆ,

| | |
|---|---|
| ಬ್ರಾಹ್ಮಣಜಾತಿಯ ಚತುರಶ್ರಜಾತಿ ತಾಳದ ಸಂಖ್ಯೆ | 4 |
| ಕ್ಷತ್ರಿಯ ಜಾತಿಯ ತ್ರ್ಯಶ್ರಜಾತಿಯ ತಾಳದ ಸಂಖ್ಯೆ | 3 |
| ವೈಶ್ಯಜಾತಿಯ ಮಿಶ್ರಜಾತಿ ತಾಳದ ಸಂಖ್ಯೆ | 7 |
| ಶೂದ್ರಜಾತಿಯ ಖಂಡಜಾತಿ ತಾಳದ ಸಂಖ್ಯೆ | 5 |
| ಸಂಕೀರ್ಣಜಾತಿಯ ಸಂಕೀರ್ಣಜಾತಿ ತಾಳದ ಸಂಖ್ಯೆ | 9 |

ಈ ಐದೂ ಸಂಖ್ಯೆಗಳನ್ನು ಮೊದಲಿಗೆ ಒಂದರಿಂದ ಗುಣಿಸಿಕೊಂಡು, ನಂತರ ಸಂಖ್ಯೆ ಎರಡರಿಂದ ಉತ್ತರೋತ್ತರಸಂಖ್ಯೆಯನ್ನು ಗುಣಿಸುತ್ತಾ ಹೋದರೆ ಆರು ಬಾರಿ ಗುಣಿಸಿದಂತಾಗುತ್ತದೆ. ಆರನೆಯ ಕೊನೆಯ ಬಾರಿ ಎರಡರಿಂದ ಗುಣಿಸಿದಾಗ ಬರುವ ಸಂಖ್ಯೆಯೇ ಆಯಾಯಾ ಜಾತಿತಾಳಗಳು ಕಲಾಸಂಖ್ಯೆಯಾಗುತ್ತದೆ. **625**

ಮೇಲಿನ ಶ್ಲೋಕದ ಹಾಗೂ ವಾಕ್ಯದ ವ್ಯಾಖ್ಯಾಕ್ರಮವು ಹೀಗಿದೆ -

1. ಚತುರಶ್ರಜಾತಿ ತಾಳವು ಬ್ರಾಹ್ಮಣ ಜಾತಿಯಾಗಿದೆ. ಅದು ನಾಲ್ಕು ಗುರುವರ್ಣಗಳಿಂದ ಕೂಡಿದೆ.
2. ತ್ರ್ಯಶ್ರ ತಾಳವು ಕ್ಷತ್ರಿಯ ಜಾತಿಯಾಗಿದೆ. ಅದು ಮೂರು ಗುರುವರ್ಣಗಳಿಂದ ಕೂಡಿದೆ.
3. ಮಿಶ್ರಜಾತಿ ತಾಳವು ವೈಶ್ಯಜಾತಿಯಾಗಿದೆ. ಅದು ಏಳು ಗುರುವರ್ಣಗಳಿಂದ ಕೂಡಿದೆ.
4. ಖಂಡಜಾತಿ ತಾಳವು ಶೂದ್ರಜಾತಿಯಾಗಿದೆ. ಅದು ಐದು ಗುರುವರ್ಣಗಳಿಂದ ಕೂಡಿದೆ.
5. ಸಂಕೀರ್ಣಜಾತಿ ತಾಳವು ನಾಲ್ಕು ಜಾತಿಗಳಿಂದ ಕೂಡಿ ಆಗಿದೆ. ಆದ್ದರಿಂದ ಅದನ್ನು ಸಂಕೀರ್ಣತಾಳವೆಂದು ಕರೆದಿದ್ದಾರೆ. ಅದು ಒಂಭತ್ತು ಗುರುವರ್ಣಗಳಿಂದ ಕೂಡಿದೆ.

ಈ ಐದು ಜಾತಿಯ ಸಂಖ್ಯಾಕ್ಷರವನ್ನು ಮೊದಲಿಗೆ ಒಂದರಿಂದ ಗುಣಿಸಿ, ನಂತರ ಮುಂದು-ಮುಂದಿನ ಸಂಖ್ಯೆಗಳನ್ನು ಐದು ಬಾರಿ ಎರಡರಿಂದ ಗುಣಿಸಿದರೆ, ಸಂಕೇತಿತ ಸಂಖ್ಯೆಯನ್ನು ಆರು ಬಾರಿ ಗುಣಿಸಿದಂತೆ ಆಗುತ್ತದೆ. ಆರನೆಯ ಬಾರಿ ಕೊನೆಯದಾಗಿ ಎರಡರಿಂದ ಗುಣಿಸಿದ ಸಂಖ್ಯೆಯಿಂದ ಬರುವ ಮೊತ್ತವೇ ಆಯಾಯಾ ಜಾತಿಯ ಕಲಾಸಂಖ್ಯೆಯೆಂದು ನಾವು ತಿಳಿಯಬೇಕು.

I. ಚತುರಶ್ರವೆಂಬ ಹೆಸರಿನ ಜಾತಿಯ ತಾಳಸಂಖ್ಯೆಯನ್ನು ಎರಡರಿಂದ ಗುಣಿಸಿ ಬರುವ ಮುಂದು ಮುಂದಿನ ಸಂಖ್ಯೆಗಳನ್ನು ಎರಡರಿಂದ ಗುಣಿಸುತ್ತಾ ಹೋದ ಹಾಗೆ ಬರುವ ಕಲಾ ಸಂಖ್ಯಾಕ್ರಮ.

ಚತುರಶ್ರತಾಳ ಜಾತಿಯ ಸಂಖ್ಯೆ 4. ಮೊದಲಿಗೆ ಇದನ್ನು ಒಂದರಿಂದ ಗುಣಿಸಿದರೆ 4 ಬರುತ್ತದೆ. ಇದನ್ನು 2 ರಿಂದ ಗುಣಿಸಿದರೆ 8 ಆಗುತ್ತದೆ. 8ನ್ನು 2 ರಿಂದ ಗುಣಿಸಿದರೆ 16 ಆಗುತ್ತದೆ. 16ನ್ನು ಎರಡರಿಂದ ಗುಣಿಸಿದರೆ 32 ಆಗುತ್ತದೆ. 32ನ್ನು 2 ರಿಂದ ಗುಣಿಸಿದಾಗ 64 ಆಗುತ್ತದೆ. 64ನ್ನು 2 ರಿಂದ ಗುಣಿಸಿದರೆ 128 ಆಗುತ್ತದೆ.

| | | |
|---|---|---|
| 1) 4 x 1 = 4 | 2) 4 x 2 = 8 | 3) 8 x 2 = 16 |
| 4) 16 x 2 = 32 | 5) 32 x 2 = 64 | 6) 64 x 2 = 128 |

ಚತುರಶ್ರಬ್ರಾಹ್ಮಣಜಾತಿ ತಾಳದ ಒಟ್ಟು ಕಲಾ ಸಂಖ್ಯೆ - 128

II. ತ್ರ್ಯಶ್ರವೆಂಬ ಹೆಸರಿನ ಕ್ಷತ್ರಿಯ ಜಾತಿ ತಾಳ ಸಂಖ್ಯೆಯನ್ನು ಎರಡರಿಂದ ಉತ್ತರೋತ್ತರವಾಗಿ ಆರು ಬಾರಿ ಗುಣಿಸಿದಾಗ ಬರುವ ಕಲಾ ಸಂಖ್ಯಾಕ್ರಮ -

ತ್ರ್ಯಶ್ರ ಜಾತಿಯ ಸಂಖ್ಯೆ 3. ಮೊದಲಿಗೆ ಇದನ್ನು ಒಂದರಿಂದ ಗುಣಿಸಿದರೆ 3 ಬರುತ್ತದೆ. ಈ 3ನ್ನು 2 ರಿಂದ ಗುಣಿಸಿದರೆ 6 ಆಗುತ್ತದೆ. 6ನ್ನು 2 ರಿಂದ ಗುಣಿಸಿದರೆ 12 ಆಗುತ್ತದೆ. 12ನ್ನು ಎರಡರಿಂದ ಗುಣಿಸಿದರೆ 24 ಆಗುತ್ತದೆ. 24ನ್ನು 2 ರಿಂದ ಗುಣಿಸಿದಾಗ 48 ಆಗುತ್ತದೆ. 48ನ್ನು 2 ರಿಂದ ಗುಣಿಸಿದರೆ 96 ಆಗುತ್ತದೆ.

| | | |
|---|---|---|
| 1) 3 x 1 = 3 | 2) 3 x 2 = 6 | 3) 6 x 2 = 12 |
| 4) 12 x 2 = 24 | 5) 24 x 2 = 48 | 6) 48 x 2 = 96 |

ತ್ರ್ಯಶ್ರ ಕ್ಷತ್ರಿಯಜಾತಿ ತಾಳದ ಒಟ್ಟು ಕಲಾ ಸಂಖ್ಯೆ - 96

**III.** ಮಿಶ್ರವೆಂಬ ಹೆಸರಿನ ವೈಶ್ಯಜಾತಿಯ ತಾಳ ಸಂಖ್ಯೆಯನ್ನು ಎರಡರಿಂದ ಉತ್ತರೋತ್ತರವಾಗಿ ಆರು ಬಾರಿ ಗುಣಿಸಿದಾಗ ಬರುವ ಕಲಾ ಸಂಖ್ಯಾಕ್ರಮ -

ಮಿಶ್ರ ಜಾತಿಯ ಸಂಖ್ಯೆ 7. ಮೊದಲಿಗೆ ಇದನ್ನು ಒಂದರಿಂದ ಗುಣಿಸಿದರೆ 7 ಬರುತ್ತದೆ. 7ನ್ನು 2 ರಿಂದ ಗುಣಿಸಿದರೆ 14 ಆಗುತ್ತದೆ. 14ನ್ನು 2 ರಿಂದ ಗುಣಿಸಿದರೆ 28 ಆಗುತ್ತದೆ. 28ನ್ನು ಎರಡರಿಂದ ಗುಣಿಸಿದರೆ 56 ಆಗುತ್ತದೆ. 56ನ್ನು 2 ರಿಂದ ಗುಣಿಸಿದಾಗ 112 ಆಗುತ್ತದೆ. 112ನ್ನು 2 ರಿಂದ ಗುಣಿಸಿದರೆ 224 ಆಗುತ್ತದೆ.

| | | |
|---|---|---|
| 1) 7 x 1 = 7 | 2) 7 x 2 = 14 | 3) 14 x 2 = 28 |
| 4) 28 x 2 = 56 | 5) 56 x 2 = 112 | 6) 112 x 2 = 224 |

ಮಿಶ್ರವೆಂಬ ವೈಶ್ಯಜಾತಿಯ ತಾಳದ ಒಟ್ಟು ಕಲಾ ಸಂಖ್ಯೆ - 224

**IV.** ಖಂಡವೆಂಬ ಹೆಸರಿನ ಶೂದ್ರಜಾತಿಯ ತಾಳ ಸಂಖ್ಯೆಯನ್ನು ಎರಡರಿಂದ ಉತ್ತರೋತ್ತರವಾಗಿ ಆರು ಬಾರಿ ಗುಣಿಸಿದಾಗ ಬರುವ ಕಲಾ ಸಂಖ್ಯಾಕ್ರಮ -

ಖಂಡಜಾತಿಯ ಸಂಖ್ಯೆ 5. ಮೊದಲಿಗೆ ಇದನ್ನು ಒಂದರಿಂದ ಗುಣಿಸಿದರೆ 5 ಬರುತ್ತದೆ. 5ನ್ನು 2 ರಿಂದ ಗುಣಿಸಿದರೆ 10 ಆಗುತ್ತದೆ. 10ನ್ನು 2 ರಿಂದ ಗುಣಿಸಿದರೆ 20 ಆಗುತ್ತದೆ. 20ನ್ನು ಎರಡರಿಂದ ಗುಣಿಸಿದರೆ 40 ಆಗುತ್ತದೆ. 40ನ್ನು 2 ರಿಂದ ಗುಣಿಸಿದಾಗ 80 ಆಗುತ್ತದೆ. 80ನ್ನು 2 ರಿಂದ ಗುಣಿಸಿದಾಗ ಕಡೆಗೆ 160 ಬರುತ್ತದೆ.

| | | |
|---|---|---|
| 1) 5 x 1 = 5 | 2) 5 x 2 = 10 | 3) 10 x 2 = 20 |
| 4) 20 x 2 = 40 | 5) 40 x 2 = 80 | 6) 80 x 2 = 160 |

ಖಂಡವೆಂಬ ಶೂದ್ರಜಾತಿಯ ತಾಳದ ಒಟ್ಟು ಕಲಾ ಸಂಖ್ಯೆ - 160

**V.** ಸಂಕೀರ್ಣವೆಂಬ ಹೆಸರಿನ ಸಂಕೀರ್ಣಜಾತಿಯ ತಾಳ ಸಂಖ್ಯೆಯನ್ನು ಎರಡರಿಂದ ಉತ್ತರೋತ್ತರವಾಗಿ ಆರು ಬಾರಿ ಗುಣಿಸಿದಾಗ ಬರುವ ಕಲಾ ಸಂಖ್ಯಾಕ್ರಮ -

ಸಂಕೀರ್ಣಜಾತಿಯ ಸಂಖ್ಯೆ 9. ಮೊದಲಿಗೆ ಇದನ್ನು ಒಂದರಿಂದ ಗುಣಿಸಿದರೆ 9 ಬರುತ್ತದೆ. 9ನ್ನು 2 ರಿಂದ ಗುಣಿಸಿದರೆ 18 ಆಗುತ್ತದೆ. 18ನ್ನು 2 ರಿಂದ ಗುಣಿಸಿದರೆ 36 ಆಗುತ್ತದೆ. 36ನ್ನು ಎರಡರಿಂದ ಗುಣಿಸಿದರೆ 72 ಆಗುತ್ತದೆ. 72ನ್ನು 2 ರಿಂದ ಗುಣಿಸಿದಾಗ 144 ಆಗುತ್ತದೆ. 144ನ್ನು 2 ರಿಂದ ಗುಣಿಸಿದರೆ 288 ಬರುತ್ತದೆ.

| | | |
|---|---|---|
| 1) 9 x 1 = 9 | 2) 9 x 2 = 18 | 3) 18 x 2 = 36 |
| 4) 36 x 2 = 72 | 5) 72 x 2 = 144 | 6) 144 x 2 = 288 |

ಸಂಕೀರ್ಣವೆಂಬ ಸಂಕೀರ್ಣಜಾತಿ ತಾಳದ ಒಟ್ಟು ಕಲಾ ಸಂಖ್ಯೆ - 288

## ಸಂಕೀರ್ಣತಾಳದ ಕ್ರಮ ಮತ್ತು ಲಕ್ಷಣಗಳು

ಹಿಂದೆ ಹೇಳಿದ ಐದು ಬಗೆಯ ಜಾತಿ ತಾಳಗಳಿಗಿಂತ ಬೇರೆಯದಾದ ಹೊಸ ತಾಳವು ಮಾರ್ಗ-ತಾಳವೆಂದು ಹೇಳಲ್ಪಟ್ಟಿದೆ. ಹಿಂದಿನ ಐದು ಬಗೆಯ ತಾಳಗಳಲ್ಲಿ ಮೊದಲೆರಡರಲ್ಲಿ ದ್ರುತಗಳು, ಮೂರನೆಯದರಲ್ಲಿ ವಿರಾಮವು, ಕೊನೆಯ ಎರಡರಲ್ಲಿ ಪ್ಲುತಗಳೂ ಇರುತ್ತವೆ. **626**

## ತಾಳಗಳ ಆರು ಅಂಗಗಳ ಹೆಸರುಗಳು, ಅವುಗಳ ದೇವತೆಗಳು

ವಿರಾಮ, ದ್ರುತ, ಲಘು, ಗುರು, ಪ್ಲುತ, ಕಾಕಪಾದಗಳೆಂದು ಇವು ಆರು ತಾಳಗಳ ಅಂಗಗಳೆಂದು ಉಕ್ತವಾಗಿವೆ. **627**

| | | |
|---|---|---|
| ದ್ರುತಕ್ಕೆ ದೇವತೆ | ಶಂಭು | |
| ಲಘುವಿಗೆ ದೇವತೆ | ಹಿಮಸುತೆ ಪಾರ್ವತಿ | |
| ಗುರುವಿಗೆ ದೇವತೆಗಳು | ಶಿವಪಾರ್ವತಿಯರಿಬ್ಬರೂ | |
| ಪ್ಲುತಕ್ಕೆ ದೇವತೆಗಳು | ಬ್ರಹ್ಮ-ವಿಷ್ಣು-ಮಹೇಶ್ವರ ತ್ರಿಮೂರ್ತಿಗಳು | |
| ವಿರಾಮಕ್ಕೆ ದೇವತೆ | ಹರಿ | |
| ಕಾಕಪಾದಕ್ಕೆ ದೇವತೆ | ಶಿವ | **628-628A** |

## ತಾಳಗಳ ಆರು ಅಂಗಗಳ ಆಕಾರಗಳು

| | |
|---|---|
| ದ್ರುತಕ್ಕೆ | ವಲಯಾಕಾರ ( O ) |

| | |
|---|---|
| ಲಘುವಿಗೆ | ಮೇಲ್ಮುಖವಾದ ಬಾಣದ ಆಕಾರ ↑ |
| ಗುರುವಿಗೆ | ವಕ್ರಾಕಾರ ∪ |
| ಪ್ಲುತಕ್ಕೆ | ಧನುರಾಕಾರ } ಹಾಗೂ |
| | ಗುರುವು ಮೇಲ್ಮುಖವಾದ ಶಿಖರಾಕಾರ ∩ |
| ವಿರಾಮಕ್ಕೆ | ಅರ್ಧಚಂದ್ರಾಕಾರ ◡ |
| ಕಾಕಪಾದಕ್ಕೆ | ಹಂಸಪಾದಾಕಾರ ^ 629-629A |

172B
## ತಾಳಗಳ ಆರು ಅಂಗಗಳ ಅಕ್ಷರಕಾಲನಿರ್ಣಯ

ವಿರಾಮಕ್ಕೆ (1) ಒಂದು ಲಘ್ವಕ್ಷರ ಕಾಲ. ಎರಡು ಗುರುಗಳ ಕಾಲವು ಒಂದು ದ್ರುತಕ್ಕೆ ಆಗುತ್ತದೆ. ನಾಲ್ಕು ಲಘುಗಳ (4), ಎಂಟು ಲಘುಗಳ (8) ಕಾಲವನ್ನು ಗುರು ಎಂದು ಹೇಳಿದೆ. 630

ಪ್ಲುತಕ್ಕೆ (12) ಹನ್ನೆರಡು ಲಘು ಅಕ್ಷರಗಳ ಕಾಲವಾಗುತ್ತದೆ. ಕಾಕಪಾದಕ್ಕೆ (16) ಹದಿನಾರು ಲಘು ಅಕ್ಷರಗಳ ಕಾಲವಾಗುತ್ತದೆ. 630A

ಶಾರ್ಙ್ಗಧರನ "ಸಂಗೀತರತ್ನಾಕರ"ವೆಂಬ ಗ್ರಂಥದಲ್ಲಿಯೂ ಇದೇ ರೀತಿ ಹೇಳಿದೆ.

ಒಂದು ಮಾತ್ರಾಕಾಲವುಳ್ಳದ್ದು ಲಘುವರ್ಣವೆಂದು ಉಕ್ತವಾಗಿದೆ.

ಎರಡು ಮಾತ್ರೆಗಳಿಂದ ಕೂಡಿದ ವರ್ಣವು ಗುರುವಾಗುತ್ತದೆ.

ಮೂರು ಮಾತ್ರೆಗಳಿಂದ ಕೂಡಿದುದು ಪ್ಲುತವೆಂದು ತಿಳಿಯಬೇಕು.

ನಾಲ್ಕು ಮಾತ್ರೆಗಳಿಂದ ಕೂಡಿದುದು ಕಾಕಪಾತ್ ಆಗುತ್ತದೆ.

ದ್ರುತಕ್ಕೆ ಅರ್ಧಮಾತ್ರಾಕಾಲ, ವಿರಾಮಕ್ಕೆ ಕಾಲು ಮಾತ್ರಾಕಾಲ. 631-631A

## ಮುಂದೆ ಪ್ರಕಾರಾಂತರದಿಂದ ಒಂದು ನೂರು ಹತ್ತು ತಾಳಗಳ ಹೆಸರುಗಳು

### (ಸಂಗೀತಸಂಗ್ರಹದಲ್ಲಿ ಮತ್ತು ಶಿವತತ್ತ್ವರತ್ನಾಕರದಲ್ಲಿ ಹೇಳಿರುವಂತೆ)

ಗೀತ, ವಾದ್ಯ, ನೃತ್ಯಗಳೆಂಬ ಈ ಎಲ್ಲ ಮೂರೂ ತಾಳದಲ್ಲಿ ಪ್ರತಿಷ್ಠಿತವಾಗಿವೆ. ತಾಳವಿಲ್ಲದೆ (ಸಂಗೀತದಲ್ಲಿ) ಏನೂ ಇಲ್ಲ. ಹಾಗಾಗಿ ತಾಳಕ್ಕೆ ಪ್ರಾಮುಖ್ಯವನ್ನು ನೀಡಲಾಗಿದೆ. 632

ತಕಾರದಿಂದ ತಾಂಡವವು, ಲಕಾರದಿಂದ ಲಾಸ್ಯವು ಉಕ್ತವಾಗಿವೆ. ತಕಾರವು ಶಂಕರನೆಂದು, ಲಕಾರವು ಪಾರ್ವತಿಯೆಂದು ಸ್ಮೃತವಾಗಿದೆ. 633

ಶಿವಶಕ್ತಿ ಸಮಾಯೋಗದಿಂದ 'ತಾಲ' ಎಂಬುದಾಗಿ ಹೇಳಲ್ಪಡುತ್ತದೆ. ತಾಳವಿಲ್ಲದೆ ಗೀತವಿಲ್ಲ. ತಾಳವರ್ಜಿತವಾದ ವಾದ್ಯವೂ ಇಲ್ಲ. **634**

ತಾಳಹೀನವಾದ ನೃತ್ತವಿಲ್ಲ. ಇನ್ನೂ ಮುಂದೆ ಹೋದಂತೆ ತಾಳವಿಲ್ಲದ ನಿರಂತರ ರಂಜಕವೂ ಇಲ್ಲ. ಇಲ್ಲಿಂದ ಮುಂದೆ ತಾಳಗಳ ಭೇದಗಳನ್ನು ಕ್ರಮಪ್ರಕಾರವಾಗಿ ಹೇಳಲಾಗುವುದು. **635**

ಈಶ್ವರನ ಸದ್ಯೋಜಾತಾದಿ ಐದುಮುಖಗಳಿಂದ ಐದು ತಾಳಗಳು ಹುಟ್ಟಿವೆ ಎಂದು ಉಕ್ತವಾಗಿವೆ. ಸದ್ಯೋಜಾತಮುಖದಿಂದ ಚಂಚತ್ಪುಟತಾಳವು ಹುಟ್ಟಿದೆ. **636**

ವಾಮದೇವಮುಖದಿಂದ ಚಾಚತ್ಪುಟತಾಳವು ಹುಟ್ಟಿದೆ. ಅಘೋರಮುಖದಿಂದ ಷಟ್ಪಿತಾಮತ್ರಿಕತಾಳವು ಹುಟ್ಟಿದೆ. **637**

ತತ್ಪುರುಷಮುಖದಿಂದ ಸಂಪದ್ವೇಷ್ಟಕವೆಂಬ ಹೆಸರಿನ ತಾಳವು ಹುಟ್ಟಿದೆ. ಈಶಾನವೆಂಬ ಹೆಸರಿನ ಮುಖದಿಂದ ಎಲೈ ದೇವಿಯೇ! ಉದ್ಘಟ್ಟವೆಂಬ ಹೆಸರಿನ ತಾಳವು ಹುಟ್ಟಿದೆ. ಆದ್ದರಿಂದ ಈ ಐದು ತಾಳಗಳು ಪ್ರಶಸ್ತವಾದವುಗಳು ಮತ್ತು ಪಾತಕಗಳನ್ನು ನಾಶ ಮಾಡುವಂತಹವುಗಳು ಆಗಿವೆ. **638-638A**

"ಹೀಗೆ ತಾಳಗಳ ಪ್ರಶಂಸೆ ಮುಗಿಯಿತು"

### ಇನ್ನು ಮುಂದೆ ತಾಳಗಳ ಹೆಸರುಗಳು

| | | | | |
|---|---|---|---|---|
| 1. | ಚಂಚತ್ಪುಟ | 2. | ಚಾಚಪುಟ | |
| 3. | ಷಟ್‌ಪಿತಾಮತ್ರಿಕ | 4. | ಸಂಪದ್ವೇಷ್ಟಿತ | |
| 5. | ಉದ್ಘಟ್ಟ | 6. | ಆದಿತಾಳ | |
| 7. | ದರ್ಪಣ | | | **639** |
| 8. | ಚಂಚರೀ | 9. | ಸಿಂಹಲೀಲ | |
| 10. | ಕಂದರ್ಪ | 11. | ಸಿಂಹವಿಕ್ರಮ | |
| 12. | ಶ್ರೀರಂಗ | 13. | ರತಿಲೀಲ | |
| 14. | ರಂಗತಾಳ | 15. | ಕಂಚುಕ | **640** |
| 16. | ಪ್ರತ್ಯಂಗ | 17. | ಗಜಲೀಲ | |
| 18. | ತ್ರಿಭಿನ್ನ | 19. | ವೀರವಿಕ್ರಮ | |
| 20. | ಹಂಸಲೀಲ | 21. | ವರ್ಣಭಿನ್ನ | |
| 22. | ರಾಜಚೂಡಾಮಣಿ | | | **641** |

| | | | | |
|---|---|---|---|---|
| 23. | ವನಮಾಲೀ | 24. | ವರ್ಣತಾಲ | |
| 25. | ರಂಗಪ್ರದೀಪಿಕ | 26. | ಹಂಸನಾದ | |
| 27. | ಸಿಂಹನಾದ | 28. | ಮಲ್ಲಿಕಾಮೋದ | **642** |
| 29. | ಶರಭಲೀಲಾ | 30. | ರಂಗಾಭರಣ | |
| 31. | ತುರಂಗಲೀಲಾ | 32. | ಸಿಂಹನಂದನ | **643** |
| 33. | ಜಯಶ್ರೀ | 34. | ವಿಜಯಾನಂದ | |
| 35. | ಪ್ರತಿತಾಲ | 36. | ದ್ವಿತೀಯಕ | |
| 37. | ಮಕರಂದ | 38. | ಕೀರ್ತಿತಾಲ | |
| 39. | ವಿಜಯ | 40. | ಜಯಮಂಗಲ | **644** |
| 41. | ರಾಜವಿದ್ಯಾಧರ | 42. | ಜಯತಾಲ | |
| 43. | ಹುಡುಕ್ಕಕ | 44. | ನಿಸ್ಸಾರಕ | |
| 45. | ತ್ರಿಭಂಗೀ | 46. | ಕೋಕಿಲಪ್ರಿಯ | **645** |
| 47. | ಶ್ರೀಕೀರ್ತಿ | 48. | ಬಿಂದುಮಾಲಿನ್ | |
| 49. | ಸಮತಾಲ | 50. | ನಂದಕ | |
| 51. | ದುರೀಕ್ಷಣ | 52. | ಮಟ್ಟಕ | |
| 53. | ಶೃಂಕಿಕಾ | 54. | ವರ್ಣಮಠ್ಠಿಕಾ | **646** |
| 55. | ಅಭಿನಂದನ | 56. | ರತಿಕ್ರೀಡಾ | |
| 57. | ಮಲ್ಲತಾಲ | 58. | ದೀಪಕ | |
| 59. | ಅನಂಗಲೀಲ | 60. | ವಿಷಮ | |
| 61. | ನಾಂದೀ | 62. | ಕುಂದ | |
| 63. | ಮುಕುಂದಕ | | | **647** |
| 64. | ಸಿಂಹವಿಕ್ರೀಡಿತ | 65. | ಲೀಲಾ | |
| 66. | ಚತುಸ್ತಾಲ | 67. | ಡೋಂಬಲಿ | |
| 68. | ಅಭಂಗ | 69. | ರಾಜಭೇಂಕೋಲ | |
| 70. | ಲಘುಶೇಖರ | | | **648** |
| 71. | ಪ್ರತಾಪಶೇಖರ | 72. | ಜಗಝಂಪ | |

| | | | | |
|---|---|---|---|---|
| | 73. ಚತುರ್ಮುಖ | | 74. ಮುಕುಲ | |
| | 75. ಪ್ರತಿಮಠ್ಯ | | 76. ಅಭಯ | |
| | 77. ತೃತೀಯಕ | | | 649 |
| | 78. ರಂಗದ್ಯೋತ | | 79. ರಾಜತಾಲ | |
| | 80. ವಸಂತತಿಲಕ | | 81. ರತಿ | |
| 173A | 82. ಕಾರಣ | | 83. ಭಗಣ | |
| | 84. ಷಟ್‌ತಾಲ | | 85. ವರ್ಧನ | 650 |
| | 86. ವರ್ಣಯತಿ | | 87. ರಾಜನಾರಾಯಣ | |
| | 88. ಚತುರಶ್ರ | | 89. ತ್ರ್ಯಶ್ರ | |
| | 90. ಮಿಶ್ರ | | 91. ಮದನ | |
| | 92. ಕುಂಭತಾಲಕ | | | 651 |
| | 93. ಲಕ್ಷ್ಮೀತಾಲ | | 94. ಲಕ್ಷ್ಮೀಶ | |
| | 95. ಪಾರ್ವತೀಲೋಚನ | | 96. ಸಮ | |
| | 97. ಗರುಡತಾಲ | | 98. ಶ್ರೀನಂದನ | 652 |
| | 99. ಲೀಲಾವಿಲಾಸ | | 100. ಲಲಿತಾಪ್ರಿಯ | |
| | 101. ಜನಕ | | 102. ವಿಷಮ | |
| | 103. ರಾಜವರ್ಧನ | | 104. ಉತ್ಸವ | 653 |
| | 105. ಖಂಡ | | 106. ಪೂರ್ಣಕಂಕಾಲ | |
| | 107. ಸಗಣ | | 108. ಮಗಣ | |
| | 109. ಮುದ್ರಿಕಾಮಠ್ಯಕ | | 110 ಜಯ | 654 |

ಹೀಗೆ ಈ ಭೂತಲದಲ್ಲಿ ಒಂದು ನೂರು ಹತ್ತು ತಾಳಗಳು ಪ್ರಸಿದ್ಧವಾಗಿವೆ. **654A**

**173A/1** ಇನ್ನು ಮುಂದೆ ಪ್ರಸಿದ್ಧವಾದ ಧ್ರುವ ಮೊದಲಾದ
ಏಳು ತಾಳಗಳ ಸ್ವರೂಪ ಮೊದಲಾದವುಗಳು
(ಸಂಗೀತಸಂಗ್ರಹ ಮತ್ತು ಸಂಗೀತರತ್ನಾಕರದಲ್ಲಿ)

ಧ್ರುವತಾಳದೇವನು ಭಾನುವಾರ, ಪುಷ್ಯನಕ್ಷತ್ರದಲ್ಲಿ ಕರ್ಕಾಟಕರಾಶಿಯಲ್ಲಿ, ದೇವಗಣದಲ್ಲಿ ಅಜಾಯೋನಿಯಲ್ಲಿ ಹುಟ್ಟಿದವನು. **655**

ಇವನ ದೇಹದ ಬಣ್ಣ ಬಿಳಿ. ಇವನ ಕಣ್ಣುಗಳು ವಿಶಾಲವಾಗಿವೆ. ಶುಭ್ರವಾದ ಬಟ್ಟೆಗಳನ್ನು ಧರಿಸಿದ್ದಾನೆ. ರತ್ನಮಾಲೆಗಳಿಂದ ಅಲಂಕಾರಮಾಡಿಕೊಂಡಿದ್ದಾನೆ. ಶ್ರೀಂ ಎಂಬ ಬೀಜಾಕ್ಷರವನ್ನು ಆಶ್ರಯಿಸಿದ್ದಾನೆ. **656**

ಬ್ರಾಹ್ಮೀಶಕ್ತಿಯೊಡಗೂಡಿದ್ದಾನೆ. ಕೌಂಡಿನ್ಯ ಋಷಿಯು ಇವನ ಜೊತೆಯಿದ್ದಾನೆ. ವಿಷ್ಣುದೇವತೆಯು ಒಡನಿದ್ದಾನೆ. ಅನುಷ್ಟುಪ್ ಛಂದಸ್ಸಿನಿಂದ ಕೂಡಿದ್ದಾನೆ. **657**

ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನು. ಷಡ್ಜಸ್ವರವನ್ನು ಆಶ್ರಯಿಸಿದ್ದಾನೆ. ಶೃಂಗಾರರಸದಿಂದ ತುಂಬಿದ್ದಾನೆ. ಪ್ಲಕ್ಷದ್ವೀಪವನ್ನು ವಾಸಸ್ಥಾನವನ್ನಾಗಿ ಮಾಡಿಕೊಂಡಿದ್ದಾನೆ. **658**

ಮೂರು ಅಂಗಗಳಿಂದ ಕೂಡಿ, ದಿವ್ಯ ಲಘುವಿನೊಡನೆ ಕೂಡಿ, ಎರಡು ಲಘುವರ್ಣಗಳೊಡ-ಗೂಡಿದ್ದಾನೆ. ಇಂದ್ರಾಕ್ಷರ ಕಾಲವುಳ್ಳವನು ಅಂದರೆ ಹದಿನಾಲ್ಕು ಅಕ್ಷರಗಳುಳ್ಳವನು. 14 ಮನ್ವಂತರಗಳಿಗೆ 14 ಇಂದ್ರರು ಬರುತ್ತಾರೆ. ಹಾಗಾಗಿ ಇಂದ್ರ ಶಬ್ದಕ್ಕೆ 14 ಸಂಖ್ಯೆ ಎಂದು ಅರ್ಥ. ಚತುರಶ್ರಗತಿ-ಯುಳ್ಳವನಾಗಿದ್ದಾನೆ. **659**

ಸ ರಿ ಗ ಮ | ಗ ರಿ | ಸ ರಿ ಗ ರಿ | ಸ ರಿ ಗ ಮ |

**ಹೀಗೆ ಮೊದಲ ಧ್ರುವತಾಲಾಲಂಕಾರದಲ್ಲಿ ಚತುರ್ದಶಾಕ್ಷರಕಾಲ**

**(ಹದಿನಾಲ್ಕು ಅಕ್ಷರಗಳ ಕಾಲ) || 1 ||**

**(ಬಿಳಿಯ ಬಣ್ಣ)**

**173B/1** **ಮಠ್ಯತಾಲಸ್ವರೂಪಾದಿಗಳು**

**(ಸಂಗೀತಸಂಗ್ರಹದಲ್ಲಿ)**

ಮಠ್ಯತಾಲದೇವನು ಸೋಮವಾರದ ದಿವಸದಲ್ಲಿ, ಹಸ್ತನಕ್ಷತ್ರದಲ್ಲಿ, ಕನ್ಯಾರಾಶಿಯಲ್ಲಿ, ದೇವಗಣದಲ್ಲಿ, ಮಹಿಷಯೋನಿಯಲ್ಲಿ ಹುಟ್ಟಿದನು. **660**

ಇವನು ಕಪ್ಪುಬಣ್ಣದ ದೇಹದವನು. ವಿಶಾಲಕಣ್ಣುಗಳುಳ್ಳವನು. ಕೆಂಪುಬಟ್ಟೆಗಳನ್ನು ತೊಟ್ಟು-ಕೊಂಡಿದ್ದಾನೆ. ಮುತ್ತಿನ ಮಾಲೆಗಳಿಂದ ಭೂಷಿತನಾಗಿದ್ದಾನೆ. ಓಂಕಾರವೆಂಬ ಬೀಜಾಕ್ಷರವನ್ನು ಆಶ್ರಯಿಸಿದ್ದಾನೆ. **661**

ಮಾಹೇಶ್ವರೀ ಶಕ್ತಿಯುತನಾಗಿ, ಭರದ್ವಾಜ ಋಷಿಯೊಡಗೂಡಿ, ಅಗ್ನಿದೇವನೊಡನೆ ಕೂಡಿಕೊಂಡು, ಬೃಹತೀ ಛಂದಸ್ಸಿನೊಡನೆ ಕೂಡಿದ್ದಾನೆ. **662**

ಬ್ರಾಹ್ಮಣಜಾತಿಯವನು. ರಿಷಭಸ್ವರದೊಡನೆ ಇದ್ದಾನೆ. ರೌದ್ರರಸದಿಂದ ಕೂಡಿದ್ದಾನೆ. ಜಂಬೂ

ದ್ವೀಪದಲ್ಲಿ ನೆಲಸಿದ್ದಾನೆ. ಮೂರು ಅಂಗಗಳಿಂದ ಕೂಡಿದ್ದಾನೆ. ಲಘು, ದ್ರುತ, ಲಘುಗಳನ್ನು ಆಶ್ರಯಿಸಿದ್ದಾನೆ. ಆಶಾಕ್ಷರಕಾಲವುಳ್ಳವನು. ಆಶಾ ಎಂದರೆ ದಿಕ್ಕು ಎಂದು ಅರ್ಥ. ದಿಕ್ಕುಗಳು 10 ಪ್ರಸಿದ್ಧವಾಗಿವೆ. ಹಾಗಾಗಿ ಹತ್ತು ಅಕ್ಷರಗಳ ಕಾಲ ಪ್ರಮಾಣ ಉಳ್ಳವನು ಎಂದು ಅರ್ಥ. ಚತುರಶ್ರಗತಿಯುಳ್ಳವನು. **663-663A**

ಸ ರಿ ಗ ರಿ | ಸ ರಿ | ಸ ರಿ ಗ ಮ |

**ಹೀಗೆ ಎರಡನೆಯ ಮಠ್ಯತಾಲಾಲಂಕಾರದಲ್ಲಿ ಹತ್ತು ಅಕ್ಷರಗಳ ಕಾಲ || 2 ||**

**(ಶ್ಯಾಮವರ್ಣ - ಕಪ್ಪುಬಣ್ಣ)**

**174A/1** **ರೂಪಕತಾಳಸ್ವರೂಪಾದಿಗಳು**

**(ಸಂಗೀತಸಂಗ್ರಹದಲ್ಲಿ)**

ರೂಪಕತಾಳದೇವನು ಮಂಗಳವಾರದಂದು, ಮಖಾನಕ್ಷತ್ರದಲ್ಲಿ, ಸಿಂಹರಾಶಿಯಲ್ಲಿ, ರಾಕ್ಷಸಗಣದಲ್ಲಿ ಮೂಷಕಯೋನಿಯಲ್ಲಿ ಹುಟ್ಟಿದನು. **664**

ಇವನು ಕೆಂಪುಬಣ್ಣದ ದೇಹದವನು. ಇವನಿಗೆ ಭಯಂಕರ ಕಣ್ಣುಗಳು. ಪೀತಾಂಬರ ವಸ್ತ್ರಗಳನ್ನು ಧರಿಸಿರುವವನು. ಹವಳದ ಹಾರಗಳನ್ನು ಮತ್ತು ಆಭರಣಗಳನ್ನು ಹಾಕಿಕೊಂಡಿದ್ದಾನೆ. ರಕಾರವೆಂಬ ಬೀಜಾಕ್ಷರವನ್ನು ಆಶ್ರಯಿಸಿದ್ದಾನೆ. **665**

ಕೌಮಾರೀಶಕ್ತಿಯೊಡಗೂಡಿ, ಗೌತಮ ಋಷಿಯೊಡನೆ ವಿರಾಜಿಸುತ್ತಿದ್ದಾನೆ. ಭೃಂಗಿ ಇವನ ಅಧಿದೇವತೆ. ಇವನದು ತ್ರಿಷ್ಟುಪ್ ಛಂದಸ್ಸು. ಬ್ರಾಹ್ಮಣಜಾತಿಯವನು. **666**

ಗಾಂಧಾರಸ್ವರದಿಂದ ಕೂಡಿದ್ದಾನೆ. ವೀರರಸವನ್ನು ಆಶ್ರಯಿಸಿದ್ದಾನೆ. ಕುಶದ್ವೀಪದಲ್ಲಿ ವಾಸಿಸುತ್ತಾನೆ. ಎರಡು ಅಂಗಗಳುಳ್ಳವನು. ದ್ರುತ ಮತ್ತು ಲಘುಗಳೊಡನೆ ಸೇರಿದ್ದಾನೆ. ಅಂಗಾಕ್ಷರಕಾಲವುಳ್ಳವನು. ವೇದಾಂಗಗಳು ಆರು. ಹಾಗಾಗಿ ಅಂಗಾಕ್ಷರಕಾಲವೆಂದರೆ ಆರು ಅಕ್ಷರಗಳ ಕಾಲವೆಂದು ಅರ್ಥ. ಚತುರಶ್ರಗತಿಯುಳ್ಳವನು. **667-667A**

ಸ ರಿ | ಸ ರಿ ಗ ಮ |

**ಹೀಗೆ ಮೂರನೆಯ ರೂಪಕತಾಳಾಲಂಕಾರದಲ್ಲಿ ಆರು ಅಕ್ಷರಗಳ ಕಾಲ || 3 ||**

**(ರಕ್ತಕೆಂಪು ಬಣ್ಣ)**

174A/2

## ಝಂಪತಾಳಸ್ವರೂಪಾದಿಗಳು

(ಸಂಗೀತಸಂಗ್ರಹದಲ್ಲಿ)

ಝಂಪತಾಳದೇವನು ಬುಧವಾರದಂದು, ಪೂರ್ವಫಲ್ಗುನೀ ನಕ್ಷತ್ರದಲ್ಲಿ, ಸಿಂಹರಾಶಿಯಲ್ಲಿ, ಮನುಷ್ಯಗಣದಲ್ಲಿ, ಮೂಷಿಕಯೋನಿಯಲ್ಲಿ (ಇಲಿಯ ಯೋನಿಯಲ್ಲಿ) ಹುಟ್ಟಿದನು. 668

ಇವನಿಗೆ ನೀಲವರ್ಣದ ದೇಹ. ಕಮಲದಂತೆ ಸುಂದರ ವಿಶಾಲಕಣ್ಣುಗಳು. ಚಿತ್ರವಿಚಿತ್ರ ಬಣ್ಣಗಳ ಬಟ್ಟೆಗಳನ್ನು ತೊಟ್ಟಿದ್ದಾನೆ. ಹಸಿರು ಮಣಿಗಳ ಮಾಲೆಯನ್ನು ಹಾಕಿಕೊಂಡು ಶೋಭಿಸುತ್ತಿದ್ದಾನೆ. ಮಕಾರವು ಇವನ ಬೀಜಾಕ್ಷರ. 669

ವೈಷ್ಣವೀಶಕ್ತಿಯಿಂದ ಕೂಡಿದ್ದಾನೆ. ಜಮದಗ್ನಿ ಋಷಿಯೊಡನೆ ಇದ್ದಾನೆ. ಬ್ರಹ್ಮಾದಿಗಳು ಇವನ ದೇವತೆಗಳು. ಬೃಹತೀ ಛಂದಸ್ಸಿನಿಂದ ಕೂಡಿದ್ದಾನೆ. 670

ವೈಶ್ಯಜಾತಿಯವನು. ಮಧ್ಯಮಸ್ವರದಲ್ಲಿ ಹುಟ್ಟಿದವನು. ಅದ್ಭುತರಸದೊಡನೆ ಕೂಡಿದ್ದಾನೆ. ಶಾಲ್ಮಲೀ ದ್ವೀಪದಲ್ಲಿ ವಾಸಿಸುತ್ತಾನೆ. ಮೂರು ಅಂಗಗಳಿಂದ ಕೂಡಿ ಮಿಶ್ರ ಲಘು, ದ್ರುತ, ವಿರಾಮಗಳಿಂದ ಕೂಡಿದ್ದಾನೆ. 671

ಆಶಾಕ್ಷರಕಾಲವುಳ್ಳವನು. ಆಶಾ ಎಂದರೆ ದಿಕ್ಕು. ಹತ್ತು ದಿಕ್ಕುಗಳು ಇರುವುದರಿಂದ ಆಶಾಕ್ಷರಕಾಲವೆಂದರೆ ಹತ್ತು ಅಕ್ಷರಗಳ ಕಾಲದವನು ಎಂದು ಅರ್ಥ. ಮಿಶ್ರಗತಿಯುಳ್ಳವನೆಂದು ಸ್ಮೃತನಾಗಿದ್ದಾನೆ. 672

ಸ ರಿ ಗ ಸ ರಿ ಸ ರಿ | ಗ | ಮಾ |

ಹೀಗೆ ನಾಲ್ಕನೆಯ ಝಂಪತಾಳಾಲಂಕಾರದಲ್ಲಿ ಹತ್ತು ಅಕ್ಷರಗಳ ಕಾಲ || 4 ||

(ನೀಲಿಯ ಬಣ್ಣ)

174B/1

## ತ್ರಿಪುಟತಾಳಸ್ವರೂಪಾದಿಗಳು

(ಸಂಗೀತಸಂಗ್ರಹದಲ್ಲಿ)

ತ್ರಿಪುಟತಾಳದೇವನು ಗುರುವಾರದಂದು, ರುದ್ರದೇವನ ನಕ್ಷತ್ರವಾದ ಆರಿದ್ರಾನಕ್ಷತ್ರದಲ್ಲಿ, ಮಿಥುನ-ರಾಶಿಯಲ್ಲಿ ಮನುಷ್ಯಗಣದಲ್ಲಿ, ಶ್ವಾನಯೋನಿಯಲ್ಲಿ (ನಾಯಿಯೋನಿಯಲ್ಲಿ) ಹುಟ್ಟಿದನು. 673

ಹಳದಿಬಣ್ಣದ ದೇಹದಿಂದ, ಕಂದುಬಣ್ಣದ ಕಣ್ಣುಗಳಿಂದ ಕೂಡಿರುವ ಇವನು ಸ್ವರ್ಣಮಯವಾದ ವಸ್ತ್ರಗಳನ್ನು ತೊಟ್ಟುಕೊಂಡಿದ್ದಾನೆ. ಪುಷ್ಯರಾಗಮಣಿಯ ಮಾಲೆಯಿಂದ ಕಂಗೊಳಿಸುತ್ತಿದ್ದಾನೆ. ಅಕಾರವೆಂಬ ಬೀಜಾಕ್ಷರವನ್ನು ಆಶ್ರಯಿಸಿದ್ದಾನೆ. 674

ವಾರಾಹಿಶಕ್ತಿಯಿಂದ ಕೂಡಿ, ಕಾಶ್ಯಪಋಷಿಯೊಡನಿದ್ದಾನೆ. ಶಿವ ಮೊದಲಾದವರು ಇವನ ದೇವತೆಗಳು. ಅನುಷ್ಟುಪ್ ಛಂದಸ್ಸಿನಿಂದ ಕೂಡಿದ್ದಾನೆ. ಕ್ಷತ್ರಿಯಜಾತಿಯಲ್ಲಿ ಹುಟ್ಟಿದವನು. 675

ಪಂಚಮಸ್ವರದಿಂದ ಕೂಡಿದ್ದಾನೆ. ಹಾಸ್ಯರಸಯುಕ್ತನಾಗಿದ್ದಾನೆ. ಕ್ರೌಂಚಪರ್ವತದ ಜೌಗು-ಪ್ರದೇಶದಲ್ಲಿ ಹುಟ್ಟಿದವನು. ಮೂರು ಅಂಗಗಳಿಂದ ಕೂಡಿದ್ದಾನೆ. ತ್ರ್ಯಶ್ರಜಾತಿ. ಎರಡು ಲಘು ಮತ್ತು ದ್ರುತದಿಂದ ಕೂಡಿರುವವನು. ಏಳು ಅಕ್ಷರಗಳ ಕಾಲಗತಿಯುಳ್ಳವನು ಮತ್ತು ತ್ರ್ಯಶ್ರಗತಿ-ಯಿಂದಿರುವವನು. 676-676A

ಸ ರಿ ಗ | ಸ ರಿ | ಗ ಮ ||

ಹೀಗೆ ಐದನೆಯ ತ್ರಿಪುಟತಾಳಾಲಂಕಾರದಲ್ಲಿ ಏಳು ಅಕ್ಷರಗಳ ಕಾಲ || 5 ||

(ಹಳದಿಯ ಬಣ್ಣ)

175A/1 ಅಟ್ಟತಾಲಸ್ವರೂಪಾದಿಗಳು

(ಸಂಗೀತಸಂಗ್ರಹದಲ್ಲಿ)

ಅಟ್ಟತಾಲದೇವನು ಶುಕ್ರವಾರದಂದು ಹುಟ್ಟಿದನು. ಇವನು ಹುಟ್ಟಿದ ನಕ್ಷತ್ರ ಚಿತ್ರಾ. ಜನ್ಮರಾಶಿ ಕನ್ಯಾ. ರಾಕ್ಷಸಗಣ. ಹುಲಿಯ ಯೋನಿಯಲ್ಲಿ ಹುಟ್ಟಿದವನು. 677

ಇವನ ದೇಹವು ಚಿನ್ನದಂತೆ ಹೊಂಬಣ್ಣವಾಗಿದೆ. ಕಣ್ಣುಗಳು ಕಪ್ಪಾಗಿವೆ. ಕೆಂಪುಬಟ್ಟೆಗಳನ್ನು ಹಾಕಿಕೊಂಡಿದ್ದಾನೆ. ಚಿನ್ನದ ಹಾರದಿಂದ ಅಲಂಕೃತನಾಗಿದ್ದಾನೆ. ಇವನ ಬೀಜಾಕ್ಷರ ಆಕಾರ. 678

ಮಾಹೇಂದ್ರೀಶಕ್ತಿಯಿಂದ ಕೂಡಿದ್ದಾನೆ. ಅತ್ರಿಋಷಿಯ ಜೊತೆಯಿದ್ದಾನೆ. ಷಣ್ಮುಖನು ಇವನ ದೇವತೆ. ಉಕ್ತಾ ಛಂದಸ್ಸು ಇವನದು. ಶೂದ್ರಜಾತಿ. ಧೈವತಸ್ವರದಿಂದ ಕೂಡಿದ್ದಾನೆ. 679

ಭಯಾನಕರಸವನ್ನು ಆಶ್ರಯಿಸಿದ್ದಾನೆ. ಅರ್ಕದ್ವೀಪದಲ್ಲಿ ಹುಟ್ಟಿದವನು. ನಾಲ್ಕು ಅಂಗಗಳಿಂದ ಕೂಡಿದ್ದಾನೆ. ಖಂಡ ಎರಡು ಲಘು ಎರಡು ದ್ರುತಗಳಿಂದ ಕೂಡಿರುವವನು. ಹದಿನಾಲ್ಕು ಅಕ್ಷರಗಳ ಕಾಲಗಳುಳ್ಳವನು. ಖಂಡಗತಿಯಿಂದಿದ್ದಾನೆ ಎಂದು ಸ್ಮೃತನಾಗಿದ್ದಾನೆ. 680-680A

ಸ ರಿ ಗಾ | ಸಾ ರಿ ಗಾ | ಮಾ ಮಾ |

ಹೀಗೆ ಆರನೆಯ ಅಟ್ಟತಾಲಾಲಂಕಾರದಲ್ಲಿ ಹದಿನಾಲ್ಕು ಅಕ್ಷರಗಳ ಕಾಲ || 6 ||

(ಚಿನ್ನದ ಬಣ್ಣ)

175A/2

## ಏಕತಾಲಸ್ವರೂಪಾದಿಗಳು

(ಸಂಗೀತಸಂಗ್ರಹದಲ್ಲಿ)

ಏಕತಾಲದೇವನು ಶನಿವಾರದಂದು, ಸ್ವಾತೀನಕ್ಷತ್ರದಲ್ಲಿ ಹುಟ್ಟಿದನು. ಇವನು ಹುಟ್ಟಿದ ರಾಶಿ ತುಲಾ. ದೇವಗಣದಲ್ಲಿ, ಎಮ್ಮೆಯ ಯೋನಿಯಲ್ಲಿ ಜನಿಸಿದವನು. **681**

ಧೂಮ್ರವರ್ಣದ ದೇಹವುಳ್ಳವನು (ಹೊಗೆಯಂತೆ ಕಪ್ಪು ಬಣ್ಣದ ದೇಹ). ನೀಲಿಯ ಕಣ್ಣುಗಳಿವೆ. ಬಣ್ಣದ ಬಣ್ಣದ ಬಟ್ಟೆಗಳನ್ನು ತೊಟ್ಟಿದ್ದಾನೆ. ಇಂದ್ರನೀಲ ಮತ್ತು ಮಾಣಿಕ್ಯ ಮಣಿಗಳ ಸರವನ್ನು ಹಾಕಿಕೊಂಡು ಮೆರೆಯುತ್ತಿದ್ದಾನೆ. ಯಕಾರವೆಂಬ ಆ ಬೀಜಾಕ್ಷರವನ್ನು ಆಶ್ರಯಿಸಿದ್ದಾನೆ. **682**

ಚಂಡೀಶಕ್ತಿಯಿಂದ ಕೂಡಿಕೊಂಡು, ವಸಿಷ್ಠಋಷಿಯೊಡನೆ ಇದ್ದಾನೆ. ವಾಯುವು ಇವನ ಅಧಿದೇವತೆ. ಗಾಯತ್ರೀ ಛಂದಸ್ಸಿನಿಂದ ಕೂಡಿರುವನು. **683**

ಬ್ರಾಹ್ಮಣಜಾತಿಯವನು. ನಿಷಾದಸ್ವರದೊಡನೆ ಇರುವನು. ಬೀಭತ್ಸರಸದಿಂದ ಕೂಡಿದ್ದಾನೆ. ಪುಷ್ಕರದ್ವೀಪದಲ್ಲಿ ವಾಸ ಮಾಡುತ್ತಾನೆ. **684**

ಏಕಾಂಗದಿಂದ ಕೂಡಿದ್ದಾನೆ. ಒಂದೇ ಒಂದು ಲಘುವಿನೊಡನೆ ಇದ್ದಾನೆ. ನಾಲ್ಕು ಅಕ್ಷರಗಳ ಕಾಲವುಳ್ಳವನು. ಚತುರಶ್ರಗತಿಯುಳ್ಳವನೆಂದು ಸ್ಮೃತನಾಗಿದ್ದಾನೆ. **685**

ಸ ರಿ ಗ ಮ |

ಹೀಗೆ ಏಳನೆಯ ಏಕತಾಲಾಲಂಕಾರದಲ್ಲಿ ಚತುರಶ್ರಕಾಲ || 7 ||

(ಧೂರ್ಮವರ್ಣ - ಹೊಗೆಯಂತಹ ಬಣ್ಣ)

175B

## ತಾಳಗಳ ಮೂರು ಕಾಲಗಳು

(ಸಂಗೀತರತ್ನಾಕರದಲ್ಲಿ)

ಮೊದಲನೆಯದು ವಿಳಂಬವೆಂಬ ಹೆಸರಿನ ಕಾಲ, ಎರಡನೆಯದು ಮಧ್ಯಮವೆಂಬ ಹೆಸರಿನ ಕಾಲ, ಮೂರನೆಯದು ದ್ರುತವೆಂಬ ಹೆಸರಿನ ಕಾಲ, ಹೀಗೆ ತಾಳಗಳ ಮೂರು ಕಾಲಗಳು ಸಂಗೀತಶಾಸ್ತ್ರದಲ್ಲಿ ಸ್ಮೃತವಾಗಿವೆ. **686**

## ತಾಳಗಳ ರಾಗಾಲಂಕಾರಭೇದಗಳು

(ಭರತಶಾಸ್ತ್ರದಲ್ಲಿ)

1. ತಾಳಮಂದಪ್ರಸನ್ನ		2. ಮಂದ್ರತಾಳಪ್ರಸನ್ನ
3. ಆವರ್ತಕ		4. ಸಂವಿಧಾನ

5. ವಿಧೃತ 687

6. ವ್ಯಪಲೋಲುಕ 7. ಢಿಲ್ಲಾಸಿತ

ಎಂಬುದಾಗಿ ಇವು ಏಳು ವಿಧವಾದ ರಾಗಾಲಂಕಾರಗಳ ಹೆಸರುಗಳು. 688

## ಮೂರ್ಛನಾಭೇದಗಳ ಹೆಸರುಗಳು

### (ಶಿವತತ್ತ್ವರತ್ನಾಕರದಲ್ಲಿ)

### I. ಷಡ್ಜಗ್ರಾಮದ ಏಳು ಮೂರ್ಛನೆಗಳು

1. ಮೊದಲನೆಯದು ಮಂದ್ರ ಎಂಬ ಹೆಸರಿನ ಮೂರ್ಛನಾ
2. ಎರಡನೆಯದು ರಂಜನೀ ಎಂಬ ಹೆಸರಿನ ಮೂರ್ಛನಾ
3. ಮೂರನೆಯದು ಉತ್ತರಾಯತ ಎಂಬ ಹೆಸರಿನ ಮೂರ್ಛನಾ
4. ನಾಲ್ಕನೆಯದು ಶುದ್ಧಷಡ್ಜಾ ಎಂಬ ಹೆಸರಿನ ಮೂರ್ಛನಾ 689
5. ಐದನೆಯದು ಮತ್ಸರೀ ಎಂಬ ಹೆಸರಿನ ಮೂರ್ಛನಾ
6. ಆರನೆಯದು ಅಶ್ವಕ್ರಾಂತಾ ಎಂಬ ಹೆಸರಿನ ಮೂರ್ಛನಾ
7. ಏಳನೆಯದು ಸಮುದ್ಗತಾ ಎಂಬ ಹೆಸರಿನ ಮೂರ್ಛನಾ

ಈ ಮೇಲೆ ಹೇಳಿದ ಏಳು ಷಡ್ಜಗ್ರಾಮದ ಮೂರ್ಛನೆಗಳೆಂದು ಹೇಳಲ್ಪಟ್ಟಿವೆ. 690

### II. ಮಧ್ಯಮಗ್ರಾಮದ ಏಳು ಮೂರ್ಛನೆಗಳು

1. ಮೊದಲನೆಯದು ಸೌವೀರೀ ಮೂರ್ಛನಾ
2. ಎರಡನೆಯದು ಹರಿಣೀ ಮೂರ್ಛನಾ
3. ಮೂರನೆಯದು ಅಶ್ವಾ ಮೂರ್ಛನಾ
4. ನಾಲ್ಕನೆಯದು ಕಲೋಪನತಾ ಮೂರ್ಛನಾ
5. ಐದನೆಯದು ಶುದ್ಧಮಧ್ಯಮಾರ್ಗೀ ಮೂರ್ಛನಾ
6. ಆರನೆಯದು ಪಾರವೀ (ಪೌರವೀ) ಮೂರ್ಛನಾ 691
7. ಏಳನೆಯದು ಹೃಷ್ಯಕಾ ಮೂರ್ಛನಾ

ಈ ಮೇಲೆ ಹೇಳಿದ ಏಳು ಮಧ್ಯಮಗ್ರಾಮದ ಮೂರ್ಛನಾಭೇದಗಳೆಂದು ಹೇಳಲ್ಪಟ್ಟಿವೆ. 692A

III.

## ಗಾಂಧಾರಗ್ರಾಮದ ಏಳು ಮೂರ್ಛನೆಗಳು

| | | | |
|---|---|---|---|
| 1. | ಮೊದಲನೆಯದು | ನಂದಾ ಮೂರ್ಛನಾ | |
| 2. | ಎರಡನೆಯದು | ವಿಶಾಲಾ ಮೂರ್ಛನಾ | |
| 3. | ಮೂರನೆಯದು | ಸುಮುಖೀ ಮೂರ್ಛನಾ | |
| 4. | ನಾಲ್ಕನೆಯದು | ಚಿತ್ರಕಾ ಎಂಬ ಹೆಸರಿನ ಮೂರ್ಛನಾ | 692B |
| 5. | ಐದನೆಯದು | ಚಿತ್ರವತೀ ಮೂರ್ಛನಾ | |
| 6. | ಆರನೆಯದು | ಸುಖಾ ಮೂರ್ಛನಾ | |
| 7. | ಏಳನೆಯದು | ಆಲಾಪಾ ಮೂರ್ಛನಾ | |

ಹೀಗೆ ಈ ಮೇಲೆ ಹೇಳಿದ ಏಳು ಗಾಂಧಾರಗ್ರಾಮದ ಮೂರ್ಛನಾಭೇದಗಳೆಂದು ಉಕ್ತವಾಗಿವೆ.

ಈ ರೀತಿ ಷಡ್ಜಗ್ರಾಮದ ಏಳು ಮೂರ್ಛನೆಗಳು, ಮಧ್ಯಮ ಗ್ರಾಮದ ಏಳು ಮೂರ್ಛನೆಗಳು ಮತ್ತು ಗಾಂಧಾರಗ್ರಾಮದ ಏಳು ಮೂರ್ಛನೆಗಳು ಇವು ಮೂರೂ ಒಟ್ಟು ಸೇರಿ ಇಪ್ಪತ್ತೊಂದು ಬಗೆಯ ಮೂರ್ಛನೆಗಳಾಗುತ್ತವೆ. 693-693A

## ಸಪ್ತಸ್ವರಗಳ ಆರಂಭದ ಶ್ರುತಿಭೇದಗಳು

### (ವಿವೇಕಚಿಂತಾಮಣಿಯ ಅನುಸಾರ)

| | | | | |
|---|---|---|---|---|
| 1. | ನಿಷ್ಕಲಾ | 2. | ಗಹ್ವರೀ | |
| 3. | ಸರ್ವವ್ಯಾಪಿನೀ | 4. | ಸಕಲಾ | |
| 5. | ತಸ್ತುವಾಂಶ | 6. | ಗೂಢಾ | |
| 7. | ಸಂಪೂರ್ಣಾ | 8. | ಮಧುರಾ | 694 |
| 9. | ಏಕಾಕ್ಷರೀ | 10. | ಭೃಂಗಜಾತಿ | |
| 11. | ಸ್ವರಾಂಶಾ | 12. | ರೇಣುಕೀ | |
| 13. | ಪ್ರಸನ್ನಾ | 14. | ವರ್ತಕೀ | |
| 15. | ಪಾಂಶ | 16. | ಲಲಿತಾ | 695 |
| 17. | ಭಾಷಾಂಗೀ | 18. | ಅಲಂಕಾರಿಣೀ | |
| 19. | ಪೂರ್ಣಿಕಾ | 20. | ಪರೇಂಗಿತಾ | |
| 21. | ಆವಲಿ | 22. | ರಂಜಕೀ | |

ಈ ಇಪ್ಪತ್ತೆರಡು ಸಂಗೀತಶ್ರುತಿಭೇದಗಳೆಂದು ಉಕ್ತವಾಗಿವೆ. 696-697A

### ತಂತಿಯ ವಾದ್ಯಭೇದಗಳು

### (ವಿವೇಕಚಿಂತಾಮಣಿಯ ಅನುಸಾರ)

1. ಪರಿವಾದಿನಿಕಾ  2. ರಾವಣಹಸ್ತಕ **697B**

3. ತುಂಬುರವೀಣಾ  4. ಸಾರಂಗೀ

5. ಕಾಶ್ಯಪೀ  6. ಕೂರ್ಮಕೀ

7. ಚಿತ್ರಿಕಾ  8. ರುದ್ರವೀಣಾ

9. ಕಿನ್ನರೀ **698**

10. ಆಕಾಶವೀಣಾ  11. ಕುಬ್ಜಕೀ

12. ಐಲಕುಲಾಷ್ಟಾ  13. ವಿಪಂಚಿಕಾ

14. ಅಂತರ್ವೀಣಾ  15. ಬ್ರಹ್ಮವೀಣಾ

16. ಅಲಾವನೀ **699**

17. ಚಿತ್ರಘೋಷಾವಲೀ  18. ಚಕನವಲ್ಲಕೀ

19. ತಿಸತೀ  20. ಚರಬಾಬು

21. ಸ್ವರವೀಣಾ **700**

22. ಆನಾದವಿಧಾ

ಹೀಗೆ ಭೂತಲದಲ್ಲಿ ಇವು ಇಪ್ಪತ್ತೆರಡು ಸಂಖ್ಯೆಯ ತಂತಿವಾದ್ಯದ ಪ್ರಭೇದಗಳು ಪ್ರಸಿದ್ಧವಾಗಿವೆ. **701**

### ವೀಣೆಯ ಏಳು ತಂತಿಗಳ ಹೆಸರುಗಳು

### (ಸಂಗೀತರತ್ನಾಕರದಲ್ಲಿ)

1. ಸಾರಣೀ  2. ಪಂಚಮೀ

2. ಮಂದ್ರ  4. ಅನುಮಂದ್ರ

5. ಅನುಸಾರಿಣೀ  6. ಪಾರ್ಶ್ವಸಾರಣುಕಾ

7. ಶೀವೀ

ಎಂಬುದಾಗಿ ಇವು ಏಳು ವೀಣೆಯ ತಂತಿಯ ಹೆಸರುಗಳು. **702**

## ತುಂಬುರನ ವೀಣೆಯ ತಂತಿಗಳ ಹೆಸರುಗಳು

(ಸಂಗೀತರತ್ನಾಕರದಲ್ಲಿ)

| | | | |
|---|---|---|---|
| 1. | ಮಂದ್ರಾ | 2. | ಅನುಮಂದ್ರಾ |
| 3. | ತಾರಕ | 4. | ಅನುತಾರಕ |
| 5. | ಪಂಚಮ | 6. | ಸಾರಣೀ |
| 7. | ಅನುಸಾರಣೀ | | |

ಎಂಬುದಾಗಿ ಇವು ಏಳು ತುಂಬುರನ ವೀಣಾವಾದ್ಯದ ಏಳು ತಂತಿಗಳ ಹೆಸರುಗಳು. **703-703A**

## ಆಯಾಯಾ (ಸಂಗೀತಗಾರರ) ಕೈಗಳಲ್ಲಿರುವ ವೀಣೆಗಳ ವಿಶೇಷವಾದ ಹೆಸರುಗಳು

(ಸಂಗೀತಸಂಗ್ರಹದಲ್ಲಿ)

| | | |
|---|---|---|
| 1. | ವಿಶ್ವಾವಸುವಿನ ಕೈನಲ್ಲಿರುವ ವೀಣೆಯ ಹೆಸರು | ಬೃಹತೀ |
| 2. | ತುಂಬುರನ ಕೈನಲ್ಲಿರುವ ವೀಣೆಯ ಹೆಸರು | ಕಲಾವತೀ |
| 3. | ನಾರದನ ಕೈನಲ್ಲಿರುವ ವೀಣೆಯ ಹೆಸರು | ಮಹತೀ |
| 4. | ಸರಸ್ವತಿಯ ಕೈನಲ್ಲಿರುವ ವೀಣೆಯ ಹೆಸರು | ಕಚ್ಛಪೀ **704** |

**176A** 
## ಗಾನದ ಮೂರು ಭೇದಗಳು

(ಸಂಗೀತರತ್ನಾಕರದಲ್ಲಿ)

| | | |
|---|---|---|
| 1. | ಮೊದಲನೆಯದು | ಘನಗಾನ |
| 2. | ಎರಡನೆಯದು | ನಯಗಾಯನ |
| 3. | ಮೂರನೆಯದು | ದೇಶೀಯಗಾನ |

ಈ ಮೂರು ಗಾನದ ಮೂರು ಭೇದಗಳೆಂದು ಸ್ಮೃತವಾಗಿವೆ. **705**

## ಮೂರು ವಿಧವಾದ ರಾಗರೀತಿಗಳು

(ಸಂಗೀತರತ್ನಾಕರದಲ್ಲಿ)

| | | |
|---|---|---|
| 1. | ಮೊದಲನೆಯದು | ಔಡವವೆಂಬ ಹೆಸರಿನ ರಾಗ ರೀತಿ |
| 2. | ಎರಡನೆಯದು | ಷಾಡವವೆಂಬ ಹೆಸರಿನ ರಾಗ ರೀತಿ |

3. ಮೂರನೆಯದು ಸಂಪೂರ್ಣಾ ಎಂಬ ಹೆಸರಿನ ರಾಗ ರೀತಿ

ಹೀಗೆ ಇವು ಮೂರು ರಾಗರೀತಿಗಳು ಪ್ರಸಿದ್ಧವಾಗಿವೆ. 706

## ಸಂಗೀತದ ಅಲಂಕಾರಸ್ಥಾಯಿಗಳ ಹೆಸರುಗಳು

(ಶಿವತತ್ತ್ವರತ್ನಾಕರದಲ್ಲಿ)

1. ಪ್ರಸನ್ನಾದ್ಯಾ ಎಂಬ ಹೆಸರಿನ ಅಲಂಕಾರಸ್ಥಾಯಿ
2. ಪ್ರಸನ್ನಾಂತ್ಯಾ ಎಂಬ ಹೆಸರಿನ ಅಲಂಕಾರಸ್ಥಾಯಿ
3. ಪ್ರಸನ್ನಾದ್ಯಂತ ಎಂಬ ಹೆಸರಿನ ಅಲಂಕಾರಸ್ಥಾಯಿ
4. ಕ್ರಮರೇಚಿತವೆಂಬ ಹೆಸರಿನ ಅಲಂಕಾರಸ್ಥಾಯಿ 707
5. ಪ್ರಸನ್ನಮಧ್ಯವೆಂಬ ಹೆಸರಿನ ಅಲಂಕಾರಸ್ಥಾಯಿ
6. ಪ್ರಸ್ತಾರವೆಂಬ ಹೆಸರಿನ ಆರನೆಯ ಅಲಂಕಾರಸ್ಥಾಯಿ
7. ಪ್ರಸಾದವೆಂಬ ಹೆಸರಿನ ಏಳನೆಯ ಅಲಂಕಾರಸ್ಥಾಯಿ 708

ಈ ರೀತಿಯಿಂದ ಇವು ಏಳು ಸಂಗೀತದ ಅಲಂಕಾರಸ್ಥಾಯಿಗಳೆಂದು ಸಂಮತವಾಗಿವೆ. 708A

## ಸಂಗೀತದ ಅಂಗಗಳು

(ಶಿವತತ್ತ್ವರತ್ನಾಕರದಲ್ಲಿ)

| | | | | | |
|---|---|---|---|---|---|
| 1. | ನಾದ | 2. | ಶ್ರುತಿ | 3. | ಸ್ವರ |
| 4. | ಗ್ರಾಮ | 5. | ಮೂರ್ಛನಾ | 6. | ಕ್ರಿಯಾಂಗಕ |
| 7. | ವರ್ಣಕ | 8. | ಅಂತರ್ಭಾಷಿಕಾ | 9. | ಭಾಷಾಂಗ |
| 10. | ಗಮಕ | | | | 709 |
| 11. | ತಾನ | 12. | ಜಾತಿ | 13. | ರಾಗಾಂಗ |
| 14. | ಉಪಾಂಗ | 15. | ರಾಗ | 16. | ಭಾಷಾ |
| 17. | ವಿಭಾಷಾ | 18. | ಅಲಂಕಾರ | | |

ಎಂಬುದಾಗಿ ಇವು ಹದಿನೆಂಟು ಸಂಗೀತದ ಅಂಗಗಳು. ಗಾಯಕಶ್ರೇಷ್ಠರು, ಇವು ಹದಿನೆಂಟು ಸಂಗೀತದ ಅಂಗಪ್ರಭೇದಗಳೆಂದು ಹೇಳಿದ್ದಾನೆ. 710-711A

## ಗಾಯಕರ ವಿಶೇಷ ಹೆಸರುಗಳು

### (ಸಂಗೀತಸಂಗ್ರಹದಲ್ಲಿ)

1. ಯಕಲಗಾಯಕ 2. ಯಮಲಗಾಯಕ 3. ಬೃಂದಗಾಯಕ ಎಂಬುದಾಗಿ ಗಾಯಕರು ಮೂರು ವಿಧವಾಗಿದ್ದಾರೆ ಎಂದು ಹೇಳಲಾಗಿದೆ. **711B**

### ಯಕಲಗಾಯಕನ ಲಕ್ಷಣ

ಒಬ್ಬನೇ ಒಬ್ಬನು ಸಂಗೀತವನ್ನು ಹಾಡಿದರೆ ಅವನು ಯಕಲಗಾಯಕನು ಎಂದು ಸಂಗೀತವನ್ನು ಬಲ್ಲವರು ಹೇಳುತ್ತಾರೆ. **712A**

### ಯಮಲಗಾಯಕನ ಲಕ್ಷಣ

ಒಬ್ಬ ಸಂಗೀತಗಾರನು ಮತ್ತೊಬ್ಬ ಸಂಗೀತಾಗಾರನೊಡನೆ ಸೇರಿ ಹಾಡಿದರೆ ಅವನು ಯಮಲಗಾಯಕನೆಂದು ಉಕ್ತನಾಗಿದ್ದಾನೆ. **712B**

### ಬೃಂದಗಾಯಕನ ಲಕ್ಷಣ

ಯಾವ ಸಂಗೀತಗಾರನು ಅನೇಕ ಜನರೊಡಗೂಡಿ ಹಾಡುತ್ತಾನೋ ಅವನು ಬೃಂದಗಾಯಕನು. **713A**

### ಉತ್ತಮಗಾಯಕನ ಲಕ್ಷಣಗಳು

### (ಶಿವತತ್ತ್ವರತ್ನಾಕರದಲ್ಲಿ)

ಸಂಗೀತವನ್ನು ಹಾಡುವ ಗಾಯಕನು ಶಬ್ದವಿದ್ಯೆಯಲ್ಲಿ ಅಂದರೆ ವ್ಯಾಕರಣಶಾಸ್ತ್ರದಲ್ಲಿ ಪ್ರವೀಣನಾಗಿರಬೇಕು. ಹಾಗೆಯೇ ಅಲಂಕಾರಪದ್ಧತಿಯಲ್ಲೂ ಕುಶಲನಾಗಿರಬೇಕು. **713B**

ಅದೇ ರೀತಿ ಅನೇಕ ಶಾಸ್ತ್ರಗಳಲ್ಲಿ ನಿಷ್ಣಾತನಾಗಿರಬೇಕು. ಲೋಕವ್ಯವಹಾರಗಳನ್ನು ಚೆನ್ನಾಗಿ ಬಲ್ಲವನಾಗಿರಬೇಕು. ಸಂಗೀತಕ್ಕೆ ಸಂಬಂಧಿಸಿದ ನಾಟ್ಯಾದಿಶಾಸ್ತ್ರಗಳಲ್ಲಿ ಚತುರನಾಗಿರಬೇಕು. ಸ್ವರಗಳ ಲಕ್ಷಣಗಳನ್ನು ಮತ್ತು ಲಕ್ಷ್ಯಗಳನ್ನು (ಉದಾಹರಣೆಗಳನ್ನು) ತಿಳಿದವನಾಗಿರಬೇಕು. **714**

ರಾಗ, ರಾಗಾಂಗ, ಭಾಷೆ, ಕ್ರಿಯೆಗಳಲ್ಲಿ ತುಂಬಾ ಜ್ಞಾನವುಳ್ಳವನಾಗಿರಬೇಕು. ಸಕಲ ಪ್ರಬಂಧಗಳನ್ನು ರಚಿಸುವನಾಗಿರಬೇಕು. ಸಂಗೀತರಚನೆಯ ಸಂಗೀತಭಾಗಗಳೆನಿಸಿದ ಧಾತುಗಳಲ್ಲಿ, ಕಾಲಪ್ರಮಾಣಗಳಾದ ಮಾತ್ರೆಗಳಲ್ಲಿ ವಿಚಕ್ಷಣನಾಗಿರಬೇಕು. **715**

ಸಕಲರೀತಿಗಳನ್ನು ರಚಿಸುವ ಶಕ್ತಿಯುಳ್ಳವನಾಗಿರಬೇಕು. ದೇಶಭಾಷೆಗಳಲ್ಲಿ ತುಂಬಾ ತಿಳಿವಳಿಕೆಯುಳ್ಳವನಾಗಿರಬೇಕು. ತಾಳಗಳು ಮತ್ತು ಅವುಗಳ ಅಳತೆಯ ಪ್ರಮಾಣಗಳು ಹಾಗೂ ಅವುಗಳನ್ನು ಹಾಕುವ ಕ್ರಿಯೆಗಳಲ್ಲಿ ದಕ್ಷನಾಗಿರಬೇಕು. ಹೆದರಿಕೆಯಿಲ್ಲದವನಾಗಿರಬೇಕು. ಪ್ರತಿಭಾಸಂಪನ್ನನಾಗಿರಬೇಕು. **716**

ಸ್ವರಪಾಠ ಪ್ರಯೋಗಗಳಲ್ಲಿ, ಪದಬಂಧನದಲ್ಲಿ ಪ್ರವೀಣನಾಗಿರಬೇಕು. ಇಂತಹ ಮೇಲೆ ಹೇಳಿದ ಗುಣಗಳಿಂದ ಕೂಡಿದ ವಾಗ್ಗೇಯಕಾರನು ಶ್ರೇಷ್ಠನೆನಿಸಿ ಉತ್ತಮೋತ್ತಮ ಗಾಯಕನೆಂದು ಕರೆಯಲ್ಪಡುತ್ತಾನೆ.
**717**

ಈ ಮೇಲಿನ ಗುಣಗಳಲ್ಲಿ ಕೆಲವು ಗುಣಗಳು ಕಡಿಮೆಯಾಗಿದ್ದರೂ, ಧಾತುಗಳಲ್ಲಿ ಮತ್ತು ಮಾತ್ರಾಕಾಲಗಳಲ್ಲಿ ವಿಚಕ್ಷಣನಾದವನು, ಸಂಗೀತಶಾಸ್ತ್ರವನ್ನು ಬಲ್ಲವರಿಂದ ಉತ್ತಮಗಾಯಕನೆಂದು ತಿಳಿಯಲ್ಪಡಬೇಕು.
**718**

ಅಭ್ಯಾಸವಿಲ್ಲದಿದ್ದರೂ, ಸ್ವಾಭಾವಿಕವಾಗಿಯೇ ಶರೀರದೊಡನೆ, ಹುಟ್ಟಿದ, ರಾಗಗಳಲ್ಲಿ ರಂಜನೆಯನ್ನು ಉಂಟುಮಾಡುವಂತಹ ಶಾರೀರಿಕ ಸಾಮರ್ಥ್ಯವನ್ನು ಶಾರೀರವೆಂದು ಬಲ್ಲವರು ಹೇಳುತ್ತಾರೆ. **719**

ಸಂಪಿಗೆ ಹೂವುಗಳಲ್ಲಿ ಇರುವ ಪರಿಮಳದಂತೆ, ದಾಳಿಂಬೆಯ ಹಣ್ಣುಗಳಲ್ಲಿರುವ ಹೊಳಪಿನಂತೆ, ಕಬ್ಬಿನ ಜಲ್ಲೆಯಲ್ಲಿರುವ ಸಿಹಿಯಂತೆ ಗಾಯಕನ ಶಾರೀರದಲ್ಲಿ ಶ್ರಾವ್ಯತೆಯು ಇರಬೇಕು (ಬೇರೆಯವರು ಕೇಳಲು ಯೋಗ್ಯವಾದ ಇಂಪಾದ ಹಾಡುವಿಕೆಗೆ ಶ್ರಾವ್ಯತೆ ಎಂದು ಹೆಸರು.) **720**

ಬೇರೆ ಜನ್ಮದಲ್ಲಿ ಮಾಡಿದ ಅಭ್ಯಾಸದಿಂದ, ಜ್ಞಾನಯೋಗದಿಂದ, ಶಿವನನ್ನು ಅರ್ಚಿಸಿದ ಕಾರಣದಿಂದ ಗಾಯಕರು ಇಂಪಾಗಿ ಹಾಡುವ ಶಾರೀರಿಕ ಸಾಮರ್ಥ್ಯವನ್ನು ಪಡೆಯುತ್ತಾರೆ. ಈ ಶಾರೀರವನ್ನು ಕೇವಲ ಅಭ್ಯಾಸದಿಂದ ಪಡೆಯಲು ಸಾಧ್ಯವಿಲ್ಲ. **721**

i) ಶಿಕ್ಷಕ ii) ಭಾವಕ iii) ರಂಜಕ iv) ರಸಿಕ v) ಕುಟಿಕಾರ ಎಂಬುದಾಗಿ ಗಾಯಕರು ಐದು ಬಗೆಯಾಗಿ ಉಕ್ತರಾಗಿದ್ದಾರೆ. **722**

### ಶಿಕ್ಷಕಗಾಯಕನ ಲಕ್ಷಣ

ವಾಗ್ಗೇಯಕಾರರು ರಚಿಸಿರುವ ಗೀತೆಗಳನ್ನು ಆರಿಸಿಕೊಂಡು ಹಾಡುವವನು, ಬೇರೆ ಬೇರೆ ಹೇಳಿದ್ದನ್ನು ಕೇಳಿ ಹಾಡುವವನು, ಬೇರೆ ಯಾರೂ ಹೇಳದಿದ್ದರೂ, ತಾನಾಗಿಯೇ ರಚಿಸಿಕೊಂಡೋ, ಊಹಿಸಿ-ಕೊಂಡೋ ಸವಿಸ್ತರವಾಗಿ ಸಾವಧಾನವಾಗಿ ಹಾಡುವವನು ಶಿಕ್ಷಾಕಾರಗಾಯಕ (ಶಿಕ್ಷಕಗಾಯಕ) ಎನಿಸಿಕೊಳ್ಳುತ್ತಾನೆ. **723**

(ಟಿಪ್ಪಣಿ : ಇಲ್ಲಿ ಪದಗಳ ಅರ್ಥವು ಅಸ್ಪಷ್ಟವಾಗಿದ್ದು, ಊಹಿಸಿ ಅರ್ಥವನ್ನು ಕೊಡಲಾಗಿದೆ.)

**176B** 
### ಭಾವಕಗಾಯಕನ ಲಕ್ಷಣ

ನೀರಸವಾದ ಗೀತೆಯನ್ನೂ ರಸಭರಿತವಾಗಿ ಹಾಡುವವನು, ಭಾವರಹಿತವಾದುದನ್ನು ಭಾವಪೂರ್ಣವಾಗಿ ಹಾಡುವವನು, ಚತುರತೆಯಿಂದ (ಜನರಿಗೆ) ರಂಜನೆಯನ್ನುಂಟುಮಾಡುತ್ತಾ ಹಾಡುವವನು ಭಾವಕ ಗಾಯಕ ಎಂದು ಕರೆಯಲ್ಪಡುತ್ತಾನೆ. **724**

## ರಂಜಕಗಾಯಕನ ಲಕ್ಷಣ

ಯಾವ ಗಾಯಕನು ಕೇಳುಗರ ಹೃದಯವನ್ನು ಅರಿತು, ಅವರ ಮನಸ್ಸಿಗೆ ಅನುಗುಣವಾಗಿ ಹಾಡುತ್ತಾ, ಕೇಳುಗರಿಗೆ ರಂಜನೆಯನ್ನು ಉಂಟುಮಾಡುತ್ತಾನೋ ಅವನು ರಂಜಕಗಾಯಕನೆಂದು ಸ್ಮೃತನಾಗಿದ್ದಾನೆ. 725

## ರಸಿಕಗಾಯಕನ ಲಕ್ಷಣ

ಯಾವ ಸಂಗೀತಗಾರನು, ತಾನು ಹಾಡುವಾಗ ತನ್ನ ಮಧುರವಾದ ಇಂಪಾದ ದನಿಯನ್ನು ಕೇಳಿ, ಇಡೀ ಶರೀರದಲ್ಲಿ ರೋಮಾಂಚನಗೊಂಡವನಾಗಿ, ಅತ್ಯಧಿಕ ಆನಂದವನ್ನು ಹೊಂದುತ್ತಾನೋ ಅವನು ರಸಿಕಗಾಯಕನೆಂದು ಸ್ಮೃತನಾಗಿದ್ದಾನೆ. 726

## ಕುಟಿಕಾರಗಾಯಕನ ಲಕ್ಷಣ

ಬೇರೆಯವರು ಹಾಡಿದ ಗೀತೆಯನ್ನು ತಾನೂ ಅನುಕರಿಸಿ, ಅವರ ಧ್ವನಿ, ಚೇಷ್ಟಾದಿಗಳನ್ನೇ ಅನುಕರಣೆ ಮಾಡುತ್ತಾ ದಕ್ಷನಾಗಿ, ಉತ್ತಮನಾಗಿ ಹಾಡುವ ಗಾಯಕನು ಕುಟಿಕಾರನೆಂದು ಕರೆಯಲ್ಪಡುತ್ತಾನೆ. 727

## ಸಕಂಠಗಾಯಕನ ಲಕ್ಷಣ

ಸ್ವರ, ವರ್ಣ, ತಾಳ ಈ ಮೂರನ್ನೂ ಹೊಂದಿಸಿಕೊಂಡು, ಮಂಗಳದನಿಯಿಂದ ಕೂಡಿ, ಇಂಪಾಗಿ ಹಾಡುವವನು ಸಕಂಠಗಾಯಕ ಎಂದು ಕರೆಯಲ್ಪಡುತ್ತಾನೆ. 728

## ಕ್ರಿಯಾಪರಗಾಯಕನ ಲಕ್ಷಣ

ಮಾರ್ಗ, ದೇಶೀಯ ತಾಳಗಳೊಂದಿಗೆ ಸಂಗೀತಶಾಸ್ತ್ರಕ್ಕೆ ಅನುಸಾರವಾಗಿ, ಯಾವ ದೋಷಗಳೂ ಇಲ್ಲದೆ, ಯಾವನು ಹಾಡುತ್ತಾನೋ ಅವನು ಕ್ರಿಯಾಪರಗಾಯಕನೆಂದು ಕರೆಯಲ್ಪಡುತ್ತಾನೆ. 729

## ಗಾಯಕನ ಧ್ವನಿಗುಣಗಳು

ಗಾಯಕನ ದನಿಯು ಕೊಳಲಿನ ಮತ್ತು ವೀಣೆಯ ದನಿಗೆ ಸಮಾನವಾಗಿದ್ದರೆ ಅದು ರಕ್ತ-ಧ್ವನಿಯೆನಿಸಿಕೊಳ್ಳುತ್ತದೆ. (ಅಂದರೆ ಪ್ರಿಯವಾದ ದನಿಯಾಗುತ್ತದೆ.) ಕೋಗಿಲೆಯ ದನಿಗೆ ಸಮಾನ-ವಾಗಿರುವ ದನಿಗೆ ಮಧುರಧ್ವನಿ ಎಂದು ಹೇಳುತ್ತಾರೆ. 730

ಎತ್ತರವಾದ ಸ್ಥಾನದಲ್ಲಿ ಹಾಡಿದಾಗಲೂ ಯಾವನ ಧ್ವನಿಯು ಕೇಳಲು ಇಂಪಾಗಿರುತ್ತದೋ ಅದು ಸ್ನಿಗ್ಧಧ್ವನಿ ಎನಿಸುತ್ತದೆ. ಯಾವನ ದನಿಯು ಜಾಳಾಗಿರದೆ, ಸಾಂದ್ರವಾಗಿ ಮಧುರವಾಗಿರುತ್ತದೋ ಅದು ಸ್ವರಧ್ವನಿಯಾಗುತ್ತದೆ. 731

ಸಂಗೀತಗಾರರ ಗುಂಪಿನಲ್ಲಿದ್ದು ಹಾಡುತ್ತಿದ್ದಾಗಲೂ ಯಾವನ ದನಿಯು ದೂರದಲ್ಲಿರುವವರಿಗೂ ಮಧುರವಾಗಿ ಕೇಳಿಸುತ್ತದೋ, ಅಂತಹ ಮಾಧುರ್ಯಗುಣದಿಂದ ಕೂಡಿದ, ಕೇಳಲು ಇಂಪಾದ ಶ್ರೇಷ್ಠವಾದ ದನಿಯು ಶ್ರಾವ್ಯಕದನಿ ಎನಿಸುತ್ತದೆ. 732

ಯಾವ ಗಾಯಕನ ಧ್ವನಿಯು ಸಕಲ ಲಕ್ಷಣಗಳಿಂದ ಕೂಡಿದ್ದು, ಶೋಭನ ದನಿ ಎನಿಸಿ, ಮೂರು ಸ್ಥಾನಗಳಲ್ಲೂ ಕೇಳಲು ಯೋಗ್ಯವಾಗಿರುತ್ತದೋ, ಅದು ಧ್ವನಿಗಳಲ್ಲೆಲ್ಲಾ ಉತ್ತಮವಾದ ಸ್ಥಾನಕಶೋಭಕಧ್ವನಿ ಎನಿಸುತ್ತದೆ. 733

## ಗಾಯಕನ ಮಹಾಗುಣಗಳು

ಶಾರೀರ, ಧ್ವನಿ, ಬುದ್ಧಿಶಕ್ತಿ, ಪ್ರೌಢಿಮೆ, ಗಮಕ ಕೌಶಲ, ತಾಳಜ್ಞಾನ, ಹೆದರಿಕೆಯಿಲ್ಲದಿರುವುದು, ಇವು ಏಳು ಗಾಯಕನ ಮಹಾಗುಣಗಳು. 734

## ಅಧಮಗಾಯಕನ ಹೆಸರುಗಳು

### (ಸಂಗೀತಸಂಗ್ರಹದಲ್ಲಿ)

1. ಸಂದಷ್ಟದೋಷಿ 2. ಉದ್ಘುಷ್ಟದೋಷಿ
3. ಸೀತ್ಕಾರದೋಷಿ 4. ಅನುನಾಸಿಕದೋಷಿ
5. ಕರಹೀನತ್ವದೋಷಿ 735

6. ವಿತಾಲದೋಷಿ 7. ಕಪಿಲದೋಷಿ
8. ಕಂಪಿತದೋಷಿ 9. ಕರಾಲದೋಷಿ
10. ಕಾಕಸ್ವರದೋಷಿ 736

11. ವಿನಿಮೀಲಿತದೋಷಿ 12. ಸ್ಥಾನಭ್ರಂಶದೋಷಿ
13. ಅವ್ಯವಸ್ಥಿತದೋಷಿ 14. ಏಕೋನಾಭಿಧದೋಷಿ 737

15. ಶಂಕಿತಾಭಿಧದೋಷಿ 16. ಸಾಂಬಕದೋಷಿ
17. ಪ್ರಸಾರದೋಷಿ 18. ಅವ್ಯಕ್ತದೋಷಿ
19. ಮಿಶ್ರಕದೋಷಿ 738

20. ಅಪಸ್ವರದೋಷಿ 21. ಭೀತಿದೋಷಿ
22. ಬಕಿದೋಷಿ 23. ವಿರಸದೋಷಿ
24. ಅನ್ಯಕದೋಷಿ 25. ವಕ್ರಿದೋಷಿ

ಎಂಬುದಾಗಿ ಇಪ್ಪತ್ತೈದು ಬಗೆಯ ಅಧಮಗಾಯಕರು (ಉಕ್ತರಾಗಿದ್ದಾರೆ). 739-739A

## ಈ ಅಧಮಗಾಯಕರ ಲಕ್ಷಣಗಳು

### (ಸಂಗೀತಸಂಗ್ರಹದಲ್ಲಿ)

### ಸಂದಷ್ಟದೋಷಿಗಾಯಕ

ಎಲ್ಲ ಹಲ್ಲುಗಳನ್ನು ಕಚ್ಚಿಕೊಂಡು, ಪದಜಾಲವನ್ನು ನುಂಗಿಬಿಡುವನೋ ಎಂಬಂತೆ, ಯಾವನು ಹಾಡುತ್ತಾನೋ ಅವನನ್ನು ಸಂದಷ್ಟಗಾಯಕನೆಂದು ತಿಳಿಯಬೇಕು. ಅವನು ಸಂಗೀತವನ್ನು ಹಾಳು ಮಾಡುವವನು. ‖ ೧ ‖ 740

### ಉದ್ಘುಷ್ಟದೋಷಿಗಾಯಕ

ವಿರಹ ಮೊದಲಾದವುಗಳಲ್ಲಿ ವೀರರಸವನ್ನು ಅಭಿವ್ಯಕ್ತಗೊಳಿಸುತ್ತಾನೆ, ಹುಚ್ಚನಾಗಿ, ಭಾವುಕತೆಯಿಂದ ಅತಿಭಯಂಕರವಾಗಿ ಗಟ್ಟಿಯಾಗಿ ಕಿರುಚಿ ಯಾವನು ಹಾಡುತ್ತಾನೋ ಅವನು ಉದ್ಘುಷ್ಟಗಾಯಕನೆಂದು ಹೇಳಲ್ಪಡುತ್ತಾನೆ. ‖ ೨ ‖ 741

### ಸೀತ್ಕಾರಿದೋಷಿಗಾಯಕ

ಯಾವ ಗಾಯಕನು ಬಾರಿಬಾರಿಗೂ ಏದುಸಿರು, ನಿಟ್ಟುಸಿರನ್ನು ಬಿಡುತ್ತಾ, ಚೀತ್ಕಾರ ಮಾಡುತ್ತಾ, ಹುಂಕಾರಗರ್ಜನೆ ಮಾಡುತ್ತಾ, ಕೆಮ್ಮುತ್ತಾ, ಉಗುಳುಗಳನ್ನು ಹೊರಹಾಕುತ್ತಾ ಹಾಡುತ್ತಾನೋ ಅವನು ಸೀತ್ಕಾರಿ ಗಾಯಕಾಧಮನು. ‖ ೩ ‖ 742

### ಅನುನಾಸಿಕದೋಷಿಗಾಯಕ

ಮೂಗಿನ ಹೊಳ್ಳೆಗಳಿಂದ ಹೊರಬರುವ ಶಬ್ದಗಳೊಡನೆ, ಕಠೋರವಾಗಿ ಅಕ್ಷರಗಳನ್ನು ಉಚ್ಚರಿಸುತ್ತಾ, ಮೂಗಿನಿಂದ ಯಾವ ಗಾಯಕನು ಹಾಡುತ್ತಾನೋ ಅವನು ಅನುನಾಸಿಕಗಾಯಕನು. ‖ ೪ ‖ 743

### ಕರಹೀನದೋಷಿಗಾಯಕ

ಯಾವ ಗಾಯಕನು ಶೋಕಾದಿಗಳಿಂದ ವ್ಯಾಕುಲಿತನಾಗಿ, ಕಂಪಿಸುತ್ತಾ, ತನ್ನ ತಲೆಯನ್ನು ಮೇಲೆತ್ತಿ ಆಕಾಶವನ್ನು ನೋಡುತ್ತಾ ಹಾಡುತ್ತಾನೋ ಅವನು ಕರಹೀನಗಾಯಕನೆಂದು ಕರೆಯ-ಲ್ಪಡುತ್ತಾನೆ. ‖ ೫ ‖ 744

177A

### ವಿತಾಲದೋಷಿಗಾಯಕ

ತಾಳ, ಕಾಲ, ಕ್ರಿಯೆ, ಮಾನಗಳ ಜ್ಞಾನವಿಲ್ಲದೆ, ಅವುಗಳನ್ನು ತಿಳಿಯದೆ, ಲಯವನ್ನು ಬಿಟ್ಟು ಹಾಡುವವನು ವಿತಾಲಗಾಯಕನೆಂದು ಉಕ್ತನಾಗಿದ್ದಾನೆ. ಇವನು ಗಾಯಕಾಧಮನು. ‖ ೬ ‖ 745

### ಕಪಿಲದೋಷಿಗಾಯಕ

ಯಾವ ಗಾಯಕನು, ವೇಗದಿಂದ ಹಾಡುತ್ತಾ ಅಜ್ಞಾನದಿಂದ ಸ್ವರಸಂದರ್ಭಕ್ರಮವನ್ನು ಬಿಟ್ಟು, ಹೆಚ್ಚುಕಡಿಮೆ ಮಾಡಿ ಹಾಡುತ್ತಾನೋ ಅವನು ಕಪಿಲಗಾಯಕನು. ಅವನು ಗಾಯಕಾಧಮನು. || ೭ || 746

### ಕಂಪಿತದೋಷಿಗಾಯಕ

ಯಾವ ಗಾಯಕನು ವೇಗದಿಂದ ಸಂಗೀತವನ್ನು ಹಾಡುವಾಗ ತನ್ನ ಶರೀರವನ್ನು ಕಂಪಿಸುವವನಾಗಿ, ವಿಕಾರವಾಗಿ ಹಾಡುತ್ತಾನೋ ಅವನು ಕಂಪಿತಗಾಯಕಾಧಮನು. || ೮ || 747

### ಕರಾಲಿದೋಷಿಗಾಯಕ

ಯಾವ ಗಾಯಕನು, ತನ್ನ ಬಾಯನ್ನು ಅಗಲವಾಗಿ ತೆರೆದು, ಭಯಂಕರಧ್ವನಿಯಿಂದ ಸಂಗೀತವನ್ನು ಹಾಡುತ್ತಾನೋ ಅವನು ಕರಾಲಿಗಾಯಕನೆಂದು ತಿಳಿಯಬೇಕು. ಇವನು ಅಧಮಗಾಯಕನೆಂದು ತಿರಸ್ಕೃತನಾಗಿದ್ದಾನೆ. || ೯ || 748

### ಕಾಕೀದೋಷಿಗಾಯಕ

ಸಂಗೀತವನ್ನು ಹಾಡುವಾಗ ಯಾವನ ಸ್ವರವು ಕಾಗೆಯ ದನಿಯಂತೆ ಕೇಳಲು ಕರ್ಣಕಠೋರ-ವಾಗಿರುತ್ತದೋ, ಅವನು ಕಾಕೀಗಾಯಕನೆಂದು ಉಕ್ತನಾಗಿದ್ದಾನೆ. ಇವನು ಅತಿಯಾಗಿ ನಿಂದಿತನಾಗಿದ್ದಾನೆ. || ೧೦ || 749

### ನಿಮೀಲಿತದೋಷಿಗಾಯಕ

ಯಾವ ಗಾಯಕನು ತನ್ನ ಎರಡು ಕಣ್ಣುಗಳನ್ನು ಮುಚ್ಚಿಕೊಂಡು ಎದುರಿಗೆ ಇರುವ ಜನರನ್ನು ನೋಡದೆ, ನಿಂದಿತವಾಗಿ ಹಾಡುತ್ತಾನೋ ಅವನು ನಿಮೀಲಿತಗಾಯಕನೆಂದು ತಿಳಿಯಬೇಕು. || ೧೧ || 750

### ಸ್ಥಾನಭ್ರಷ್ಟದೋಷಿಗಾಯಕ

ಯಾವ ಗಾಯಕನು ಶ್ರುತಿಯನ್ನು ಬಿಟ್ಟು, ಮೂರು ಸ್ಥಾನಗಳನ್ನೂ ಬಿಟ್ಟು ಸ್ವರವನ್ನು ಹಾಡುತ್ತಾನೋ ಅವನು ಸ್ಥಾನಭ್ರಷ್ಟಗಾಯಕನೆಂದು ತಿಳಿಯಬೇಕು. ಅವನು ಸಂಗೀತಗಾರರಲ್ಲಿ ಅತ್ಯಂತ ನಿಂದಿತನು. || ೧೨ || 751

### ಅವ್ಯವಸ್ಥಿತದೋಷಿಗಾಯಕ

ಯಾವ ಗಾಯಕನು ವ್ಯವಸ್ಥಿತವಾದ ಸಂಗೀತವನ್ನು, ಅವ್ಯವಸ್ಥಿತವನ್ನಾಗಿ ಮಾಡುತ್ತಾನೋ ಅಂದರೆ ಸಂಗೀತ ನಿಯಮಗಳನ್ನೆಲ್ಲ ಬಿಟ್ಟು ಹೇಗೆಹೇಗೋ ಹಾಡುತ್ತಾನೋ ಇವನು ಅವ್ಯವಸ್ಥಿತಗಾಯಕನೆಂದು ಕರೆಯಲ್ಪಟ್ಟಿದ್ದಾನೆ. ಇವನು ಸಂಗೀತಜ್ಞರಿಂದ ನಿಂದಿತನಾಗಿದ್ದಾನೆ. || ೧೩ || 752

### ಏಕೋನದೋಷಿಗಾಯಕ

ಯಾವ ಹಾಡುಗಾರನು ಪದ್ಯ, ವರ್ಣ, ಪದ ಮೊದಲಾದವುಗಳನ್ನು ಅರ್ಧಂಬರ್ಧವಾಗಿ ಹಾಡುತ್ತಾನೋ ಅವನು ಏಕೋನಗಾಯಕನೆಂದು ಕರೆಯಲ್ಪಡುತ್ತಾನೆ. ಅವನು ಗಾಯಕಾಧಮನು. || ೧೪ || 753

### ಶಂಕಿತದೋಷಿಗಾಯಕ

ಸಂಗೀತಕ್ರಿಯೆಯಲ್ಲಿ ಸಂಶಯದಿಂದ, ಯಾವನ ದನಿಯು ಕಂಪಿಸುತ್ತದೋ ಅವನು ಶಂಕಿತಗಾಯಕನೆಂದು ತಿಳಿಯಬೇಕು. ಧ್ವನಿಪರಿಣತರಿಂದ ಅವನು ನಿಂದಿತನಾಗಿದ್ದಾನೆ. || ೧೫ || 754

### ಸಾಂಬಕದೋಷಿಗಾಯಕ

ಯಾವ ಗಾಯಕನು, ತನ್ನ ಮುಖವನ್ನು ಮೇಲೆ ಮಾಡಿಕೊಂಡು, ಮೋಡಗಳ ಗುಡುಗಿನ ಧ್ವನಿಗೆ ಸಮಾನವಾಗಿ ಅಬ್ಬರದಿಂದ ಅಕ್ಷರಗಳನ್ನು ಬಿಟ್ಟು ಬಿಟ್ಟು ಹೀನಸ್ವರದಿಂದ ಹಾಡುತ್ತಾನೋ ಅವನು ಸಾಂಬಕಗಾಯಕನೆಂದು ಸ್ಮೃತನಾಗಿದ್ದಾನೆ. || ೧೬ || 755

### ಪ್ರಸಾರಿದೋಷಿಗಾಯಕ

ಯಾವನು ಸಂಗೀತದಲ್ಲಿ ಚತುರನಲ್ಲದಿದ್ದರೂ, ಶರೀರವನ್ನು ಕುಣಿಸುತ್ತಾ, ಕೈಗಳನ್ನು ಚಾಚುತ್ತಾ, ಅಧಿಕವಾದ ಅಭಿಮಾನದಿಂದ ಹಾಡುತ್ತಾನೋ ಅವನು ಪ್ರಸಾರಿಗಾಯಕನೆಂದು ಹೇಳಲ್ಪಡುತ್ತಾನೆ. || ೧೭ || 756

### ಅವ್ಯಕ್ತದೋಷಿಗಾಯಕ

ಯಾವನು ಗದ್ಗದಸ್ವರದಿಂದ ಕೂಡಿ, ಅಸ್ಫುಟವಾಗಿ ಹಾಡುತ್ತಾನೋ ಅವನು ಅವ್ಯಕ್ತಗಾಯಕನೆಂದು ಹೇಳಲ್ಪಡುತ್ತಾನೆ. ಜೊತೆಗೆ ಅವನು ಗಾಯಕರಿಂದ ನಿಂದಿಸಲ್ಪಡುತ್ತಾನೆ. || ೧೮ || 757

### ಮಿಶ್ರಕದೋಷಿಗಾಯಕ

ಸಂಗೀತಶಾಸ್ತ್ರದಲ್ಲಿ ಹೇಳಿದ ಮಾರ್ಗಪ್ರಕಾರಗಳನ್ನು ಕೈಬಿಟ್ಟು, ಘನತಾನಗಳಲ್ಲಿ ತಾನೇ ಕಲ್ಪನೆ ಮಾಡಿಕೊಂಡು ಯಾವನು ಹಾಡುತ್ತಾನೋ ಅವನು ಮಿಶ್ರಕಗಾಯಕ. ಅವನು ಗಾಯಕಾಧಮನು. || ೧೯ || 758

### ಅಪಸ್ವರದೋಷಿಗಾಯಕ

ಯಾವನು ಸಂಗೀತವನ್ನು ಹಾಡುವ ಸಮಯದಲ್ಲಿ ಸ್ವರವ್ಯತ್ಯಾಸವನ್ನು ಮಾಡಿ ಹಾಡುತ್ತಾನೋ ಅವನು ಅಪಸ್ವರಗಾಯಕನೆಂದು ಹೇಳಲ್ಪಟ್ಟಿದ್ದಾನೆ. || ೨೦ || 759

### ರಾಗನಾಶಕದೋಷಿಗಾಯಕ

ಯಾವನಿಗೆ ಷಡ್ಜ ಮೊದಲಾದ ಸ್ವರಗಳಲ್ಲಿ ಶ್ರುತಿಯು ಹೆಚ್ಚುಕಡಿಮೆಯಾಗುತ್ತದೋ, ಅಲ್ಲದೆ ಈ ಸ್ವರಗಳನ್ನು ಹಾಡುವಾಗ ಹೆದರುವನೋ, ಅವನು ನಿಂದಿತನೆನಿಸಿಕೊಳ್ಳುತ್ತಾನೆ. ಅವನು ರಾಗನಾಶಕ-ಗಾಯಕನೆಂದು ಹೇಳಲ್ಪಟ್ಟಿದ್ದಾನೆ. || ೨೧ || 760

### ಬಕೀದೋಷಿಗಾಯಕ

ಯಾವ ಸಂಗೀತಗಾರನು ಗಲ್ಲಗಳನ್ನು ಕೆನ್ನೆಗಳನ್ನು ಸೋರೆಬುರುಡೆಯಂತೆ ಉಬ್ಬಿಸಿಕೊಂಡು ಹಾಡುತ್ತಾನೋ ಅವನು ಬಕೀಗಾಯಕನೆಂದು ಹೇಳಲ್ಪಡುತ್ತಾನೆ. ಅವನು ಗಾಯಕಾಧಮನು. || ೨೨ || 761

### ವಿರಸದೋಷಿಗಾಯಕ

ಶೃಂಗಾರ, ವೀರ ಮುಂತಾದ ಪ್ರಮುಖ ರಸಗಳನ್ನೇ ಬಿಟ್ಟು ಯಾವನು ಹಾಡುತ್ತಾನೋ ಅವನು ವಿರಸಗಾಯಕನು. ಅವನು ಗಾಯಕಾಧಮನು. || ೨೩ || 762

### ಅನ್ಯಕದೋಷಿಗಾಯಕ

ಹಾಡುವಾಗ ಯಾವನ ಕುತ್ತಿಗೆಯಲ್ಲಿ, ಹಣೆಯಲ್ಲಿ, ನರಗಳ ಗಂಟುಗಳು ಕಾಣುತ್ತವೋ, ಮೂಗಿನ ಹೊಳ್ಳೆಗಳನ್ನು ಅರಳಿಸಿಕೊಂಡು, ಎರಡು ಕಣ್ಣುಗಳನ್ನೂ ಕೆಂಪು ಮಾಡಿಕೊಂಡು ಹಾಡುತ್ತಾನೋ ಅವನು ಅನ್ಯಕಗಾಯಕಾಧಮನೆನಿಸಿಕೊಳ್ಳುತ್ತಾನೆ. || ೨೪ || 763

### ವಕ್ರೀದೋಷಿಗಾಯಕ

ಯಾವನು ಕುತ್ತಿಗೆಯನ್ನು ಅರ್ಧ ವಾಲಿಸಿಕೊಂಡು ಸಂಗೀತವನ್ನು ಹಾಡುತ್ತಾನೋ, ಸಮವಾಗಿ ಹಾಡಲು ಯಾವನು ತಿಳಿಯುವುದಿಲ್ಲವೋ ಅವನು ವಕ್ರೀಗಾಯಕಾಧಮನು. || ೨೫ || 764

### ಸಾಮಗಾಚಾರ್ಯರು

(ಸಾಮವೇದ ಮತ್ತು ಪ್ರಭಾವಳಿಗಳಲ್ಲಿ)

| | |
|---|---|
| 1. ರಾಣಾಯನಿ | 2. ಸಾತ್ಯಮುಗ್ರಿ |
| 3. ಕುರ್ವಾಸಾ (ದುರ್ವಾಸ?) | 4. ಭಾಗುರಿ |
| 5. ಗೌರ್ಗುಂಡೀ | 6. ಗರ್ಗಸಾವರ್ಣಿ |
| 7. ಭಗವಾನ್ ಔಪಮನ್ಯು | 765 |
| 8. ಕಾಲಾರ | 9. ವರ್ಷಗಣ್ಯ |

| | | | | |
|---|---|---|---|---|
| 10. | ಶಾಲಿಹೋತ್ರ | 11. | ಜೈಮಿನಿ | |
| 12. | ಕುಧುಮಿನಿ | 13. | ಗೌರ್ಗುಲವಿ | 766 |

177B ಈ ಹದಿಮೂರು ಜನರು ಸಾಮವೇದದಲ್ಲಿ ಸಾಮಗಾನ ಆಚಾರ್ಯರೆಂದು ಉತ್ತಮರಾದ ಸಾಮಗಾನಪರಾಯಣರಿಂದ ತಿಳಿಯಲ್ಪಟ್ಟಿದ್ದಾರೆ. 767

## ನಲವತ್ತೊಂಭತ್ತು ಬಗೆಯ ತಾನಗಳು

(ನಮ್ಮಿಂದ ರಚಿತವಾದ ಸಂಖ್ಯಾರತ್ನಕೋಶವ್ಯಾಖ್ಯಾನವಾದ ಪ್ರಭಾವಲಿಯಲ್ಲಿ)

| | | | | |
|---|---|---|---|---|
| 1. | ಸರ್ವತೋಭದ್ರತಾನ | 2. | ಬ್ರಹ್ಮಯಜ್ಞವಿಧತಾನ | |
| 3. | ಅಶ್ವಕ್ರಾಂತತಾನ | 4. | ಪ್ರಾಜಾಪತ್ಯತಾನ | 768 |
| 5. | ಸಾವಿತ್ರೀತಾನ | 6. | ನಾಗಯಕ್ಷತಾನ | |
| 7. | ಸರ್ಪಾಯನತಾನ | 8. | ಬರ್ಹಿತಾನ | |
| 9. | ಅಭ್ಯುದಯತಾನ | 10. | ಸಭರಿತಾನ | 769 |
| 11. | ಸೌಭಾಗ್ಯಕ್ರತುತಾನ | 12. | ವಶೀಕರಣತಾನ | |
| 13. | ತ್ರೈಲೋಕ್ಯಮೋಹನತಾನ | 14. | ಕಠತಾನ | |
| 15. | ಸೇನತಾನ | | | 770 |
| 16. | ಗೋದೋಹನತಾನ | 17. | ವಜ್ರತಾನ | |
| 18. | ವೈನತೇಯತಾನ | 19. | ಅಗ್ನಿಷ್ಟೋಮತಾನ | |
| 20. | ವಾಜಪೇಯತಾನ | 21. | ಇಷುತಾನ | 771 |
| 22. | ಕಾಮದತಾನ | 23. | ಶಂಖಚೂಡತಾನ | |
| 24. | ಅವಭೃಥತಾನ | 25. | ಶಾಂತಿಕೃತ್ತಾನ | |
| 26. | ಸೂರ್ಯಕ್ರಾಂತತಾನ | 27. | ಭೈರವತಾನ | 772 |
| 28. | ಇಡಾತಾನ | 29. | ರಥಕ್ರಾಂತತಾನ | |
| 30. | ಪುಷ್ಟಿಕೃತ್‌ತಾನ | 31. | ಪೌಂಡರೀಕತಾನ | |
| 32. | ರಾಜಸೂಯತಾನ | 33. | ರಾತ್ರಿತಾನ | 773 |
| 34. | ಮಹಾವ್ರತತಾನ | 35. | ಚಿತ್ರತಾನ | |
| 36. | ಸೌತ್ರಾಮಣಿತಾನ | 37. | ಅಶ್ವಮೇಧತಾನ | |

38. ವಿಷ್ಣುಕ್ರಾಂತತಾನ 39. ಸೋಮತಾನ 774
40. ಉಚ್ಚಾಟನತಾನ 41. ಬಹುವರ್ಣತಾನ
42. ಅಂಗಿರಸತಾನ 43. ಅಶ್ವಪತಿಗ್ರಹತಾನ
44. ಪೌರ್ಣಮಾಸಿತಾನ 775
45. ದೀಕ್ಷಾತಾನ 46. ಗಜಕ್ರಾಂತತಾನ
47. ಸಿದ್ಧಿಕೃತ್‌ತಾನ 48. ರೌದ್ರತಾನ
49. ವೀರಕಂದರ್ಪಕುಶತಾನ 776

ಎಂಬುದಾಗಿ ಇವು ಸಂಗೀತರತ್ನಾಕರಗ್ರಂಥದಲ್ಲಿ ಹೇಳಿರುವ ನಲವತ್ತೊಂಭತ್ತುತಾನಗಳ ಹೆಸರುಗಳೆಂದು ಸಂಗೀತಜ್ಞರು ತಿಳಿಯಬೇಕು. 777

## ಭರತಾಚಾರ್ಯರ ಹೆಸರುಗಳು

### (ಭರತಶಾಸ್ತ್ರಸಂಗ್ರಹದಲ್ಲಿ)

1. ಸದಾಶಿವ 2. ಶಿವ 3. ಬ್ರಹ್ಮ
4. ಭರತ 5. ಕಶ್ಯಪ 6. ಅರ್ಜುನ
7. ವಿಶಾಖಿಲ 8. ದತ್ತಿಲ 9. ತುಂಬುರು
10. ನಾರದ 11. ಗುರು 778
12. ಆಂಜನೇಯ 13. ಮಾತೃಗುಪ್ತ 14. ರಾವಣ
15. ನಂದಿಕೇಶ್ವರ 16. ಕಂಬಲ 17. ಅಶ್ವತರ
18. ರಂಭಾ 19. ಶಾರ್ದೂಲ 20. ಭಟ್ಟ
21. ಕೋಹಲ 779
22. ಆದಿದೇವ 23. ಅರ್ಚಿದೇವ 24. ಮತಂಗ
25. ಯಷ್ಟಿ 26. ಶಂಕರ 27. ವಿಶ್ವಾವಸು
28. ಚಿತ್ರಸೇನ 29. ಉದ್ಭಟ 30. ಲೋಲಟ 780
31. ದುರ್ಗಾಶಕ್ತಿ 32. ಸೋಮನಾಥ 33. ರುದ್ರಸೇನ
34. ಭೋಜರಾಜ 35. ಭಾರತೀಯ 36. ಕೀರ್ತಿಧರ
37. ಜಗದೇಕ ಮಹೀಪತಿ 781

38. ವ್ಯಾಖ್ಯಾಕಾರ 39. ಅಭಿನವಗುಪ್ತ 40. ಪಾಕಶಾಸನ 781A

ಈ ನಲವತ್ತು ಜನರು ಭರತಾಚಾರ್ಯರು (ನಾಟ್ಯಾಚಾರ್ಯರು).

## ನಾಟ್ಯದಲ್ಲಿ ವರ್ಜಿತವಾದ ಸ್ತ್ರೀಲಕ್ಷಣಗಳು

### (ಭರತಸಂಗ್ರಹದಲ್ಲಿ)

1. ಅತ್ಯಂತ ದಪ್ಪಗಿರುವವಳು 2. ಹೂಗಳಂತೆ ಕಣ್ಣುಗಳು
3. ಸ್ವರವೇ ಇಲ್ಲದವಳು 4. ಕುಳ್ಳಗಿರುವವಳು
5. ಜೋತಾಡುವ ಸ್ತನವುಳ್ಳವಳು 6. ಅತಿಸಣ್ಣಗಿರುವವಳು
7. ಉದ್ದವಾದ ತುಟಿಗಳುಳ್ಳವಳು 8. ಉದ್ದವಾದ ಹಲ್ಲುಗಳುಳ್ಳವಳು 782
9. ಅತಿ ಕುಳ್ಳಗಿರುವವಳು 10. ಅತಿ ಎತ್ತರವಾಗಿರುವವಳು
11. ತಲೆಗೂದಲಿಲ್ಲದವಳು 12. ವಿರೂಪಳಾದವಳು
13. ಚಪಲಚಿತ್ತಳಾಗಿರುವವಳು 14. ರೋಗಿಯಾದವಳು
15. ಡೊಳ್ಳುಹೊಟ್ಟೆಯುಳ್ಳವಳು 16. ಅತಿ ಕಪ್ಪಾಗಿರುವವಳು
17. ಅತಿ ಕೆಂಪಾಗಿರುವವಳು 18. ಅಪಸ್ವರ ಹಾಡುವವಳು 783
19. ಸಂಗೀತಾಭ್ಯಾಸವನ್ನು ಮಾಡದಿರುವವಳು
20. ದೇಹದಲ್ಲಿ ಸುಳಿಸುರುಳಿ ಇತ್ಯಾದಿಗಳು ಇಲ್ಲದಿರುವವಳು
21. ಕಪ್ಪುಬೆರಳುಗಳುಳ್ಳವಳು 22. ಕಂದುಬಣ್ಣದ ಕೂದಲುಳ್ಳವಳು
23. ಅಕ್ಷರಜ್ಞಾನವಿಲ್ಲದವಳು 24. ಎಡಗೈಯನ್ನು ಬಳಸುವ ಸ್ವಭಾವವುಳ್ಳವಳು

ಹೀಗೆ ಈ ರೀತಿಯ 24 ಜನ ಸ್ತ್ರೀಯರು ನಾಟ್ಯದಲ್ಲಿ ವರ್ಜಿತರಾದವರೆಂದು ಒಪ್ಪಲ್ಪಟ್ಟಿದೆ. 784-784A

## ನಾಟ್ಯಕ್ಕೆ ಯೋಗ್ಯರಾದ ಹೆಂಗಸರ ಲಕ್ಷಣಗಳು

### (ಶಿವತತ್ತ್ವರತ್ನಾಕರ ಮತ್ತು ಭರತನ ನಾಟ್ಯಶಾಸ್ತ್ರದಲ್ಲಿ)

1. ದೇಹದ ಎಲ್ಲ ಅಂಗಗಳು ಸ್ಪಷ್ಟವಾಗಿ ಗೋಚರವಾಗುತ್ತಿದ್ದು ಸುಂದರಳಾಗಿರುವವಳು
2. ದಪ್ಪಸ್ತನಗಳು ಮತ್ತು ನಿತಂಬಗಳನ್ನುಳ್ಳವಳು
3. ನೃತ್ತ-ವಾದಿತ್ರ-ಗೀತಗಳಲ್ಲಿ ಕುಶಲಳಾದವಳು
4. ಉದ್ದವಾದ ಕಣ್ಣುಗಳುಳ್ಳವಳು 785

5. (ಸಂಗೀತದ ನಾಟ್ಯಗಳಲ್ಲಿ) ತರ-ತಮಭಾವ ವಿಶೇಷಗಳನ್ನು ಬಲ್ಲವಳು
6. ರೂಪಸಂಪತ್ತಿನಿಂದ ಕೂಡಿ ಉದಾರ ಗುಣವುಳ್ಳವಳು
7. ಶ್ರಮವನ್ನು ಗೆದ್ದವಳು (ಶ್ರಮವನ್ನು ಲೆಕ್ಕಿಸದವಳು)
8. ತುಂಬಾ ತಿಳಿದವಳು
9. ಗತಿಕ್ರಮದಲ್ಲಿ ಚೆನ್ನಾಗಿ ಪಳಗಿದವಳು 786
10. ನಾಟ್ಯಾಂಗಗಳ ಲಕ್ಷಣಗಳನ್ನು ಬಲ್ಲವಳು
11. ಯಾವಾಗಲೂ ಪ್ರಿಯವನ್ನು ಆಡುವವಳು
178A 12. ಉಕ್ತಿ-ಪ್ರತ್ಯುಕ್ತಿಗಳನ್ನು ಕೊಡುವುದರಲ್ಲಿ ಚತುರಳಾದವಳು
13. ರಂಜಿಸುವ ಗುಣವುಳ್ಳವಳು 787
14. ಅತಿ ಎತ್ತರವಾಗಿಲ್ಲದವಳು
15. ಅತಿ ಕುಳ್ಳಗೂ ಇರದವಳು
16. ರೋಗವಿಲ್ಲದವಳು
17. ಒಳ್ಳೆಯ ಮುಖವುಳ್ಳವಳು (ಸುಂದರ ಮೊಗದವಳು)
18. ಅತಿ ದಪ್ಪಗೆ ಇರದವಳು
19. ಅತಿ ಸಣ್ಣಗೂ ಇರದವಳು
20. ರಾಗಸಂಪತ್ತಿನಿಂದ ಕೂಡಿರುವವಳು 788
21. ಉತ್ತಮವಾದ ಅಲಂಕಾರಾಭರಣಗಳನ್ನು ಚೆನ್ನಾಗಿ ಅಲಂಕಾರ ಮಾಡಿಕೊಂಡಿರುವವಳು
22. ಮಂಡಲಗಳಲ್ಲಿ ಅತಿ ಸೂಕ್ಷ್ಮ ತಿಳಿವಳಿಕೆಯುಳ್ಳವಳು
23. ಗುರುಗಳು ದೇವರು ಬ್ರಾಹ್ಮಣರು ಮುಂತಾದವರ ಸೇವೆ ಮಾಡುವ ಮನಸ್ಸುಳ್ಳವಳು 789
24. ಮನೋಧರ್ಮಗಳನ್ನು ಅರಿತವಳು
25. ತಾಳಭೇದಗಳನ್ನು ತಿಳಿದವಳು
26. ನಿರ್ಮಲವಾದ ಶರೀರವುಳ್ಳವಳು
27. ರಸ-ಅಭಿನಯ, ಭಾವ ಮೊದಲಾದವುಗಳಲ್ಲಿ ಕುಶಲಳಾದವಳು 790
28. ಅತ್ಯಂತ ಚತುರಳಾದವಳು

ಹೀಗೆ ಹೇಳಿದ ಗುಣಗಳುಳ್ಳ ಹೆಂಗಸು ನಾಟ್ಯಕ್ಕೆ ಯೋಗ್ಯಳಾಗಿದ್ದಾಳೆ. ಇಂತಹವಳು ಎಲ್ಲರನ್ನು ರಂಜಿಸುತ್ತಾಳೆ. 790A

## ನರ್ತನದಲ್ಲಿನ ಸೂತ್ರಧಾರನ ಲಕ್ಷಣ

### (ಭರತನ ನಾಟ್ಯಶಾಸ್ತ್ರದಲ್ಲಿ)

ನರ್ತನಗಳಲ್ಲಿ ಎಲ್ಲ ಪ್ರಯೋಗಗಳಲ್ಲಿ ಕುಶಲನಾದವನು, ಹಸ್ತಸಾಮುದ್ರಿಕಾಶಾಸ್ತ್ರ-ಕ್ಕನುಗುಣವಾಗಿ ಅವಯವಗಳಲ್ಲಿ ಒಳ್ಳೆಯ ರೇಖೆಗಳನ್ನು ಉಳ್ಳವನು, ಇಂದ್ರಿಯಗಳನ್ನು ಗೆದ್ದವನು, ತುಂಬಾ ತಿಳಿದವನು, ತಾಳ-ಲಯಗಳನ್ನು ಚೆನ್ನಾಗಿ ಬಲ್ಲವನು, ಗೀತಶಾಸ್ತ್ರಗಳಲ್ಲಿ ಪಂಡಿತನಾದವನು, **791**

ಪಾತ್ರಧಾರಿಯಾಗಿ ರಂಗದಲ್ಲಿ ಓಡಾಡುವ ಉಪಾಯಗಳಲ್ಲಿ ಕುಶಲನಾದವನು, ಸತ್ಕುಲದಲ್ಲಿ ಹುಟ್ಟಿದವನು, ಮನೋಹರವಾಗುವಂತೆ ಶರೀರದ ಅಂಗಾಂಗಗಳನ್ನು ಕುಣಿಸುವುದರಲ್ಲಿ ನಿಪುಣನಾದವನು, ಮಂಡಲಗಳಲ್ಲಿ ಅತಿಬುದ್ಧಿವಂತನಾದವನು, **792**

ನಾನಾದೇಶಗಳ ನೃತ್ಯಗಳನ್ನು ತಿಳಿದವನು, ಮತ್ಸರವಿಲ್ಲದವನು, ವಾದ್ಯಭೇದಗಳ ಜ್ಞಾನದಲ್ಲಿ ನಿಪುಣ-ನಾದವನು, ನಾನಾರೀತಿಯ ಅಭಿನಯಗಳಲ್ಲಿ ಕೋವಿದನಾದವನು. ಹೀಗೆ ಈ ರೀತಿಯ ಗುಣಗಳಿಂದ ಕೂಡಿದವನು ನಾಟ್ಯದಲ್ಲಿ ಸೂತ್ರಧಾರನೆಂದು ಚೆನ್ನಾಗಿ ಹೇಳಲ್ಪಟ್ಟಿದ್ದಾನೆ. **793-793A**

## ರಂಗಸ್ಥಳಗಳಲ್ಲಿ ಪಾತ್ರಗಳ ಯೋಜನಾಕ್ರಮ

### (ಭರತನ ನಾಟ್ಯಶಾಸ್ತ್ರದಲ್ಲಿ)

ರಂಗಸ್ಥಳದ ಮಧ್ಯದಲ್ಲಿ ಇರುವ ಪಾತ್ರಗಳಲ್ಲಿ ಶ್ರೇಷ್ಠನಾದ ನಟನು ಎಡಭಾಗದಲ್ಲಿರ-ಬೇಕು. ಬಲಭಾಗದಲ್ಲಿ ತಾಳ ಹಿಡಿದವನು ಇರಬೇಕು. ಎರಡು ಕಡೆಗಳಲ್ಲಿಯೂ ವಾದ್ಯದವನು ಇರಬೇಕು. **794**

ಇವರಿಬ್ಬರ ಮಧ್ಯೆ ಸಂಗೀತಗಾರನು ಕೂತಿರಬೇಕು. ಅವನ ಹಿಂದೆ ಶ್ರುತಿಯವನು ಕುಳಿತುಕೊಳ್ಳಬೇಕು. ಲಾಸ್ಯನೃತ್ಯವು ಆರಂಭವಾಗುವ ಕಾಲದಲ್ಲಿ ರಂಗಸ್ಥಳದಲ್ಲಿ ಪಾತ್ರಗಳು ಇರಬೇಕಾದ ಕ್ರಮವಿದು. **795**

## ನಾಟ್ಯದ ಆರಂಭದಲ್ಲಿ ಪೂರ್ವರಂಗಕ್ರಮ

### (ನಂದಿಭರತದಲ್ಲಿ)

ಸೂತ್ರಧಾರನನ್ನು ಅನುಸರಿಸಿ ಹಾಡುಗಾರರು ತಾಳ ಮದ್ದಳೆಯವರು, ಶ್ರುತಿಮೇಳದವರು ಮುಂದೆ ಆಗುವ ನಟನೆಗೆ ಅನುಕೂಲವಾಗುವಂತೆ ಮೊದಲಿಗೆ ರಂಗಸ್ಥಳಕ್ಕೆ ಬಂದು ಘೋಷಣೆಯನ್ನು ಮಾಡುತ್ತಾರೆ. **796**

## ನಾಟ್ಯದ ಆರಂಭಕಾಲದಲ್ಲಿ ವಾರಗಳ ಭೇದದಿಂದ ಪುಷ್ಪಾಂಜಲಿಗೆ ಯೋಗ್ಯವಾದ ಹೂಗಳ ಭೇದಗಳು

### (ಭರತನ ನಾಟ್ಯಶಾಸ್ತ್ರದಲ್ಲಿ)

(ಅಂಜಲಿ ಎಂದರೆ ಎರಡು ಕೈಗಳನ್ನು ಪಾತಿಯ ಆಕಾರದಲ್ಲಿ ಜೋಡಿಸಿ ಹಿಡಿದುಕೊಳ್ಳುವುದು ಎಂದು

ಅರ್ಥ. ಇದಕ್ಕೆ ಬೊಗಸೆ ಎನ್ನುತ್ತಾರೆ. ಈ ಬೊಗಸೆಯಲ್ಲಿ ಹೂಗಳನ್ನು ಇಟ್ಟುಕೊಂಡು ಮೊದಲಿಗೆ ರಂಗಸ್ಥಳಕ್ಕೆ ಬಂದು ಹಾಡಿ, ಕುಣಿದು, ಪ್ರಾರ್ಥಿಸಿ ರಂಗಸ್ಥಳದಲ್ಲಿ ನಟಾದಿಗಳು ಎರಚಿ ಹೋಗುತ್ತಾರೆ. ಈ ಬೊಗಸೆಯಲ್ಲಿ ಇಟ್ಟುಕೊಳ್ಳುವ ಹೂಗಳು ವಾರಗಳ ಏಳು ದಿವಸಗಳಲ್ಲಿ ಪ್ರತಿಯೊಂದು ದಿವಸವೂ ಬೇರೆಯಾಗಿರುತ್ತದೆ. ಅದನ್ನು ಇಲ್ಲಿ ಈಗ ಹೇಳುತ್ತಿದ್ದಾರೆ.)

ಭಾನುವಾರದಂದು ದಾಸವಾಳದ ಹೂವು (ಜಪಾಕುಸುಮ). ಸೋಮವಾರದ ದಿನ (ಸುರಹೊನ್ನೆಹೂ) ಪುನ್ನಾಗದ ಹೂವು. ಮಂಗಳವಾರದ ದಿವಸ ತುಂಬೆ ಹೂವು (ದ್ರೋಣಪುಷ್ಪ). ಬುಧವಾರ ತಾಳೆಹೂವು (ಕೇತಕೀ ಕುಸುಮ). **797**

ಗುರುವಾರದಂದು ಸಂಪಿಗೆಹೂವು (ಚಂಪಕಪುಷ್ಪ). ಶುಕ್ರವಾರದ ದಿನ ಜಾಜೀ ಹೂವು (ಜಾತೀಕುಸುಮ). ಶನಿವಾರದಂದು ನಾಗಕೇಸರಹೂವು (ಬಕುಳಪುಷ್ಪ). ಹೀಗೆ ಕ್ರಮವಾಗಿ ಭಾನುವಾರದಿಂದ ಶನಿವಾರ ಪೂರ್ತಾ ಉಪಯೋಗಿಸುವ ಹೂಗಳು. ಈ ಹೂಗಳು ನರ್ತಕಿಯ ಕೈಬೊಗಸೆಯಲ್ಲಿ ಪುಷ್ಪಾಂಜಲಿಗೆ ಯೋಗ್ಯವಾದ ಹೂವುಗಳು. **798-799A**

## ನಾಟ್ಯಾಂಗ ಕಾರ್ಯಗಳು

### (ಭರತನ ನಾಟ್ಯಶಾಸ್ತ್ರದಲ್ಲಿ)

| | | | | | | |
|---|---|---|---|---|---|---|
| 1. | ಪೀಠಕ | 2. | ಕೂಟಮಾನ | 3. | ಪ್ರಚುರ | |
| 4. | ಕಲಾಸಿಕ | | | | | **799B** |
| 5. | ಕೈಯುಡು | 6. | ಮರಾಲ | 7. | ಅಂಗರೇಖಾ | |
| 8. | ಝುಕ್ಕಿಣೀ | 9. | ಕಟಕಟ್ಟು | 10. | ಜೋಗಿಣೀ | |
| 11. | ಚಾರಮಾನ | 12. | ಮಂಡಲ | | | **800** |
| 13. | ಚಾಲೀಯ | 14. | ನೃತ್ತಚಾರೀ | 15. | ಶಬ್ದ | |
| 16. | ಕೌತ | 17. | ನತ್ರಕ | 18. | ನೃತ್ತ | |
| 19. | ತುರುಪು (ತುರುವು) | 20. | ನೇರು | 21. | ವಸರಾ | |

ಎಂಬ ಹೆಸರಿನ ಈ ಇಪ್ಪತ್ತೊಂದು ಭೂತಲದಲ್ಲಿ ನಾಟ್ಯದ ಅಂಗಗಳೆಂದು ಪ್ರಸಿದ್ಧವಾಗಿವೆ. **801-802A**

## ನಾಟ್ಯಚೇಷ್ಟಾಭೇದ

### (ನಾಟ್ಯದಲ್ಲಿನ ಅಂಗಚಲನೆಗಳ ಭೇದ)

### (ನಮ್ಮಿಂದ ರಚಿತವಾದ ಸಂಖ್ಯಾರತ್ನಕೋಶದ ವ್ಯಾಖ್ಯಾ ಪ್ರಭಾವಲಿಯಲ್ಲಿ)

1. ವಿದ್ಯುದ್ಭ್ರಾಂತಿ 2. ಅಪಕ್ಷೇಪ

| | | | | |
|---|---|---|---|---|
| 3. | ಪುರಕ್ಷೇಪ | 4. | ಅಂಘ್ರಿತಾಡಿತ | 802B |
| 5. | ದಂಡಪಾತ | 6. | ಸೂಚ್ಯವಿದ್ಧ | |
| 7. | ಭ್ರಮರೀ | 8. | ಆಂದೋಲಿತ | |
| 9. | ಚಮರೀ | 10. | ಊರ್ಧ್ವಜಾನು | |
| 11. | ವಿಕ್ಷೇಪ | 12. | ಹರಿಣಪ್ಲುತ | 803 |
| 178B 13. | ಜಂಘಾಲ | 14. | ಘನಮಾಲಾತಿ | |
| 15. | ಜಂಘಾ | 16. | ಆವರ್ತಕ | |

ಎಂಬುದಾಗಿ ಇವು ಹದಿನಾರು ನಾಟ್ಯದಲ್ಲಿನ ಚೇಷ್ಟೆಗಳು (ಅಂಗಚಲನೆಗಳು) ಎಂಬುದಾಗಿ ಭರತನ ನಾಟ್ಯಶಾಸ್ತ್ರದಲ್ಲಿ ಚೆನ್ನಾಗಿ ಉದಾಹೃತವಾಗಿವೆ. 804

## ನಾಟ್ಯದಲ್ಲಿ ಅಭಿನಯ ಯೋಗ್ಯವಾದ ಅಂಗಗಳು

### (ಶಿವತತ್ತ್ವರತ್ನಾಕರದಲ್ಲಿ)

1. ಶಿರಸ್ (ತಲೆ) 2. ಕರ (ಕೈ) 3. ಕಟಿ (ಸೊಂಟ) 4. ವಕ್ಷಸ್ (ಎದೆ)
5. ಪಾರ್ಶ್ವ (ಅಕ್ಕಪಕ್ಕಗಳು) 6. ಚರಣ (ಕಾಲು)

ಎಂಬುದಾಗಿ ಇವು ಆರು ಕ್ರಮವಾಗಿ ನಾಟ್ಯದಲ್ಲಿ ಅಭಿನಯಿಸಲು ಯೋಗ್ಯವಾದ ಅಂಗಗಳು. 805

## ನಾಟ್ಯದ ಉಪಾಂಗಗಳು

### (ಶಿವತತ್ತ್ವರತ್ನಾಕರದಲ್ಲಿ)

1. ಎರಡು ಹುಬ್ಬುಗಳು 2. ಎರಡು ಕಣ್ಣುಗಳು 3. ಮೂಗು 4. ಗಲ್ಲ 5. ತುಟಿಗಳು 6. ಕೆನ್ನೆಗಳು ಇವು ಆರು ನಾಟ್ಯದಲ್ಲಿ ಉಪಾಂಗಗಳು. 806

## ನಾಟ್ಯದಲ್ಲಿ ಪ್ರತ್ಯಂಗಗಳು

### (ಶಿವತತ್ತ್ವರತ್ನಾಕರದಲ್ಲಿ)

1. ಕತ್ತು 2. ತೋಳು 3. ಹೊಟ್ಟೆ 4. ತೊಡೆ 5. ಮೊಣಕಾಲು 6. ಪೃಷ್ಠದೇಶ (ಹಿಂಭಾಗ) - ಇವು ಆರು ನಾಟ್ಯದಲ್ಲಿ ಪ್ರತ್ಯಂಗಗಳೆಂದು ಹೇಳಲ್ಪಡುತ್ತವೆ. 807

## ನರ್ತಕಿಯ ಸ್ಥಾನಭೇದಗಳು

### (ಭರತಶಾಸ್ತ್ರದಲ್ಲಿ)

1. ಆಯತಸ್ಥಾನಕ 2. ಅವಹಿತಸ್ಥಾನಕ 3. ಅಶ್ವಕ್ರಾಂತಸ್ಥಾನಕ 4. ಗತಾಗತಸ್ಥಾನಕ 808

5. ವಲಿತಸ್ಥಾನಕ 6. ಮೋಟಕಸ್ಥಾನಕ 7. ವಿನವರ್ತಿತಸ್ಥಾನಕ - ಎಂಬುದಾಗಿ ಇವು ಏಳು ನರ್ತಕಿಯ ಸ್ಥಾನಭೇದಗಳು. 809

## ನರ್ತಕಿಯ ಪಾದಸಂಚಾರದ ಗತಿಭೇದಗಳು

### (ಭರತನ ನಾಟ್ಯಶಾಸ್ತ್ರದಲ್ಲಿ ಮತ್ತು ಸಂಗೀತರತ್ನಾಕರದಲ್ಲಿ)

1. ವಲನಚಾರಿಗತಿ 2. ಚಂಕ್ರಮಣಗತಿ 3. ಸರಣಚಾರಿಗತಿ 4. ಕುಟ್ಟನಚಾರಿಕಗತಿ 810

5. ಲುಂಠಿತಚಾರಿಗತಿ 6. ಲೋಲಕಚಾರಿಗತಿ 7. ವಿಷಮಸಂಚಾರಿಗತಿ - ಇವು ಏಳು ನರ್ತಕಿಯ ಪಾದಸಂಚಾರದ ಗತಿಭೇದಗಳು. 811-811A

## ಕುಂಡಲೀ ಎಂಬ ಹೆಸರಿನ ನಾಟ್ಯದ ಗತಿವಿಶೇಷದ ಹೆಸರುಗಳು

### (ಭರತನ ನಾಟ್ಯಶಾಸ್ತ್ರದಲ್ಲಿ)

## ವಾಲವರಸೆಕ್ರಮ

### (ಬಾಲದಂತೆ ಚಕ್ರಾಕಾರವಾಗಿ ಬರುವ ಕ್ರಮ)

ನಾಟ್ಯವು ಆರಂಭವಾದಾಗ ಮೊದಲಿನಿಂದ ಕೊನೆಯವರೆಗೆ ಮಾಡಬಹುದಾದ ಗತಿ-ವಿಶೇಷಗಳೆಂದರೆ -

| | | |
|---|---|---|
| 1. | ಹಂಸಗತಿ | ಹಂಸಪಕ್ಷಿಯಂತೆ ನಡೆ |
| 2. | ಮಯೂರಗತಿ | ನವಿಲಿನಂತೆ ನಡೆ |
| 3. | ಲಾವುಕಗತಿ | ಲಾವುಕವು ಒಂದು ಜಾತಿಯ ಹಕ್ಕಿ. ಅದರ ನಡೆಯಂತೆ ನಡೆ |
| 4. | ಆತಾಪಿಗತಿ | ಆತಾಪಿ ಹಕ್ಕಿ - ಮುಂಡುಮುಳುಕನ ಹಕ್ಕಿ. ಅದರ ನಡೆಯಂತೆ ನಡೆ. 812 |
| 5. | ಕುಕ್ಕುಟಗತಿ | ಕೋಳಿಯ ನಡೆಯಂತೆ ನಡೆ |
| 6. | ಗಜಗತಿ | ಆನೆಯಂತೆ ನಿಧಾನ ನಡೆ |
| 7. | ಅಶ್ವಗತಿ | ಕುದುರೆಯಂತೆ ವೇಗ ನಡೆ |

ಇವು ಏಳು ನಾಟ್ಯದಲ್ಲಿನ ಗತಿವಿಶೇಷಗಳೆಂದು ಉಕ್ತವಾಗಿವೆ. 813

## ನರ್ತಕೀಸಂಯುತಹಸ್ತಭೇದಗಳು

### (ನರ್ತಕಿಯು ನಾಟ್ಯದಲ್ಲಿ ಕೈಗಳನ್ನು ಜೋಡಿಸಿ ತೋರಿಸಬಹುದಾದ ಹಸ್ತಭೇದಗಳು)

### (ನಂದಿಭರತಶಾಸ್ತ್ರದಲ್ಲಿ)

1. ಚತುರಶ್ರಹಸ್ತ (ಚೌಕಾಕಾರವಾಗಿ ಕೈಗಳನ್ನು ಜೋಡಿಸುವುದು)

2. ಪುಷ್ಪಪುಟಹಸ್ತ (ಹೂವಿನ ಪದರದಂತೆ ಕೈಗಳಿರುವುದು)
3. ಸ್ವಸ್ತಿಕಹಸ್ತ (ಸ್ವಸ್ತಿಕಚಿಹ್ನೆಯಾಕಾರದಲ್ಲಿ ಕೈಗಳನ್ನು ಜೋಡಿಸಿಕೊಳ್ಳುವುದು)
4. ಅಂಜಲಿಹಸ್ತ (ಕೈಗಳನ್ನು ಬೊಗಸೆ ಮಾಡುವುದು)
5. ಕರ್ತರೀಸ್ವಸ್ತಿಕಹಸ್ತ (ಕತ್ತರಿಯಂತೆ ಸ್ವಸ್ತಿಕಾಕಾರದಲ್ಲಿ ಕೈಗಳನ್ನು ಒಂದರ ಮೇಲೊಂದು ಜೋಡಿಸುವುದು)
6. ಡೋಲಾಹಸ್ತ (ಉಯ್ಯಾಲೆಯಂತೆ ಕೈಗಳನ್ನು ಮಾಡುವುದು)
7. ತಿಲಕಹಸ್ತ (ಕೈಯನ್ನು ಹಣೆಯ ಮೇಲೆ ತಿಲಕದಂತೆ ಹಿಡಿಯುವುದು) **814**
8. ವರ್ಧಮಾನಹಸ್ತ (ಬೆಳೆಯುವಾಕಾರದಲ್ಲಿ ಕೈಗಳನ್ನು ಹಿಡಿದು ತೋರಿಸುವುದು)
9. ಅವಹಿತಹಸ್ತ (ಕೈಗಳನ್ನು ಒಂದರ ಮೇಲೊಂದು ಜೋಡಿಸಿ ತೋರಿಸುವುದು)
10. ಪತಾಕಹಸ್ತ (ಬಾವುಟದಂತೆ ಕೈಗಳನ್ನು ಹಿಡಿದು ತೋರಿಸುವುದು)
11. ಕಲಶಹಸ್ತ (ಕಲಶದಂತೆ ಕೈಗಳನ್ನು ಜೋಡಿಸಿ ತೋರಿಸುವುದು)
12. ಉತ್ತಾನವಂಚಿತಹಸ್ತ (ಕೈಗಳನ್ನು ಮೇಲೆತ್ತಿ ಬಾಗಿಸಿ ತೋರಿಸುವುದು)
13. ಪಕ್ಷವಂಚಿತಹಸ್ತ (ಕೈಗಳನ್ನು ಅಕ್ಕಪಕ್ಕಗಳಲ್ಲಿ ಬಾಗಿಸಿ ತೋರಿಸುವುದು)
14. ವೈಷ್ಣವಹಸ್ತ (ಕೈಗಳನ್ನು ಅಗಲಿಸಿ ತೋರಿಸುವುದು) **815**
15. ನಾಗಬದ್ಧಹಸ್ತ (ಕೈಗಳನ್ನು ಹಾವಿನಂತೆ ಜೋಡಿಸಿ ಹಿಡಿದು ತೋರಿಸುವುದು)
16. ಉತ್ಸಂಗಹಸ್ತ (ತೊಡೆಯಂತೆ ಕೈಗಳನ್ನು ಹಿಡಿದು ತೋರಿಸುವುದು)

ಇವು ಹದಿನಾರು ಹಸ್ತಚಿಹ್ನೆಗಳನ್ನು ನರ್ತಕಿಯು ನಾಟ್ಯದಲ್ಲಿ ಎರಡು ಕೈಗಳನ್ನು ಜೋಡಿಸಿ ತೋರಿಸುವಂತಹವುಗಳು. **816**

## ನರ್ತಕಿಯು ಅಸಂಯುತಹಸ್ತಭೇದಗಳು

### (ನಂದಿಭರತಶಾಸ್ತ್ರದಲ್ಲಿ)

### (ನರ್ತಕಿಯು ಎರಡೂ ಕೈಗಳನ್ನು ಜೋಡಿಸದೆ, ಒಂದೊಂದೇ ಕೈನಲ್ಲಿ ತೋರಿಸಬಹುದಾದ ಹಸ್ತಚಿಹ್ನೆಗಳು)

1. ಪತಾಕಹಸ್ತ (ಬಾವುಟದಂತೆ ಕೈಯನ್ನು ಹಿಡಿಯುವುದು)
2. ತ್ರಿಪತಾಕಹಸ್ತ (ಮೂರು ಬೆರಳುಗಳನ್ನು ಜೋಡಿಸಿ ಬಾವುಟದಂತೆ ಹಿಡಿಯುವುದು)
3. ಊರ್ಧ್ವಪತಾಕಹಸ್ತ (ಒಂದು ಕೈಯನ್ನು ಮೇಲೆತ್ತಿ ಬಾವುಟದಂತೆ ಹಿಡಿಯುವುದು)
4. ಕರ್ತರೀಮುಖಹಸ್ತ (ಕತ್ತರಿಯ ಮುಖದಂತೆ ಕೈಯನ್ನು ಹಿಡಿದು ತೋರಿಸುವುದು)

5. ಮಯೂರಹಸ್ತ (ನವಿಲಿನಂತೆ ಕೈಯನ್ನು ಹಿಡಿದು ತೋರಿಸುವುದು)

6. ಅರ್ಧಚಂದ್ರಹಸ್ತ (ಅರ್ಧಚಂದ್ರನಂತೆ ಕೈಯನ್ನು ಹಿಡಿದು ತೋರಿಸುವುದು)

7. ಅರಾಲಹಸ್ತ (ಕೈಯನ್ನು ಸೊಟ್ಟವಾಗಿ ಹಿಡಿದು ತೋರಿಸುವುದು)

8. ಶುಕತುಂಡಕಹಸ್ತ (ಗಿಳಿಯ ಕೊಕ್ಕಿನಂತೆ ಕೈಯನ್ನು ಮಾಡಿ ತೋರಿಸುವುದು) **817**

9. ಮುಷ್ಟಿಹಸ್ತ (ಅಂಗೈಯನ್ನು ಮುಚ್ಚಿ ಹಿಡಿದು ತೋರಿಸುವುದು)

10. ಶಿಖರಹಸ್ತ (ಪರ್ವತದ ತುದಿಯಂತೆ ಕೈಯನ್ನು ಹಿಡಿದು ತೋರಿಸುವುದು)

11. ಕಪಿತ್ಥಹಸ್ತ (ಬೇಲದ ಹಣ್ಣಿನಂತೆ ಕೈಯನ್ನು ಮುಚ್ಚಿ ತೋರಿಸುವುದು)

12. ಕಟಕಾಮುಖಹಸ್ತ (ಬಳೆಯಂತೆ ಕೈಯನ್ನು ಸುತ್ತಿ ಹಿಡಿದು ತೋರಿಸುವುದು)

13. ಸೂಚೀಹಸ್ತ (ಸೂಜಿಯಂತೆ ಕೈಯನ್ನು ಹಿಡಿದು ತೋರಿಸುವುದು)

14. ಪದ್ಮಕೋಶಹಸ್ತ (ಕಮಲದ ಮೊಗ್ಗಿನಂತೆ ಕೈಯನ್ನು ಮುಚ್ಚಿ ಹಿಡಿದು ತೋರಿಸುವುದು)

15. ಬಾಣಹಸ್ತ (ಬಾಣದಂತೆ ಕೈಯನ್ನು ಹಿಡಿದು ತೋರಿಸುವುದು)

16. ಸರ್ಪಶಿರೋಹಸ್ತ (ಹಾವಿನ ಹೆಡೆಯಂತೆ ಕೈಯನ್ನು ಹಿಡಿದು ತೋರಿಸುವುದು) **818**

17. ಮೃಗಶೀರ್ಷಹಸ್ತ (ಜಿಂಕೆಯ ಮುಖದಂತೆ ಕೈಯನ್ನು ಹಿಡಿದು ತೋರಿಸುವುದು)

18. ಸಿಂಹಮುಖಹಸ್ತ (ಸಿಂಹದ ಮುಖದಂತೆ ಅಂಗೈಯನ್ನು ಅಗಲವಾಗಿ ಹಿಡಿದು ತೋರಿಸುವುದು)

19. ಲಾಂಗೂಲಹಸ್ತ (ಬಾಲದಂತೆ ಕೈಯನ್ನು ಸುತ್ತಿ ಹಿಡಿದು ತೋರಿಸುವುದು)

20. ಆಲಪಲ್ಲವಹಸ್ತ (ಹರಿತಾಳಮರದ ಚಿಗುರಿನಂತೆ ಕೈಯನ್ನು ಹಿಡಿದು ತೋರಿಸುವುದು)

21. ಚತುರಹಸ್ತ (ಚೌಕಾಕಾರವಾಗಿ ಕೈಯನ್ನು ಹಿಡಿದು ತೋರಿಸುವುದು)

22. ಭ್ರಮರಹಸ್ತ (ದುಂಬಿಯಂತೆ ಕೈಯನ್ನು ತೋರಿಸುವುದು)

23. ಹಂಸಹಸ್ತ (ಹಂಸದಂತೆ ಕೈಯನ್ನು ಹಿಡಿದು ತೋರಿಸುವುದು)

24. ಹಂಸಪಕ್ಷಕಹಸ್ತ (ಹಂಸದ ರೆಕ್ಕೆಯಂತೆ ಕೈಯನ್ನು ಹಿಡಿದು ತೋರಿಸುವುದು) **819**

25. ಸಂದಂಶಹಸ್ತ (ಇಕ್ಕಳದಂತೆ ಕೈಯನ್ನು ಹಿಡಿದು ತೋರಿಸುವುದು)

26. ಮುಕುಲಹಸ್ತ (ಹೂವಿನ ಮೊಗ್ಗಿನಂತೆ ಅಂಗೈಯನ್ನು ಮುಚ್ಚಿ ತೋರಿಸುವುದು)

27. ತಾಮ್ರಚೂಡಹಸ್ತ (ನವಿಲಿನಂತೆ ಕೈಯನ್ನು ಹಿಡಿದು ತೋರಿಸುವುದು)

28. ತ್ರಿಶೂಲಹಸ್ತ (ತ್ರಿಶೂಲದಂತೆ ಕೈಯನ್ನು ಹಿಡಿದು ತೋರಿಸುವುದು)

29. ಊರ್ಣನಾಭಿಹಸ್ತ (ಜೇಡರಹುಳುವಿನಂತೆ ಕೈಯನ್ನು ಹಿಡಿದು ತೋರಿಸುವುದು)

ಇವು ಇಪ್ಪತ್ತೊಂಭತ್ತು ನಾಟ್ಯದಲ್ಲಿ ನರ್ತಕಿಯು ತೋರಿಸಬಹುದಾದ
ಅಸಂಯುತಹಸ್ತಭೇದಗಳು. **820**

### ನರ್ತಕಿಯು ಕಣ್ಣಿನಿಂದಲೇ ಅಭಿನಯಿಸಿ ತೋರಿಸಬಹುದಾದ ದೃಷ್ಟಿಭೇದಗಳು

### (ಭರತಸಂಗ್ರಹದಲ್ಲಿ)

1. ಸಮದೃಷ್ಟಿ (ಸ್ವಾಭಾವಿಕವಾಗಿ ನೋಡುವಂತಹ ನೋಟ)
2. ಪ್ರಲೋಕಿತದೃಷ್ಟಿ (ಆಸೆಯನ್ನು ಹುಟ್ಟಿಸುವಂತಹ ನೋಟ)
3. ಸ್ನಿಗ್ಧದೃಷ್ಟಿ (ಸ್ನೇಹಮಯನೋಟ)
4. ಶೃಂಗಾರಬಂಧುರದೃಷ್ಟಿ (ಪ್ರೀತಿಯನ್ನು ಉಕ್ಕೇರಿಸುವ ನೋಟ)
5. ಉಲ್ಲೋಕಿತದೃಷ್ಟಿ (ಮೇಲ್ಮುಖನೋಟ)
6. ಅದ್ಭುತದೃಷ್ಟಿ (ಅಚ್ಚರಿಹುಟ್ಟಿಸುವ ನೋಟ)
7. ತೃಪ್ತದೃಷ್ಟಿ (ತೃಪ್ತಿಹೊಂದಿದ ನೋಟ)
8. ವಿಸ್ಮಿತದೃಷ್ಟಿ (ವಿಶೇಷವಾಗಿ ನಗು ತರಿಸುವ ನೋಟ)
9. ಕರುಣಾದೃಷ್ಟಿ (ದಯೆಯಿಂದ ಕೂಡಿದ ನೋಟ) 821

179A 10. ಭಯಾನಕದೃಷ್ಟಿ (ಭಯಮಿಶ್ರಿತ ನೋಟ)
11. ವಿಷಣ್ಣದೃಷ್ಟಿ (ದುಃಖ ಸೂಚಿಸುವ ನೋಟ)
12. ಸಾಚೀದೃಷ್ಟಿ (ಏನೋ ಅಭಿಪ್ರಾಯವನ್ನು ಹೇಳುವುದನ್ನು ಸೂಚಿಸುವ ನೋಟ)
13. ವೀರರಸಾನ್ವಿತದೃಷ್ಟಿ (ವೀರರಸವನ್ನು ಹೊರಸೂಸುವ ನೋಟ)
14. ದ್ರುತಾದೃಷ್ಟಿ (ವೇಗವನ್ನು ಸೂಚಿಸುವ ನೋಟ)
15. ರೌದ್ರದೃಷ್ಟಿ (ಕಠೋರತೆಯನ್ನು (ಕೋಪವನ್ನು) ಸೂಚಿಸುವ ನೋಟ)
16. ದೂರದೃಷ್ಟಿ (ದೂರವನ್ನು ಸೂಚಿಸುವ ನೋಟ)
17. ಇಂಗಿತದೃಷ್ಟಿ (ಮನೋಭಿಪ್ರಾಯವನ್ನು ಸೂಚಿಸುವ ನೋಟ)
18. ವಿಲೋಕಿತದೃಷ್ಟಿ (ವಿಶೇಷವಾಗಿ ನೋಡುವ ನೋಟ) 822
19. ವಿತರ್ಕಿತದೃಷ್ಟಿ (ಏನನ್ನೋ ಊಹಿಸುವಂತಿರುವ ನೋಟ)
20. ಶಂಕಿತದೃಷ್ಟಿ (ಸಂದೇಹದಿಂದ ಕೂಡಿದ ನೋಟ)
21. ಅಭಿತಪ್ತದೃಷ್ಟಿ (ಎಲ್ಲ ರೀತಿಯಿಂದ ಸಂತಾಪಗೊಂಡಿರುವ ನೋಟ)
22. ಅವಲೋಕಿತದೃಷ್ಟಿ (ಎಲ್ಲವನ್ನೂ ಚೆನ್ನಾಗಿ ನೋಡುತ್ತಿರುವಂತಹ ನೋಟ)
23. ಶೂನ್ಯದೃಷ್ಟಿ (ಬರಿದಾದ ನೋಟ)

24. ಹೃಷ್ಟಾದೃಷ್ಟಿ (ಸಂತಸವನ್ನು ಹೊರಸೂಸುವ ನೋಟ)

25. ಉಗ್ರಾದೃಷ್ಟಿ (ಕೋಪವನ್ನು ಸೂಚಿಸುವ ಭೀಕರ ನೋಟ)

26. ವಿಭ್ರಾಂತದೃಷ್ಟಿ (ಭ್ರಾಂತಿಗೊಂಡಿರುವ ನೋಟ)

27. ಮೀಲಿತದೃಷ್ಟಿ (ಕಣ್ಣು ಮುಚ್ಚಿಕೊಂಡಿರುವ ನೋಟ) **823**

28. ಶಾಂತದೃಷ್ಟಿ (ಶಾಂತಿಯನ್ನು ಸೂಸುವ ನೋಟ)

29. ಸೂಚನಾದೃಷ್ಟಿ (ಏನನ್ನೋ ಸೂಚಿಸುವಂತಿರುವ ನೋಟ)

30. ಲಜ್ಜಿತಾದೃಷ್ಟಿ (ನಾಚಿಕೆಯಿಂದ ಕೂಡಿದ ನೋಟ)

31. ಮಲಿನದೃಷ್ಟಿ (ಕಲುಷಿತ ನೋಟ)

32. ತ್ರಸ್ತಾದೃಷ್ಟಿ (ಹೆದರಿರುವಂತೆ ತೋರುವ ನೋಟ)

33. ಮ್ಲಾನದೃಷ್ಟಿ (ಆಯಾಸಗೊಂಡ ನೋಟ)

34. ಮುಕುಲದೃಷ್ಟಿ (ಹೂವಿನ ಮೊಗ್ಗಿನಂತೆ ಮುಚ್ಚಿಕೊಂಡಿರುವ ನೋಟ)

35. ಆಕುಂಚಿತದೃಷ್ಟಿ (ಸಂಕೋಚಗೊಂಡ ನೋಟ)

36. ವಿಪ್ಲುತದೃಷ್ಟಿ (ಮನಸ್ಸು ಹೊಯ್ದಾಡಿಸುತ್ತಿರುವಂತೆ ತೋರಿಸುವ ನೋಟ) **824**

37. ಅನುವೃತ್ತದೃಷ್ಟಿ (ಒಪ್ಪಿಗೆಯನ್ನು ಸೂಸುವ ನೋಟ)

38. ಅರ್ಧಮುಕುಲಾದೃಷ್ಟಿ (ಹೂವಿನ ಮೊಗ್ಗು ಅರ್ಧ ಮುಚ್ಚಿರುವಂತೆ ತಿಳಿಸುವ ನೋಟ)

39. ಜಿಹ್ಮಾದೃಷ್ಟಿ (ಕಪಟ ನೋಟ)

40. ಆಕಾಶದೃಷ್ಟಿ (ಆಕಾಶದ ಕಡೆ ನೋಡುವ ನೋಟ)

41. ವಿಕೋಶದೃಷ್ಟಿ (ವಿಶೇಷವಾಗಿ ಹೊಳೆಯುವ ನೋಟ)

42. ಮದಿರಾದೃಷ್ಟಿ (ಮದ್ಯಪಾನ ಮಾಡಿದಾಗ ಆಗುವ ಕೆಂಪಾದ, ಮತ್ತುಳ್ಳ ನೋಟ)

43. ಹೃದ್ಯಾದೃಷ್ಟಿ (ಸಂತಸ ನೋಟ)

44. ಲಲಿತಾದೃಷ್ಟಿ (ಕೋಮಲ ನೋಟ) **825**

ಹೀಗೆ ಈ ನಲವತ್ತನಾಲ್ಕು ಬಗೆಯ ನೋಟಗಳು ನರ್ತಕಿಯ ನಾಟ್ಯದಲ್ಲಿ ಕಣ್ಣುಸನ್ನೆಯ ಅಭಿನಯದಿಂದಲೇ ತೋರಿಸಬಹುದಾದ ನೋಟಗಳು ಎಂಬುದಾಗಿ ಪ್ರಸಿದ್ಧವಾಗಿವೆ. **825A**

**ಶೃಂಗಾರಚೇಷ್ಟೆಗಳ ಹೆಸರುಗಳು**

**(ನಮ್ಮಿಂದ ರಚಿತವಾದ ಸಂಖ್ಯಾರತ್ನಕೋಶವ್ಯಾಖ್ಯಾನವಾದ ಪ್ರಭಾವಲಿಯಲ್ಲಿ)**

1. ಹಾವ  2. ಭಾವ  3. ಹೇಲಾ

4. ಮಾಧುರ್ಯ 5. ಕಿಲಕಿಂಚಿತ 6. ಲೀಲಾ

7. ಧೈರ್ಯ 8. ವಿಲಾಸ 9. ವಿಚ್ಛಿತ್ತಿ

10. ವಿಭ್ರಮ 826

11. ಮೋಟ್ಟಾಯಿತ 12. ಕುಟ್ಟಮಿತ 13. ಲಲಿತ

14. ಕುತೂಹಲ 15. ಬಿಬ್ಬೋಕ 16. ಚಕಿತ

17. ಹಾಸ 18. ವಿಕೃತ 827

ಎಂಬುದಾಗಿ ಕಾವ್ಯಪ್ರಕಾಶದಲ್ಲಿ ಹದಿನೆಂಟು ವಿಧವಾದ ಶೃಂಗಾರಚೇಷ್ಟೆಗಳನ್ನು ಸ್ಫುಟವಾಗಿ ತಿಳಿಸಿದ್ದಾರೆ. 827A

## ಮೃಗಾಭಿನಯಗಳ ಹೆಸರುಗಳು

### (ಸಂಖ್ಯಾರತ್ನಕೋಶವ್ಯಾಖ್ಯಾನ ಪ್ರಭಾವಳಿಯಲ್ಲಿ)

1. ಶರಭಾಭಿನಯ (ಶರಭವೆಂಬ ಪ್ರಾಣಿಯಂತೆ ತೋರಿಸುವ ಅಭಿನಯ)
2. ಧೇನುಕಾಭಿನಯ (ಹಸುವಿನಂತೆ ತೋರಿಸುವ ಅಭಿನಯ)
3. ಕರಿಣೀ ಅಭಿನಯ (ಹೆಣ್ಣು ಆನೆಯಂತೆ ತೋರಿಸುವ ಅಭಿನಯ)
4. ಗಜಾಭಿನಯ (ಆನೆಯಂತೆ ತೋರಿಸುವ ಅಭಿನಯ)
5. ಅಶ್ವಕಾಭಿನಯ (ಕುದುರೆಯಂತೆ ತೋರಿಸುವ ಅಭಿನಯ) 828
6. ಮಹಾವ್ಯಾಘ್ರಾಭಿನಯ (ದೊಡ್ಡ ಹುಲಿಯಂತೆ ತೋರಿಸುವ ಅಭಿನಯ)
7. ಪುರುಷಮೃಗಾಭಿನಯ (ಗಂಡುಜಿಂಕೆಯಂತೆ ತೋರಿಸುವ ಅಭಿನಯ)
8. ವಾನರಾಭಿನಯ (ಕೋತಿಯಂತೆ ತೋರಿಸುವ ಅಭಿನಯ)
9. ಬೈಡಲಾಭಿನಯ (ಬೆಕ್ಕಿನಂತೆ ತೋರಿಸುವ ಅಭಿನಯ)
10. ವ್ಯಾಘ್ರಾಭಿನಯ (ಸಾಮಾನ್ಯ ಹುಲಿಯಂತೆ ತೋರಿಸುವ ಅಭಿನಯ)
11. ಕಾಮಧೈನವಾಭಿನಯ (ಕಾಮಧೇನು ಹಸುವಿನಂತೆ ತೋರಿಸುವ ಅಭಿನಯ)
12. ದೈಗ್ಗಜಾಭಿನಯ (ದಿಗ್ಗಜದಂತೆ ತೋರಿಸುವ ಅಭಿನಯ) 829
13. ವಾರಾಹಾಭಿನಯ (ಹಂದಿಯಂತೆ ತೋರಿಸುವ ಅಭಿನಯ)
14. ಸರ್ವಮೃಗಾಭಿನಯ (ಎಲ್ಲ ಪ್ರಾಣಿಗಳಂತೆ ತೋರಿಸುವ ಅಭಿನಯ)

ಹೀಗೆ ನಾಟ್ಯಶಾಸ್ತ್ರದಲ್ಲಿ ಹದಿನಾಲ್ಕು ಬಗೆಯ ಪ್ರಾಣಿಗಳ ಅಭಿನಯಗಳನ್ನು ಹೇಳಲಾಗಿದೆ. 830

## ವಿಶೇಷ ಉತ್ಸವ ಕಾಲಗಳಲ್ಲಿ ಬಾರಿಸುವ ವಾದ್ಯಗಳ ಹೆಸರುಗಳು

(ನಮ್ಮಿಂದ ರಚಿತವಾದ ಸಂಖ್ಯಾರತ್ನಕೋಶದ ವ್ಯಾಖ್ಯಾನಗ್ರಂಥ ಪ್ರಭಾವಳಿಯಲ್ಲಿ)

1. ಝುರ್ಝುರೀ (ಒಂದು ಬಗೆಯ ವಾದ್ಯ)
2. ಝುಲ್ಲರೀ (ಒಂದು ಬಗೆಯ ಚರ್ಮವಾದ್ಯ)
3. ಗರ್ಭೀ (ಒಂದು ಬಗೆಯ ವಾದ್ಯ)
4. ಭೇರೀ (ದೊಡ್ಡ ಮದ್ದಲೆ)
5. ಪಟಹ (ತಮಟೆ)
6. ಕಾಹಲೀ (ಕಹಳೆ)
7. ವಿಷಾಣ (ಕೊಂಬುವಾದ್ಯ)
8. ಘಂಟಾ (ಗಂಟೆ)
9. ತಾಲ (ತಾಳಗಳು)
10. ಡಿಂಡಿಮ (ಢಿಮಕಿ ಒಂದು ಬಗೆಯ ಚರ್ಮವಾದ್ಯ) **831**
11. ಮರ್ದಲ (ಮದ್ದಲೆ)
12. ವೀರಣ (ಮಂಗಳ ಸನ್ನಿವೇಶಗಳಲ್ಲಿ ಬಾರಿಸುವ ಜೋಡು ತಮಟೆ)
13. ಶಂಖ
14. ಗೋಮುಖೀ (ಹಸುವಿನ ಮುಖದ ಆಕಾರದ ವಾದ್ಯ)
15. ಮುರಲೀ (ಕೊಳಲು)
16. ನಾಗಸ್ವರ (ಓಲಗ)
17. ಪಣವ (ಒಂದು ಬಗೆಯ ಚರ್ಮವಾದ್ಯ)
18. ಚಿತ್ರಿಣೀ (ಒಂದು ಬಗೆಯ ತಂತಿ ವಾದ್ಯ)
19. ಜಯಕಾಹಲೀ (ಜಯದ ಸಮಯದಲ್ಲಿ ಊದುವ ಕಹಳೆ) **832**

ಹೀಗೆ ಇವು ವಿಶೇಷ ಉತ್ಸವ ಕಾಲಗಳಲ್ಲಿ ಬಾರಿಸಲಾಗುವ ಹತ್ತೊಂಬತ್ತು ಬಗೆಯ ವಾದ್ಯಗಳು ಪರಿಗಣಿತವಾಗಿವೆ. ಇವುಗಳನ್ನು ಶ್ರೇಷ್ಠ ಜ್ಞಾನಿಗಳು ಶ್ರೀನಾರಾಯಣಸಂವಾದದಲ್ಲಿ ತಿಳಿಯಬೇಕು. **833**

## ನರ್ತಕಿಯ ಕಾಲ್ಗೆಜ್ಜೆಗಳ ಲಕ್ಷಣ

(ಭರತಶಾಸ್ತ್ರಸಂಗ್ರಹದಲ್ಲಿ)

ನರ್ತಕಿಯು ಕಾಲಿಗೆ ಕಟ್ಟಿಕೊಳ್ಳುವ ಗೆಜ್ಜೆಯ ಕಿರುಗಂಟೆಗೆ ಕಿಂಕಿಣೀ ಎಂದು ಹೆಸರು. ಇದು ಕಿಣಿ ಕಿಣಿ

ಎಂದು ಶಬ್ದ ಮಾಡುವುದರಿಂದ ಕಿಂಕಿಣೀ ಎಂದು ಹೆಸರು. ಇಂತಹ ಅನೇಕ ಕಿಂಕಿಣಿಗಳನ್ನು ಒಂದಕ್ಕೊಂದು ಹೆಣೆದು ತಯಾರಿಸಿದ ಕಾಲಿಗೆ ಕಟ್ಟಿಕೊಳ್ಳುವ ಕಿರುಗಂಟೆಯ ಸಮೂಹಕ್ಕೆ ಗೆಜ್ಜೆ ಎಂದು ಹೆಸರು. ಅದರ ಲಕ್ಷಣವನ್ನು ಇನ್ನು ಮುಂದೆ ಹೇಳಲಾಗುತ್ತದೆ.

ಒಂದು ಕಿರುಗಂಟೆಯು ಅಥವಾ ಕಿರುಗೆಜ್ಜೆಯು ಒಂದೂವರೆ ಗೋಧಿಕಾಳಿನಷ್ಟು ಪ್ರಮಾಣವಿರಬೇಕು. ಇಂತಹ ಕಿರುಗೆಜ್ಜೆಯನ್ನು ಓತಪ್ರೋತವಾಗಿ ಅಂದರೆ ಹಾಸುಹೊಕ್ಕಾಗಿ ಒಂದಕ್ಕೊಂದು ಹೆಣೆದಿರಬೇಕು. ಇದರ ಮಧ್ಯೆ ಒಂದು ಗೋಧಿಕಾಳಿನ ಪ್ರಮಾಣದಷ್ಟು ಡೊಂಕಾಗಿರಬೇಕು. ಇದಕ್ಕೆ ಜಿಂಹಿಕಾ ಎಂದು ಹೆಸರು. ಇದು ಗುಂಡಾಗಿರಬೇಕು. 834

ಇದರ ಮೇಲೆ ಸಣ್ಣ ತೂತಿರಬೇಕು. ಇದಕ್ಕೆ ಕಿಂಕಿಣೀ ಎಂದು ಹೆಸರು. 835

ಕಿಂಕಿಣಿಯಲ್ಲಿ ನಾಲ್ಕು ಕೋಣಗಳಿರಬೇಕು. ತುದಿಯಲ್ಲಿ ಗುಂಡಾಗಿರಬೇಕು. ಏಳು ಕೋಣ, ನಾಲ್ಕು ಕೋಣ, ಒಂದು ಕೋಣ ಹೀಗೆ ಬೇರೆ ಬೇರೆ ಕೋಣಗಳಿರಬಹುದು. 836

ರಂಭಾ ಮೊದಲಾದ ಅಪ್ಸರಸ್‌ಸ್ತ್ರೀಯರ ಗೆಜ್ಜೆಗಳಲ್ಲಿ ಏಳು ಕೋಣಗಳು ಅಥವಾ ಒಂದು ಕೋಣವು ಕಂಡುಬರುತ್ತದೆ. ಕಿಂಕಿಣಿಯನ್ನು ಚಿನ್ನದಿಂದಾಗಲಿ, ತಾಮ್ರದಿಂದಾಗಲಿ, ಬೆಳ್ಳಿಯಿಂದಾಗಲಿ, 837

ಅಥವಾ ಹಿತ್ತಾಳೆಯಿಂದಲಾಗಲಿ ಮಧ್ಯೆ ತೂತಿರುವಂತೆ ತಯಾರು ಮಾಡಬೇಕು. ಇದರ ಒಳಗೆ ಗುಳಿಗೆಯಾಕಾರ ಸಣ್ಣ ಉಂಡೆಯಿರಬೇಕು (ಇದರಿಂದ ಶಬ್ದವು ಕೇಳಿಸುತ್ತದೆ). ಒಂದೊಂದು ಕಿಂಕಿಣಿಯು ಒಳ್ಳೆಯ ಶಬ್ದವನ್ನು ಮಾಡುವಂತಿರಬೇಕು. ಸುಂದರ ಆಕಾರವಿರಬೇಕು. ಸೂಕ್ಷ್ಮವಾಗಿರಬೇಕು. ನಕ್ಷತ್ರಾಕಾರದಲ್ಲಿರಬೇಕು. ಈ ಕಿಂಕಿಣಿಯ ಮೇಲೆ ದಾರವನ್ನು ಪೋಣಿಸಿ ಕಟ್ಟಲು ಅನುಕೂಲವಾಗುವಂತೆ ರಂಧ್ರಾಕಾರದ ಬಳೆ ಇರಬೇಕು. 838

ಇದು ಕಿಂಕಿಣಿಯ ಮೇಲ್ಭಾಗದಲ್ಲಿ ಬೆಸೆಯಲ್ಪಟ್ಟಿರಬೇಕು. ಇಂತಹ ನೂರು ಅಥವಾ ಇನ್ನೂರು ಕಿರುಗಂಟೆಗಳನ್ನು ನೀಲಿನ ಅಥವಾ ಕಪ್ಪುದಾರದಿಂದ ಗಂಟು ಹಾಕಿ ಕಟ್ಟಬೇಕು. ಹೀಗೆ ಒಂದಕ್ಕೊಂದು ಹಾಸುಹೊಕ್ಕಾಗಿ ಕಟ್ಟಲ್ಪಟ್ಟ ಕಿಂಕಿಣಿಯ ಸಮೂಹಕ್ಕೆ ಕಿರುಗೆಜ್ಜೆ ಎಂದು ಕರೆಯುತ್ತಾರೆ. ನಾಟ್ಯ ಮಾಡುವಾಗ ಇಂತಹ ಕಿರುಗೆಜ್ಜೆಗಳನ್ನು ಎರಡು ಕಾಲುಗಳಿಗೂ ಕಟ್ಟಿಕೊಳ್ಳಬೇಕು. 839

179B ಕಿಂಕಿಣಿಯ ಮುಖದಲ್ಲಿ ವಾಣಿಯು, ಮಧ್ಯದಲ್ಲಿ ಕಮಲದಲ್ಲಿ ವಾಸಿಸುವ ಲಕ್ಷ್ಮಿಯು, ಪ್ರಾರಂಭದಲ್ಲಿ ಶಂಕರನಿಗೆ ಆನಂದವನ್ನು ನೀಡುವ ಗಿರಿಜೆಯು ವಾಸಿಸುತ್ತಾರೆಂದು ಹೇಳಿದ್ದಾರೆ. 840

ಆದ್ದರಿಂದ ಎಲ್ಲ ರೀತಿಯ ಪ್ರಯತ್ನದಿಂದಲೂ, ವಾದ್ಯದಲ್ಲಿ ನೃತ್ಯದಲ್ಲಿ ವಿಶೇಷವಾದ ನಾಟ್ಯಶಾಸ್ತ್ರ ವಿಶಾರದನು ಕಾಲುಗಳ ಬುಡದ ಮಣಿಬಂಧಗಳಲ್ಲಿ ಅದರ ಗಂಟುಗಳಿರುವ ಭಾಗದಲ್ಲಿ ಕಟ್ಟಿ-ಕೊಳ್ಳಬೇಕು. 841

## ಕಿಂಕಿಣಿಯನ್ನು ಕಾಲಿಗೆ ಕಟ್ಟಿಕೊಳ್ಳುವ ಕ್ರಮ

## ಕಟ್ಟಿಕೊಳ್ಳುವ ಮೊದಲಿಗೆ ಪ್ರಾರ್ಥನೆ

ವಾಣೀ-ಲಕ್ಷ್ಮೀ-ಗಿರಿಜೆಯರನ್ನು ವಾಸದೇವತೆಯರನ್ನಾಗಿ ಉಳ್ಳ, ನೀಲಿಯ ದಾರದಿಂದ ಕಟ್ಟಲ್ಪಟ್ಟಿರುವ, ನೂರು ಗಂಟುಗಳಿಂದ ಬಿಗಿಯಲಾಗಿರುವ ಕಿಂಕಿಣಿಯನ್ನು ನಾನು ನಮಸ್ಕರಿಸುತ್ತೇನೆ. **842**

ಎರಡು ನೂರು ಗಂಟುಗಳಿಂದ ಕಟ್ಟಲ್ಪಟ್ಟಿರುವ ಕಿರುಗೆಜ್ಜೆಗಳನ್ನು ಸಮವಾಗಿ ಕಾಲುಗಳಿಗೆ ಕಟ್ಟಿಕೊಂಡು ಮೊದಲಿಗೆ ದೇವತೆಯನ್ನು ಧ್ಯಾನಿಸಿ ನಂತರ ರಂಗಕ್ಕೆ ನಮಸ್ಕರಿಸಿ ರಂಗಮಂಚವನ್ನು ಪ್ರವೇಶಿಸಬೇಕು. **843**

## ಮೃದಂಗನಿರ್ಮಾಣಕ್ರಮ ಮತ್ತು ಅದರ ಲಕ್ಷಣ

### (ಶಿವತತ್ತ್ವರತ್ನಾಕರದಲ್ಲಿ)

ನೃತ್ಯವಿದ್ಯೆಗೆ ಉಪಯೋಗಿಯಾದ, ಮದ್ದಲೆ (ಮೃದಂಗ) ಎಂಬ ಹೆಸರಿನ ವಾದ್ಯದ, ಶಾಸ್ತ್ರಸಮ್ಮತವಾದ ಲಕ್ಷಣವನ್ನು ಈಗ ಚೆನ್ನಾಗಿ ವರ್ಣಿಸಲಾಗುತ್ತದೆ. **844**

ಬ್ರಾಹ್ಮಣಜಾತಿಯವರಿಗೆ ಶ್ರೀಗಂಧದ ಮರದಿಂದ ಮಾಡಿದ ಮೃದಂಗ, ಕ್ಷತ್ರಿಯರಿಗೆ ಕೆಂಪು ಚಂದನದ ಮರದಿಂದ ಮಾಡಿದ ಮೃದಂಗ, ವೈಶ್ಯಜಾತಿಯವರಿಗೆ ಕಗ್ಗಲಿಮರದಿಂದ ಮಾಡಿದ ಮೃದಂಗ, ಬೇರೆಯ ಜಾತಿಯವರಿಗೆ ಬೇರೆ ಮರಗಳಿಂದ ಮಾಡಿದ ಮೃದಂಗವನ್ನು (ಬಳಸಬೇಕೆಂದು ಸಂಗೀತಜ್ಞರು ಹೇಳಿದ್ದಾರೆ.) **845**

## ಮೃದಂಗಕ್ಕಾಗಿ ಉಪಯೋಗಿಸಬಾರದ ಮರಗಳು

ನೀರಸವಾದ (ಒಣಗಿ ಹೋದ), ಉಪ್ಪು ಮಣ್ಣಿನ ಭೂಮಿಯಲ್ಲಿ ಬೆಳೆದ, ಜೀರ್ಣವಾದ ಅಂದರೆ ಶಿಥಿಲವಾದ ಅಥವಾ ಹಾಳಾದ, ಗಾಳಿಯ ಹೊಡೆತಕ್ಕೆ ಉರುಳಿಬಿದ್ದ, ತುಂಬಾ ಚೂರು-ಚೂರಾಗಿರುವ, ಒಳಭಾಗದಲ್ಲಿ ಸುತ್ತಲೂ ಸೀಳಿಹೋದ ಮರಗಳಿಂದ ಮೃದಂಗವನ್ನು ತಯಾರಿಸಬಾರದು. ಇಂತಹ ಮರಗಳು ಮೃದಂಗ ನಿರ್ಮಾಣಕ್ಕೆ ಬೇಡದ ಮರಗಳು. **846**

ಕೊಬ್ಬಿನಿಂದ ತುಂಬಿರುವ, ಅತ್ಯಂತ ಹಳೆಯದಾದ, ಚೂರು ಚೂರಾಗಿರುವ, ಕಾಗೆಗಳ ಕೊಕ್ಕುಗಳಿಂದ ಕುಕ್ಕಲ್ಪಟ್ಟ, ಬೆಂಕಿಯಿಂದ ಸುಟ್ಟುಹೋದ, ಹೊಗೆಯಿಂದ ಕಪ್ಪಾಗಿರುವ, ಜೀರ್ಣವಾದ ಚರ್ಮವನ್ನು ಮೃದಂಗವನ್ನು ತಯಾರಿಸಲು ಉಪಯೋಗಿಸಬಾರದು. ಇಂತಹ ಚರ್ಮವು ಮೃದಂಗ ತಯಾರಿಕೆಯಲ್ಲಿ ನಿಷಿದ್ಧವಾಗಿದೆ. **847**

## ಮೃದಂಗನಿರ್ಮಾಣಕ್ರಮ

ಯಾವುದೇ ತರಹದ ದೋಷವಿಲ್ಲದ ಮರದಿಂದ ಉತ್ತಮವಾದ ಮೃದಂಗವು ತಯಾರಿಸಲ್ಪಡುತ್ತದೆ. ಮೃದಂಗದ ಮಧ್ಯಭಾಗದ ಅಂತರ ಇಪ್ಪತ್ತೊಂದು ಅಂಗುಲ ಪರಿಮಿತಿಯಿರಬೇಕು. **848**

ಅದರ ಎಡಭಾಗದ ಮುಖವು ಹದಿನಾಲ್ಕು ಅಂಗುಲ ವಿಸ್ತಾರವಿರುವಂತೆ ರಚಿಸಬೇಕು. ಬಲಭಾಗದ ಮುಖವು ಹದಿಮೂರು ಅಂಗುಲ ವಿಸ್ತಾರವಿರಬೇಕು. ಇವುಗಳ ಮಧ್ಯೆ ಭಾಗದ ಗೋಳವು ಅರ್ಧ ಅಂಗುಲ ವಿಸ್ತಾರವಿರಬೇಕು. **849**

ಮೃದಂಗದ ಎರಡು ಕಡೆಯ ಬಾಯಿಗಳ ಚರ್ಮವು ಒಂದು ಅಂಗುಲಕ್ಕಿಂತಲೂ ಹೆಚ್ಚು ದಪ್ಪನಾಗಿರುವಂತೆ ಮಾಡಿರಬೇಕು. ಇವೆರಡರ ತುದಿಗಳಲ್ಲಿ ಸುತ್ತಲೂ ಇಪ್ಪತ್ತನಾಲ್ಕು ತೂತುಗಳನ್ನು ಬೇರೆ ಬೇರೆಯಾಗಿ ಮಾಡಬೇಕು. **850**

ಈ ತೂತುಗಳ ಒಂದೊಂದು ತೂತಿಗೂ ಮತ್ತೊಂದು ತೂತಿಗೂ ಮಧ್ಯೆ ಒಂದೊಂದು ಅಂಗುಲ ಅಂತರವಿರಬೇಕು. ಬಲಭಾಗದಿಂದ ಆರಂಭಿಸಿ ತೂತುಗಳಲ್ಲಿ ಕ್ರಮವಾಗಿ ಗಟ್ಟಿಯಾದ ನೂಲನ್ನು ತೂರಿಸಬೇಕು. **851**

ಮೃದಂಗ ಮಧ್ಯದಲ್ಲಿ ಮೂರು ನೂಲಿಗಳಿಂದ ಹೊಲಿದು ಕಟ್ಟಬೇಕು. **852**

ಗೋಮೂತ್ರಿಕಾಬಂಧದಂತೆ ಎರಡೆರಡು ಗಂಟುಗಳನ್ನು ಹಾಕಿ ಕಟ್ಟಬೇಕು. ತುದಿಯಲ್ಲಿ ಒಳಗಡೆ ಕಟ್ಟಿಗಾಗಿ ಎರಡೆರಡು ಗುಂಡಗಿರುವ ಕಟ್ಟನ್ನು ಹಾಕಬೇಕು. **853**

ಒಳಗಿನ ಗಂಟನ್ನು ಹಾಗೇ ಬಿಟ್ಟು, ಎಡಗಡೆ ಮತ್ತೆ ಎರಡೆರಡು ಗಂಟನ್ನು ಹಾಕಬೇಕು. ತುದಿಯಲ್ಲಿ ಎರಡು ಅಂಗುಲದ ಕಟ್ಟನ್ನು ಗಟ್ಟಿಯಾಗಿ ಹಾಕಬೇಕು. **854**

ಭಸ್ಮಮಿಶ್ರಿತವಾದ ಮತ್ತೆ ಮತ್ತೆ ಗಟ್ಟಿಸಿ ಹದ ಮಾಡಿ ಮೃದುವಾದ ಕೊಬ್ಬಿನಿಂದ ಅದರ ಎಡಭಾಗದ ಮುಖವನ್ನು ಉಜ್ಜಬೇಕು. **855**

ಹಾಗೆಯೇ ಅದರ ಬಲಭಾಗದ ಮುಖಕ್ಕೆ ಪೂರಿಯಂತೆ ಗುಂಡಗೆ ಮಾಡಿರುವ ಕೊಬ್ಬನ್ನು ಅಥವಾ ಜೇನುಮೇಣವನ್ನು ತೆಗೆದುಕೊಂಡು ಲೇಪಿಸಬೇಕು. **856**

ಇದರಿಂದ ಮೃದಂಗದ ನಾದವು ಮನೋಹರವಾಗುತ್ತದೆ. ಮೃದಂಗದ ಎರಡು ಮುಖದಲ್ಲೂ ಬಡಿದು, ನನ ಎಂದು ಎರಡು ಬಾರಿ ಶಬ್ದ ಮಾಡಿ ಎಡಗಡೆ ಗಿಡದಾಂ ಎಂದು ಬಲಗಡೆ ಗಡದಾಂ ಎಂಬ ಶಬ್ದ ಬರುವಂತೆ ರಚಿಸಬೇಕು. ಈ ರೀತಿ ಹಿಂದೆ ಹೇಳಿದ ರೀತಿಯಲ್ಲಿ ಮೃದಂಗವನ್ನು ರಚಿಸಬೇಕು. **857-858**

ಹಿಂದೆ ಭಕ್ತವತ್ಸಲನಾದ ಭಗವಂತನಾದ ಶ್ರೀಹರಿಯು ಮುರನೆಂಬ ರಾಕ್ಷಸನನ್ನು ಕೊಂದು ಅವನ ದೇಹವನ್ನು ತೆಗೆದುಕೊಂಡು ಭೂಲೋಕದಲ್ಲಿ ಮದ್ದಲೆಯನ್ನು (ಮೃದಂಗವನ್ನು) ರಚಿಸಿದನು. **859**

### ಮೃದಂಗವನ್ನು ಧರಿಸಿದವನ ಲಕ್ಷಣ

(ಭರತಸಂಗ್ರಹದಲ್ಲಿ)

**180A** ಶ್ರಮವನ್ನು ಗೆದ್ದವನು, ತಾಳಶಾಸ್ತ್ರದಲ್ಲಿ ನಿಪುಣನು, ಸದಾಕಾಲ ತಾಳವಾದ್ಯ ವಾದನದಲ್ಲಿ ಜಯಶಾಲಿಯಾಗುವವನು, ಒಂದೆಡೆ ಸ್ಥಿರವಾಗಿ ಇರುವ ಸ್ಥಾವರವಾದ್ಯಾದಿಗಳೊಡನೆ ನುಡಿಸಲು ಸಮರ್ಥನಾದವನು, ಶ್ರುತಿಮೇಳಗಳಲ್ಲಿ ಚತುರನಾದವನು, ಸಂಗೀತ ಹಾಗೂ ನೃತ್ತಗಳಿಗೆ ಅನುಕೂಲವಾಗುವಂತೆ ಬಾರಿಸುವವನು ಯಾರಿದ್ದಾನೋ ಅವನೇ ಉತ್ತಮನಾದ ಮೃದಂಗವಾದಕನಾಗುವನು. **860-860A**

### ಮೃದಂಗವನ್ನು ಧರಿಸುವ ಕಾಲದಲ್ಲಿ ಮಾಡುವ ಪ್ರಾರ್ಥನೆ

(ಭರತಸಂಗ್ರಹದಲ್ಲಿ)

ಸದಾ ಕಾಲ ಚಂಡೀಶನನ್ನು ಆನಂದಗೊಳಿಸುವ, ನಂದಿಕೇಶ್ವರನನ್ನು ದೇವತೆಯನ್ನಾಗಿ ಉಳ್ಳ. ತದ್ಧಿದ್ಧಾ ಮುಂತಾದ ಸ್ವರಾದಿಗಳಿಗೆ ಅಂಗವಾದ ಮೃದಂಗವನ್ನು ನಾನು ನಮಸ್ಕರಿಸುತ್ತೇನೆ. **861**

### ತಾಳವನ್ನು ನಿರ್ಮಿಸುವ ಕ್ರಮ

(ಶಿವತತ್ತ್ವರತ್ನಾಕರದಲ್ಲಿ)

ತಾಳಗಳು ಹಿತ್ತಾಳೆಯಿಂದ ಮಾಡಲ್ಪಟ್ಟಿರುತ್ತವೆ. ಒಂದರ ಮೇಲೆ ಇನ್ನೊಂದನ್ನು ಹೊಡೆಯುವುದರಿಂದ ಇವು ಎರಡು ಇರುತ್ತವೆ. ಇವು ಮೂರು ಅಂಗುಲ ಉದ್ದವನ್ನು ಹೊಂದಿರುತ್ತವೆ. ಇವೆರಡು ಸುತ್ತಲೂ ಗುಂಡಾಗಿದ್ದು ಮಧ್ಯಭಾಗದಲ್ಲಿ ಒಂದು ಅಂಗುಲದಷ್ಟು ತಗ್ಗಾಗಿರುತ್ತವೆ. **862**

ಮಧ್ಯದಲ್ಲಿ ಗುಲಗಂಜಿಯಷ್ಟು ಪ್ರಮಾಣದ ತೂತು ಇರುತ್ತದೆ. ಒಳಭಾಗದ ವಿಸ್ತಾರವು ಎರಡು ಅಂಗುಲವಿರುತ್ತದೆ. ಗೋಧಿಯಾಕಾರದ ಒಂದಕ್ಕೊಂದು ಸಮನಾದ ಸಣ್ಣ ಉಂಡೆಗಳನ್ನು ಮಾಡಿಕೊಂಡು, ತಾಳಗಳ ತೂತುಗಳಲ್ಲಿ ರೇಷ್ಮೆಬಟ್ಟೆಯ ತುದಿಯನ್ನು ಹಗ್ಗದಂತೆ ಪೋಣಿಸಿ, ತುದಿಯಲ್ಲಿ ಈ ಉಂಡೆಗಳನ್ನು ಕಟ್ಟಬೇಕು. ಎರಡೂ ತುದಿಗಳಲ್ಲಿ ಈ ದಾರದ ಗಂಟುಗಳು ಹೊರಬರದ ಹಾಗೆ ತುದಿಯಲ್ಲಿ ಗಂಟು ಹಾಕಬೇಕು. **863-864**

ಎಡಗೈನ ತೋರುಬೆರಳನ್ನು ಹೆಬ್ಬೆರಳಿನ ಜೊತೆ ಸೇರಿಸಿ ಅಡ್ಡಲಾಗಿ ತಾಳದ ಗಂಟನ್ನು ಹಿಡಿದುಕೊಂಡು, ಕನಿಷ್ಠಿಕಾ ಮತ್ತು ಅನಾಮಿಕಾ ಬೆರಳುಗಳನ್ನು ಚಾಚಬೇಕು. ಮೇಲಿನ ತಾಳದ ಗಂಟನ್ನೂ ಸಹ

ತೋರುಬೆರಳು ಹೆಬ್ಬೆರಳುಗಳಿಂದ ಹಿಡಿದು ಎಡಗೈನ ತಾಳದ ಮೇಲೆ, ಬಲಗೈನ ತಾಳವನ್ನು ಹೊಡೆಯಬೇಕು.

**865-866**

ಲಘು-ಗುರು ಮೊದಲಾದ ಬೇರೆ ಬೇರೆಯದಾದ ಅನೇಕ ಭಂಗಿಗಳಿಂದ ಹಿತ್ತಾಳೆಯ ಎರಡು ತಾಳಗಳನ್ನು ಈ ಮೇಲೆ ಹೇಳಿದ ಕ್ರಮದಲ್ಲಿ ಶಾಸ್ತ್ರದಲ್ಲಿ ಹೇಳಿರುವಂತೆ ಬಳೆಯಂತೆ ಮಾಡಿಕೊಂಡ ಮುಂಗೈನಿಂದ ತಾಳವನ್ನು ಹಿಡಿದವನು ಹೊಡೆಯಬೇಕು. **867-868A**

## ತಾಳಧಾರಕನ ಲಕ್ಷಣ

### (ಭರತಸಂಗ್ರಹದಲ್ಲಿ)

ತಾಳಗಳನ್ನು ಹಿಡಿದು ಹೊಡೆಯುವವನು ತಾಳಗಳ ಬಗ್ಗೆ ಚೆನ್ನಾಗಿ ಬಲ್ಲವನಾಗಿರಬೇಕು. ಬಹು ಬೇಗ ಕೈನಿಂದ ತಾಳಗಳನ್ನು ಹೊಡೆಯುವಂತೆ ಕೈಯನ್ನು ಬೇಗನೆ ಚಲಿಸುವಂತೆ ಮಾಡುವನಾಗಿರಬೇಕು. ಧ್ವನಿಯ ಗತಿ ವಿಶೇಷಗಳಲ್ಲಿ ತುಂಬಾ ವಿಚಕ್ಷಣನಾಗಿರಬೇಕು. ನೃತ್ತಗೀತವಾದ್ಯಗಳೆಂಬ ನಾಟ್ಯಾಂಗಗಳಾದ ತೌರ್ಯತ್ರಿಕಗಳನ್ನು ವಿಶೇಷವಾಗಿ ತಿಳಿದವನಾಗಿರಬೇಕು. ಎಲ್ಲ ಭಾಷೆಗಳನ್ನು ಆಡುವುದರಲ್ಲಿ ವಿಶಾರದನಾಗಿರಬೇಕು. ಶುದ್ಧತಾಳಗಳು, ದೇಶೀತಾಳಗಳು ಮೊದಲಾದ ತಾಳಭೇದಗಳಲ್ಲಿ ವಿಶೇಷ ತಿಳಿವಳಿಕೆಯನ್ನು ಪಡೆದವನಾಗಿರಬೇಕು. ಜೊತೆಗೆ ಅವುಗಳಿಗೆ ಸಂಬಂಧಿಸಿದ ನೃತ್ತಪ್ರಕಾರಗಳಲ್ಲೂ ವಿಶೇಷ ಅರಿವನ್ನು ಅವನು ಹೊಂದಿರಬೇಕು. **868B-869**

ಅವನ ಕೈಗಳು ಪಾತಾಕ್ಷರಗಳಲ್ಲಿ ಮಗ್ನವಾಗಿರಬೇಕು. ಅವನ ಮುಖಕಮಲವು ಪ್ರಸನ್ನವಾಗಿರಬೇಕು. ಬೆವರು ಮುಂತಾದವುಗಳು ಬರದಂತೆ ದೃಢಕಾಯನಾಗಿರಬೇಕು. ಇಂತಹ ತಾಳಧಾರಕನು ಕುಶಲನಾದ ತಾಳಧಾರಕನೆನಿಸುತ್ತಾನೆ. **870**

## ತಾಳಗಳನ್ನು ಹಿಡಿಯುವ ಕಾಲದಲ್ಲಿ ಮಾಡುವ ಪ್ರಾರ್ಥನೆ

### (ಇದೇ ಭರತಸಂಗ್ರಹದಲ್ಲಿ)

ಬ್ರಹ್ಮ-ವಿಷ್ಣು-ಮಹೇಶ್ವರ-ನಾರದ-ಅಗ್ನಿಯರನ್ನು ದೇವತೆಗಳನ್ನಾಗಿ ಉಳ್ಳ ಶಿವ-ಶಕ್ತಿಯರಿಬ್ಬರ ಸ್ವರೂಪವಾದ ಕಂಚಿನ ತಾಳಗಳೆರಡನ್ನು ನಾನು ನಮಿಸುತ್ತೇನೆ. **871**

## ರಾಗಗಳನ್ನು ಆಲಾಪನೆ ಮಾಡುವ ಕಾಲಗಳು

## ಸೂರ್ಯೋದಯದಿಂದ ಪ್ರಾರಂಭಿಸಿಕೊಂಡು ಮರುದಿನ ಸೂರ್ಯೋದಯವಾಗುವವರೆಗೂ ಹಾಡಬೇಕಾದ ರಾಗಗಳ ಹೆಸರುಗಳು

### (ಸಂಗೀತರತ್ನಾಕರದಲ್ಲಿ ಮತ್ತು ಸಂಗೀತಸಂಗ್ರಹದಲ್ಲಿ)

## ಬೆಳಗಿನ ಮೊದಲಜಾವದಲ್ಲಿ ಹಾಡಬೇಕಾದ ರಾಗಗಳು

1. ಭೈರವರಾಗ 2. ಮಾಳವವೆಂಬ ಹೆಸರಿನ ರಾಗ 3. ಗೌಲರಾಗ 4. ರಾಮಕಲಿರಾಗ 5. ಮಲ್ಹರಿ ಎಂಬ ಹೆಸರಿನ ರಾಗ 6. ಗುಂಡಕ್ರಿಯಾ ಎಂಬ ಹೆಸರಿನ ರಾಗ 7. ಘೂರ್ಜರಿ ಎಂಬ ಹೆಸರಿನ ರಾಗ

**872**

8. ಬಿಲ್ಹರಿ ರಾಗ 9. ಜೋಗಿ ಸಾವೇರಿ ರಾಗ 10. ಪಂತುವರಾಲಿಕಾ ರಾಗ 11. ಮಂಗಲಕೌಶಿಕೀ ಎಂಬ ಹೆಸರಿನ ರಾಗ 12. ವರಾಲಿಕಾ ರಾಗ **873**

13. ಅಸಾವೇರಿ ರಾಗ 14. ಸಾವೇರಿ ರಾಗ - ಈ ರಾಗಗಳನ್ನು ಬೆಳಿಗ್ಗೆ ಸೂರ್ಯೋದಯದಿಂದ ಆರಂಭಿಸಿಕೊಂಡು ಬೆಳಗಿನ ಮೊದಲ ಯಾಮದಲ್ಲಿ ಕ್ರಮವಾಗಿ ಒಂದು ಪ್ರಹರಕಾಲ (ಮೂರು ಗಂಟೆಗಳ ಕಾಲ) ಹಾಡಬೇಕು. **874**

## ಬೆಳಗಿನ ಎರಡನೆಯ ಜಾವದಲ್ಲಿ ಹಾಡಬೇಕಾದ ರಾಗಗಳು

1. ಶುದ್ಧಸಾವೇರಿ ರಾಗ 2. ತೋಡೀರಾಗ 3. ಸಾರಂಗವೆಂಬ ಹೆಸರಿನ ರಾಗ 4. ಬೃಂದಾವನ ಸಾರಂಗ ರಾಗ 5. ಮಧ್ಯಮಾವತೀರಾಗ **875**

6. ಶ್ರೀರಾಗ 7. ಮಣಿರಂಗು ರಾಗ 8. ವಸಂತವೆಂಬ ಹೆಸರಿನ ರಾಗ 9. ವಸಂತಭೈರವೀ ರಾಗ 10. ಅಠಾಣಾ ರಾಗ 11. ಸುರಟಿ ರಾಗ - ಇವುಗಳನ್ನು ಬೆಳಗಿನ ಎರಡನೆಯ ಜಾವದಲ್ಲಿ ಮಧ್ಯಾಹ್ನದವರೆಗೆ ಕ್ರಮವಾಗಿ ಹಾಡುವ ರಾಗಗಳೆಂದು ಸಂಗೀತ ಚತುರರಿಂದ ತಿಳಿಯಲ್ಪಡಬೇಕು. **876-876A**

**180B**

## ಬೆಳಗಿನ ಮೂರನೆಯ ಜಾವದಲ್ಲಿ ಹಾಡುವ ರಾಗಗಳು

1. ಭೈರವೀ ರಾಗ 2. ಆನಂದಭೈರವೀ ರಾಗ 3. ಹುಶೇನೀ ಎಂಬ ಹೆಸರಿನ ರಾಗ 4. ನೀಲಾಂಬರೀ ಎಂಬ ಹೆಸರಿನ ರಾಗ **877**

5. ಕಾಂಭೋಜಿ ರಾಗ 6. ಯದುಕುಲ ಕಾಂಭೋಜೀ ರಾಗ 7. ರೀತಿಗೌಲಕರಾಗ 8. ಕೇತಾರಗೋಲಕರಾಗ 9. ಶಂಕರಾಭರಣವೆಂಬ ರಾಗ **878**

10. ನವರೋಜರಾಗ 11. ಕೇತಾರರಾಗ ಇವುಗಳನ್ನು ಬೆಳಗಿನ ಮೂರನೆಯ ಜಾವದಲ್ಲಿ ಒಂದು ಪ್ರಹರಕಾಲ ಕ್ರಮವಾಗಿ ಹಾಡತಕ್ಕದ್ದು. **879**

## ಬೆಳಗಿನ ನಾಲ್ಕನೆಯ ಜಾವದಲ್ಲಿ ಹಾಡುವ ರಾಗಗಳು

1. ಕಲ್ಯಾಣೀರಾಗ 2. ಮುಖಾರೀ ರಾಗ 3. ಸೌರಾಷ್ಟ್ರವೆಂಬ ಹೆಸರಿನ ರಾಗ 4. ಧನಾಸರೀ ಎಂಬ ಹೆಸರಿನ ರಾಗ 5. ದರಬಾರು ಎಂಬ ಹೆಸರಿನ ರಾಗ **880**

6. ಕಾಪೀ ರಾಗ 7. ಶಾಹನವೆಂಬ ಹೆಸರಿನ ರಾಗ 8. ದ್ವಿಜಾವಂತೀ ಎಂಬ ಹೆಸರಿನ ರಾಗ 9. ನಾಟೀ ಕುರಂಜವೆಂಬ ಹೆಸರಿನ ರಾಗ 10. ನಾಯಕೀ ರಾಗ **881**

11. ನಾಟೀ ರಾಗ 12. ಗೌರೀ ರಾಗ 13. ಪಾರ್ವೀ ಎಂಬ ಹೆಸರಿನ ರಾಗ 14. ಯಮುನಾ ಎಂಬ ಹೆಸರಿನ ರಾಗ 15. ಗೌಲಪಂತುರಾಗ - ಈ ರಾಗಗಳನ್ನು ಬೆಳಗಿನ ನಾಲ್ಕನೆಯ ಜಾವದಲ್ಲಿ ಸೂರ್ಯ ಮುಳುಗುವ ತನಕ ಕ್ರಮವಾಗಿ ಗಾನ ಕೋವಿದರು ಹಾಡಬೇಕು. **882-883A**

## ರಾತ್ರಿಯ ಮೊದಲನೆಯ ಜಾವದಲ್ಲಿ ಹಾಡತಕ್ಕ ರಾಗಗಳು

1. ಮೋಹನವೆಂಬ ಹೆಸರಿನ ರಾಗ 2. ಆರಭೀ ರಾಗ 3. ಪೂರ್ವಕಲ್ಯಾಣೀ ಎಂಬ ಹೆಸರಿನ ರಾಗ **883B**

4. ಹಮ್ಮೀರಕಲ್ಯಾಣೀ ರಾಗ 5. ಶ್ಯಾಮಕಲ್ಯಾಣೀ ಎಂಬ ಹೆಸರಿನ ರಾಗ 6. ಯಮುನಾಕಲ್ಯಾಣೀ ರಾಗ 7. ಕಮಾಚುರಾಗ **884**

8. ಸುರಟಿ ರಾಗ 9. ಮಲ್ಹಾರೀ ರಾಗ - ಇವು ರಾತ್ರಿಯ ಮೊದಲನೆಯ ಜಾವದಲ್ಲಿ ಗಾಯಕರು ಕ್ರಮವಾಗಿ ಹಾಡತಕ್ಕ ರಾಗಗಳು. **885**

## ರಾತ್ರಿಯ ಎರಡನೆಯ ಜಾವದಲ್ಲಿ ಹಾಡಬೇಕಾದ ರಾಗಗಳು

1. ಸೈಂಧವೀ ರಾಗ 2. ದೇವಗಾಂಧಾರೀ ರಾಗ 3. ನಾದನಾಮಕ್ರಿಯಾ ರಾಗ 4. ಬ್ಯಾಗಡ ಎಂಬ ಹೆಸರಿನ ರಾಗ 5. ಕನ್ನಡ ಎಂಬ ಹೆಸರಿನ ರಾಗ **886**

6. ಛಾಯಾ ರಾಗ 7. ನಾಟೀ ರಾಗ - ಈ ರಾಗಗಳು ರಾತ್ರಿಯ ಎರಡನೆಯ ಜಾವದ ಕೊನೆಯವರೆಗೆ ಗಾನಕೋವಿದರು ಹಾಡಬೇಕಾದ ರಾಗಗಳು. **887**

## ರಾತ್ರಿಯ ಮೂರನೆಯ ಜಾವದಲ್ಲಿ ಹಾಡಬೇಕಾದ ರಾಗಗಳು

1. ಪುನ್ನಾಗವರಾಲೀರಾಗ 2. ಘಂಟಾರಾಗ 3. ಆಹರೀ ಎಂಬ ಹೆಸರಿನ ರಾಗ 4. ಧನ್ಯಾಸೀ ಎಂಬ ಹೆಸರಿನ ಮತ್ತೊಂದು ರಾಗ - ಈ ರಾಗಗಳು ರಾತ್ರಿಯ ಮೂರನೆಯ ಜಾವದಲ್ಲಿ ಹಾಡತಕ್ಕ ರಾಗಗಳು. ಇವು ಶುಭಗಳನ್ನು ಕೊಡುವ ರಾಗಗಳು. **888-888A**

## ರಾತ್ರಿಯ ನಾಲ್ಕನೆಯ ಜಾವದಲ್ಲಿ ಹಾಡತಕ್ಕ ರಾಗಗಳು

1. ಮತ್ತಕೋಕಿಲ ರಾಗ 2. ಕಲಕಂಠವೆಂಬ ಹೆಸರಿನ ರಾಗ 3. ಘರ್ಜುರಾಗ 4. ಲಲಿತರಾಗ 5. ಪಂಚಮ ಎಂಬ ಹೆಸರಿನ ರಾಗ **889**

6. ಲಲಿತಾಪಂಚಮ ಎಂಬ ಹೆಸರಿನ ರಾಗ 7. ಹಿಂದೋಲವೆಂಬ ಹೆಸರಿನ ರಾಗ 8. ಬಿಭಾಸು ರಾಗ 9. ಚಾಲೀ ಎಂಬ ಹೆಸರಿನ ರಾಗ 10. ಭೂಪಾಲೀ ಎಂಬ ಹೆಸರಿನ ರಾಗ **890**

11. ದೇಶಾಕ್ಷರೀ ಎಂಬ ವಿಖ್ಯಾತವಾದ ರಾಗ - ಈ ರಾಗಗಳು ರಾತ್ರಿಯ ನಾಲ್ಕನೆಯ ಜಾವವು ಪ್ರಾರಂಭವಾದಾಗ ಹಾಡಲು ಪ್ರಾರಂಭಿಸಿ ಸೂರ್ಯೋದಯವಾಗುವವರೆಗೆ ಹಾಡಿದರೆ ಇವು ಶುಭಗಳನ್ನು ಉಂಟುಮಾಡುತ್ತವೆ. **891**

ಸಂಗೀತವನ್ನು ಹಾಡುವ ಗಾಯಕರ ಸಂಕೇತವನ್ನು ಮತ್ತು ಅನುಭವವನ್ನು ಆಶ್ರಯಿಸಿ ರಾಗಗಳನ್ನು ಹಾಡುವ ಕಾಲ ನಿರ್ಣಯವನ್ನು ಹೇಳಲಾಗಿದೆ. **892**

## ಸೂರ್ಯಾಂಶ ಮತ್ತು ಚಂದ್ರಾಂಶಗಳಿಂದ ಹುಟ್ಟಿದ ರಾಗಗಳನ್ನು ಮತ್ತು ಈ ರಾಗಗಳ ಆಲಾಪಕಾಲಗಳನ್ನು ಶಿವತತ್ತ್ವರತ್ನಾಕರದಲ್ಲಿ ಹೇಳಿರುವ ರೀತಿಯಿಂದ ಬರೆಯಲಾಗುವುದು

### ಹಗಲಿನ ಮೊದಲನೆಯ ಜಾವದಲ್ಲಿ ಹಾಡುವ ರಾಗಗಳು

1. ದೇಶಾಕ್ಷೀ ರಾಗ 2. ಭೈರವರಾಗ 3. ಫಲಮಂಜರೀ ರಾಗ 4. ಭೂಪಾಲೀ ರಾಗ 5. ಸಾಹುರೀ ರಾಗ 6. ದೇವಕ್ರಿಯಾ ರಾಗ 7. ಘೂರ್ಜರ ರಾಗ 8. ವೇಲಾವಲೀ ರಾಗ (ಒಟ್ಟು 8 ರಾಗಗಳು). **893**

### ಹಗಲಿನ ಎರಡನೆಯ ಜಾವದಲ್ಲಿ ಹಾಡುವ ರಾಗಗಳು

1. ಕುರಂಜೀರಾಗ 2. ಶುಭಕೌಶಿಕೀರಾಗ 3. ಕುಂಡೀರಾಗ 4. ವರಾಲೀರಾಗ 5. ಧನ್ಯಾಸೀರಾಗ 6. ಬಂಗಾಲವೆಂಬ ಹೆಸರಿನ ರಾಗ 7. ವಸಂತಕರಾಗ 8. ಲಲಿತಾರಾಗ (ಒಟ್ಟು 8 ರಾಗಗಳು). **894**

181A

### ಹಗಲಿನ ಮೂರನೆಯ ಜಾವದಲ್ಲಿ ಹಾಡುವ ರಾಗಗಳು

1. ಜೀಮೂತರಂಜನೀರಾಗ 2. ಚಾಲೀರಾಗ 3. ಆಂದೋಲಿಕಾರಾಗ 4. ರಾಮಕ್ರಿಯಾರಾಗ 5. ಗುಂಡಕ್ರಿಯಾರಾಗ 6. ಮಲ್ಹಾರೀರಾಗ 7. ದೇಶಿಕಾ ಎಂಬ ಹೆಸರಿನ ರಾಗ 8. ಭಲ್ಲಾರೀರಾಗ 9. ಶುದ್ಧಭೈರವೀರಾಗ (ಒಟ್ಟು 9 ರಾಗಗಳು) **895-896A**

### ಹಗಲಿನ ನಾಲ್ಕನೆಯ ಜಾವದಲ್ಲಿ ಹಾಡುವ ರಾಗಗಳು

1. ಮಾಲವಿಕಾರಾಗ 2. ಛಾಯಾಗೌಲವೆಂಬ ಹೆಸರಿನ ರಾಗ 3. ಶ್ರೀರಾಗ 4. ಪೂರ್ವಗೌಲೀ ರಾಗ 5. ಸಾರಂಗರಾಗ 6. ರೀತಿಗೌಲಕರಾಗ 7. ಕರ್ನಾಟೀರಾಗ 8. ಗೌಲಕರಾಗ 9. ನಾರಾಯಣ-ಗೌಲಕರಾಗ **896B-897**

10. ರಕ್ತಹಂಸೀರಾಗ 11. ಮಾಹುರೀರಾಗ 12. ಸಾಲಗಭೈರವೀರಾಗ 13. ರಾಗರಂಜಿಕಾರಾಗ (ಒಟ್ಟು 12 ರಾಗಗಳು) - ಇವು ಗಾಯಕೋತ್ತಮರಿಂದ ಹಗಲಿನ ನಾಲ್ಕನೆಯ ಜಾವದಲ್ಲಿ ಹಾಡತಕ್ಕ ರಾಗಗಳು. **898**

ಹೀಗೆ ಮೇಲೆ ಹೇಳಿದ ಹಗಲಿನ, ನಾಲ್ಕು ಜಾವದ ರಾಗಗಳು ಸೂರ್ಯನ ಅಂಶದಿಂದ ಹುಟ್ಟಿದ ರಾಗಗಳು. ಸಾಯಂಕಾಲದಲ್ಲಿ ಈ ರಾಗಗಳನ್ನು ಹಾಡಬಾರದು. ಸಾಯಂಕಾಲದಲ್ಲಿ ಇವು ನಿಂದಿತರಾಗಗಳು. ಈ ಸೂರ್ಯಾಂಶರಾಗಗಳನ್ನು ಯಾವನು ಹಾಡುತ್ತಾನೋ ಅವನು ಸುಖವನ್ನು ಹೊಂದುತ್ತಾನೆ. **899**

| ಹಗಲಿನಲ್ಲಿ ಹಾಡುವ ರಾಗಗಳು<br>ಸೂರ್ಯಾಂಶರಾಗಗಳು - ಒಟ್ಟು 37 ರಾಗಗಳು | |
|---|---|
| ಹಗಲಿನ ಮೊದಲನೆಯ ಜಾವದಲ್ಲಿ | 8 ರಾಗಗಳು |
| ಹಗಲಿನ ಎರಡನೆಯ ಜಾವದಲ್ಲಿ | 8 ರಾಗಗಳು |
| ಹಗಲಿನ ಮೂರನೆಯ ಜಾವದಲ್ಲಿ | 9 ರಾಗಗಳು |
| ಹಗಲಿನ ನಾಲ್ಕನೆಯ ಜಾವದಲ್ಲಿ | 12 ರಾಗಗಳು |
| ಒಟ್ಟು | 27 ರಾಗಗಳು |
| ಈ ರಾಗಗಳನ್ನು ಹಗಲಿನಲ್ಲಿ ಮಾತ್ರ ಹಾಡಬೇಕು. ಸಂಜೆ ಹಾಡಬಾರದು. | |

## ರಾತ್ರಿಯ ವೇಳೆಯಲ್ಲಿ ಹಾಡುವ ರಾಗಗಳು
## (ಚಂದ್ರಾಂಶರಾಗಗಳು)

1. ಶುದ್ಧನಟ್ಟಾರಾಗ 2. ಸಾಲಗನಟ್ಟಾರಾಗ 3. ಶುದ್ಧವರಾಲಿಕಾರಾಗ 4. ಛಾಯಾವರಾಲಿಕಾರಾಗ 5. ದ್ರಾವಿಡವರಾಲಿಕಾರಾಗ **900**

6. ದೇಶೀವರಾಲೀರಾಗ 7. ನಾಗವರಾಲೀ ರಾಗ 8. ಮಾಧುರ್ಯರಾಗ 9. ಬಾಲಿಕಾರಾಗ 10. ಮಲ್ಹಾರೀರಾಗ 11. ಛಾಯಾರಾಗ 12. ಗೌಡೀರಾಗ 13. ಕರ್ನಾಟಕವೆಂಬ ಹೆಸರಿನ ರಾಗ **901**

14. ಗೌಡೀರಾಗ 15. ಮಾಲವಗೌಡೀರಾಗ 16. ರೀತಿರಾಮಕ್ರಿಯಾರಾಗ 17. ಛಾಯಾ-ರಾಮಕ್ರಿಯಾರಾಗ 18. ರಂಗಛಾಯಾರಾಗ 19. ಸರ್ವವರಾಲಿಕಾರಾಗ **902**

20. ಕರ್ನಾಟಾಂಕೋಲರಾಗ ಎಂಬುವು. ಇವು ಇಪ್ಪತ್ತು ಚಂದ್ರನ ಅಂಶದಿಂದ ಹುಟ್ಟಿದ ರಾಗಗಳು. ಈ ರಾಗಗಳನ್ನು ರಾತ್ರಿಯ ಹೊತ್ತಿನಲ್ಲಿ ಹಾಡಬೇಕು. ಯಾವ ಗಾಯಕನು ರಾತ್ರಿಯ ವೇಳೆಯಲ್ಲಿ ಈ ರಾಗಗಳನ್ನು ಹಾಡುತ್ತಾನೋ ಅವನಿಗೆ ಹೆಚ್ಚಿನ ಸಂಪತ್ತು ಬಂದೊದಗುತ್ತದೆ. **903**

ಈ ಹಿಂದೆ ಹೇಳಿದ ಸೂರ್ಯಾಂಶ-ಚಂದ್ರಾಂಶರಾಗಗಳನ್ನು ಬಿಟ್ಟು ಬೇರೆ ರಾಗಗಳನ್ನು ಹಾಡಲು ಯಾವ ವೇಳೆಯ ನಿಯಮವೂ ಇಲ್ಲ. ವೇಳಾನಿಯಮವಿಲ್ಲದ ರಾಗಗಳನ್ನು ಹಾಡಿದಾಗ ಗಾಯಕನಿಗೆ ಉಂಟಾಗುವ ದೋಷಪ್ರಶಮನಕ್ಕಾಗಿ **904**

ಈಶ್ವರನನ್ನು ಮತ್ತು ಹರಿಯನ್ನು ನೆನಪಿಸಿಕೊಂಡು ಮಧ್ಯಮಾದಿರಾಗಗಳನ್ನು ನಿಯೋಜಿಸಬೇಕು. ದೇವತಾವಿಷಯಕವಾದ ಗೀತೆ, ಪುಣ್ಯಗೀತೆ, 905

ಅಧ್ಯಾತ್ಮವಿಷಯಕ್ಕೆ ಸಂಬಂಧಿಸಿದ ಗೀತೆ ಹಾಗೂ ಪಾಪನಾಶಕವಾದ ಗೀತೆಯನ್ನು ವಿವಾಹಕಾಲದಲ್ಲಿ ದೇವತಾಸ್ತೋತ್ರವನ್ನು ಮಾಡಿದ ನಂತರ ಹಾಡಬೇಕು. 906

ವೇಳಾನಿಮಯವಿಲ್ಲದ ರಾಗಗಳನ್ನು ಕೇಳಿದರೆ ದೋಷವಿಲ್ಲವೆಂದು ಹೇಳಲಾಗಿದೆ. ಎಲ್ಲ ರಾಗಗಳನ್ನು ಹಾಗೂ ರಾಗಿಣಿಗಳನ್ನು ರಂಗಭೂಮಿಯಲ್ಲಿ ರಾಜನ ಆಜ್ಞೆಯಂತೆ ಹಾಡಿದಾಗ ಕಾಲದೋಷವು ಇರುವುದಿಲ್ಲ. 907-908A

## ಅಪೂರ್ವರಾಗಗಳ ಹೆಸರುಗಳು

### (ಸಂಗೀತಸಂಗ್ರಹದಲ್ಲಿ)

| | | | | |
|---|---|---|---|---|
| 1. | ವನಸ್ಪತಿರಾಗ | 2. | ಭಾನುಮತೀರಾಗ | |
| 3. | ಮೋಹನರಾಗ | 4. | ಪೂರ್ಣಚಂದ್ರಿಕಾರಾಗ | 908B |
| 5. | ಕನಕಾಂಗೀರಾಗ | 6. | ಮಾನವತೀರಾಗ | |
| 7. | ಭೋಗೀರಾಗ | 8. | ಕನಕಾಂಬರೀರಾಗ | |
| 9. | ಸಾಮಂತರಾಗ | 10. | ಸಾಮರಾಗ | |
| 11. | ಜುಂಜೋಟರಾಗ | 12. | ಧೇನುಕಾರಾಗ | |
| 13. | ಕೋಕಿಲಪ್ರಿಯರಾಗ | | | 909 |
| 14. | ಮನೋರಂಜನಿಕಾರಾಗ | 15. | ಮಾಂದೀರಾಗ | |
| 16. | ಮನೋರಮಾರಾಗ | 17. | ಶ್ರೀರಂಜನೀರಾಗ | |
| 18. | ಟಕ್ಕಾರಾಗ | 19. | ಶುದ್ಧದೇಶೀರಾಗ | |
| 20. | ಮಾರವರಾಗ | | | 910 |
| 21. | ಸೈಂಧವೀರಾಗ | 22. | ಕೋಕಿಲರವರಾಗ | |
| 23. | ಮಾಲವಶ್ರೀರಾಗ | 24. | ಜುಜಾವಲೀರಾಗ | |
| 25. | ಘನಶ್ಯಾಮಲರಾಗ | 26. | ರೂಪವತೀ ಎಂಬ ಹೆಸರಿನ ರಾಗ | 911 |
| 27. | ಗುಂಭಕಾಂಬೋಜಿಕಾರಾಗ | 28. | ಜಗನ್ಮೋಹನಕವೆಂಬ ಹೆಸರಿನ ರಾಗ | |
| 29. | ಸುರಸಿಂಧುರಾಗ | 30. | ಸೂರ್ಯಕಾಂತರಾಗ | |
| 31. | ಸುಪ್ರದೀಪಿಕಾರಾಗ | | | 912 |

ಹೀಗೆ ಎಪ್ಪತ್ತೈದು ರಾಗಗಳು ಸಂಗೀತಶಾಸ್ತ್ರದಲ್ಲಿ ಸಾಮಾನ್ಯವಾಗಿ ಬರುವಂತಹ ರಾಗಗಳೆಂದು ಹೇಳಲಾಗಿದೆ. ಇವಲ್ಲದೆ ಸಂಗೀತಶಾಸ್ತ್ರದಲ್ಲಿ ಸಿದ್ಧವಾದ ಅಪೂರ್ವವಾದ ಲೆಕ್ಕವಿಲ್ಲದಷ್ಟು ರಾಗಗಳು ಉಕ್ತವಾಗಿವೆ. 922

## ಸಂಪೂರ್ಣರಾಗ - ಷಾಡವರಾಗ - ಔಡವರಾಗಗಳ
## ಕಾಲ ಮತ್ತು ಫಲಗಳ ನಿರ್ಣಯ
### (ಶಿವತತ್ತ್ವರತ್ನಾಕರದಲ್ಲಿ)

ಪೂರ್ಣರಾಗವನ್ನು ಹಾಡಿದರೆ ಅದರಿಂದ ಆಯುಸ್ಸು, ಧರ್ಮ, ಯಶಸ್ಸು, ಬುದ್ಧಿ, ಧನ, ಧಾನ್ಯ, ಬಲ, ಶುಭ, ರಾಜ್ಯಾಭಿವೃದ್ಧಿ, ಸಂತಾನಗಳು ಸಿದ್ಧಿಸುತ್ತವೆ. 923

ಸಂಗ್ರಾಮದಲ್ಲಿ ರೂಪಲಾವಣ್ಯವನ್ನು, ವಿರಹದಲ್ಲಿ ಗುಣಕೀರ್ತನೆಯನ್ನು, ಲಕ್ಷಣವನ್ನು, ಚರಿತ್ರೆಯನ್ನು ಷಾಡವರಾಗದಿಂದ ಹಾಡಬೇಕು. (ಇದು ಉತ್ತಮಫಲವನ್ನು ಕೊಡುತ್ತದೆ.) 924

ರೋಗನಾಶದಲ್ಲಿ, ಶತ್ರುನಾಶದಲ್ಲಿ, ಭಯನಾಶದಲ್ಲಿ, ಶೋಕನಾಶದಲ್ಲಿ, ದುಃಸ್ಥಿತಿಯಲ್ಲಿದ್ದಾಗ, ಸಂತಾಪವಾಗಿದ್ದಾಗ, ಮಂಗಲಾಶೀರ್ವಾದ ಮಾಡುವ ಕಾಲದಲ್ಲಿ, ಕ್ಷಾಮಕಾಲದಲ್ಲಿ, ಗ್ರಹಮೋಕ್ಷಕಾಲ-ದಲ್ಲಿ ಔಡವರಾಗದಿಂದ ಹಾಡಬೇಕು. ಇದು ಪ್ರಯೋಜನಕಾರಿ. 925-925A

## ನಾಟ್ಯಪದಗಳು
### (ನಮ್ಮಿಂದ ರಚಿತವಾದ ಸಂಖ್ಯಾರತ್ನಕೋಶದ ವ್ಯಾಖ್ಯಾನವಾದ ಪ್ರಭಾವಲಿಯಲ್ಲಿ)
### (ನಾಟ್ಯದಲ್ಲಿ ಬಳಸುವಂತಹ ಪದಗಳು)

| | | | | | | |
|---|---|---|---|---|---|---|
| 1. | ಪತ್ಯಾಹತ | 2. | ವಿಸೃಷ್ಟ | 3. | ನಿಶ್ಶಬ್ದ | |
| 4. | ಶಬ್ದತಾಡನ | 5. | ತಲಸಂಚಲನ | 6. | ಮುಂಡಿತ | |
| 7. | ಅಗ್ರ | 8. | ಉಗ್ರಕ | | | 926 |
| 9. | ಊರ್ಧ್ವ | 10. | ಪಾರ್ಶ್ವ | 11. | ಸಮ | |
| 12. | ಪೃಷ್ಠ | | | | | |

ಎಂಬುದಾಗಿ ಇವು ಹನ್ನೆರಡು ಪದಗಳು ನಾಟ್ಯದಲ್ಲಿ ಬಳಸುವಂತಹ ಪದಗಳೆಂದು ಹೇಳಲಾಗಿದೆ. ಪಂಡಿತೋತ್ತಮರು ಭರತನ ನಾಟ್ಯಶಾಸ್ತ್ರದಲ್ಲಿ ಹೇಳಿರುವ ಈ ಹನ್ನೆರಡು ಪದಗಳು ಚೆನ್ನಾಗಿ ತಿಳಿದುಕೊಳ್ಳಬೇಕು. 927

## ರೂಪಕಗಳು

(ಪ್ರಭಾವಳಿಯಲ್ಲಿ ಹೇಳಿರುವಂತೆ)

| | | | | | |
|---|---|---|---|---|---|
| 1. | ಈಹಾಮೃಗ | 2. | ಪ್ರಕರಣ | 3. | ವ್ಯಾಯೋಗ |
| 4. | ನಾಟಕ | 5. | ಡಿಮ | 6. | ವೀಥೀ |
| 7. | ಸಮವಕಾರ | 8. | ಅಂಕ | 9. | ಭಾಣ |
| 10. | ಪ್ರಹಸನ | | | | |

ಎಂಬುದಾಗಿ ರೂಪಕವು ಹತ್ತು ವಿಧವಾಗಿದೆ ಎಂದು [1]ಕಾವ್ಯಪ್ರಕಾಶದಲ್ಲಿ ಹೇಳಲ್ಪಟ್ಟಿದೆ. 928-928A

## ಮುಖಸಂಧಿಯ ಅಂಗಗಳು

(ಪ್ರಭಾವಲಿಯಲ್ಲಿ)

| | | | | | |
|---|---|---|---|---|---|
| 1. | ಉಪಕ್ಷೇಪ | 2. | ಪರಿಕರ | 3. | ಪರಿನ್ಯಾಸ |
| 4. | ವಿಲೋಭನ | 5. | ಉದ್ಭೇದ | 6. | ಕರಣ |
| 7. | ಪ್ರಾಪ್ತಿ | 8. | ವಿಧಾನ | 9. | ಪರಿಭಾವನ 929 |
| 10. | ಭೇದ | 11. | ಯುಕ್ತಿ | 12. | ಸಮಾಧಾನ |

ಎಂಬುದಾಗಿ ನಾಟ್ಯಶಾಸ್ತ್ರದ ಹಿರಿಯರು ಹನ್ನೆರಡು ವಿಧವಾಗಿದೆಯೆಂದು [2]ಕಾವ್ಯಪ್ರಕಾಶದಲ್ಲಿ ಹೇಳಿದೆ. ಅದನ್ನು ಅರಿಯಬೇಕೆಂದು ಹೇಳಿದ್ದಾರೆ. 930

## ಪ್ರತಿಮುಖಸಂಧಿಯ ಅಂಗಗಳು

(ಪ್ರಭಾವಲಿಯಲ್ಲಿ)

| | | | | | |
|---|---|---|---|---|---|
| 1. | ಉಪನ್ಯಾಸ | 2. | ಶಮ | 3. | ವರ್ಣಸಂಹಾರ |
| 4. | ಪರ್ಯುಪಾಸನ | 5. | ವಿಧೂತ | 6. | ವಿಲಾಸ |
| 7. | ನಿರೋಧ | 8. | ಪರಿಸರ್ಪಣ | | 931 |

---

1. 'ಕಾವ್ಯಪ್ರಕಾಶ'ದಲ್ಲಿ ರೂಪಕದ ಭಾಗವನ್ನು ಹೇಳಿಲ್ಲ. ಗ್ರಂಥಕಾರನು 'ಕಾವ್ಯಪ್ರಕಾಶ'ದಲ್ಲಿ ಹೇಳಿದೆ ಎಂದು ತಪ್ಪಾಗಿ ಬರೆದಿದ್ದಾನೆ. ವಸ್ತುತಃ ಇವುಗಳ ಹಾಗೂ ಮುಂದೆ ಹೇಳುವ ನಾಟಕದ ವಿಷಯಗಳನ್ನು ದಶರೂಪಕ, ಪ್ರತಾಪರುದ್ರೀಯ ಮುಂತಾದ ಗ್ರಂಥಗಳಲ್ಲಿ ಹೇಳಲಾಗಿದೆ.
2. 'ಕಾವ್ಯಪ್ರಕಾಶ'ದಲ್ಲಿ ರೂಪಕದ ಭಾಗವನ್ನು ಹೇಳಿಲ್ಲ. ಗ್ರಂಥಕಾರನು 'ಕಾವ್ಯಪ್ರಕಾಶ'ದಲ್ಲಿ ಹೇಳಿದೆ ಎಂದು ತಪ್ಪಾಗಿ ಬರೆದಿದ್ದಾನೆ.

| | | | | | |
|---|---|---|---|---|---|
| 9. | ನರ್ಮದ್ಯುತಿ | 10. | ಪ್ರಗಮನ | 11. | ವಜ್ರ |
| 12. | ಪುಷ್ಪ | 13. | ನರ್ಮ | | |

ಎಂಬುದಾಗಿ ಇವು ಹದಿಮೂರು ಪ್ರತಿಮುಖಸಂಧಿಯ ಅಂಗಗಳೆಂದು [1]ಕಾವ್ಯಪ್ರಕಾಶದಲ್ಲಿ ಹೇಳಿದೆ. ಇವನ್ನು ನಾಟ್ಯವಿದರು ತಿಳಿಯಬೇಕು. 932-932A

### ಗರ್ಭಸಂಧಿಯ ಅಂಗಗಳು

(ಪ್ರಭಾವಲಿಯಲ್ಲಿ)

| | | | | | |
|---|---|---|---|---|---|
| 1. | ಅಭೂತಾಹರಣ | 2. | ಮಾರ್ಗ | 3. | ಕ್ರಮ |
| 4. | ರೂಪ | 5. | ಸಂಭ್ರಮ | 6. | ಆಕ್ಷೇಪ |
| 7. | ಉದ್ಯೋಗ | 8. | ತೋಟಕ | 9. | ಅನುಮಾನಕ 933 |
| 182A 10. | ಸಂಗ್ರಹ | 11. | ಉದಾಹರಣ | 12. | ಅಧಿಬಲ |

ಎಂಬುದಾಗಿ ನಾಟಕದಲ್ಲಿ ಇವು ಹನ್ನೆರಡು ಗರ್ಭಸಂಧಿಯ ಅಂಗಗಳೆಂದು ಹೇಳಿದೆ. 934

### ವಿಮರ್ಶಸಂಧಿಯ ಅಂಗಗಳು

(ಪ್ರಭಾವಲಿಯಲ್ಲಿ)

| | | | | | |
|---|---|---|---|---|---|
| 1. | ಅಪವಾದ | 2. | ಸಂಫೇಟ | 3. | ವಿದ್ರವ |
| 4. | ದ್ರವ | 5. | ನಿರೋಧನ | 6. | ಶಕ್ತಿ |
| 7. | ವ್ಯವಸಾಯ | 8. | ಪ್ರಸಂಗಕ | | 935 |
| 9. | ಪ್ರರೋಚನ | 10. | ಚಲನ | 11. | ದ್ಯುತಿ |
| 12. | ಆರಾದನ | 13. | ವಿಚಲನ | | |

ಎಂದು ಹದಿಮೂರನ್ನು ವಿಮರ್ಶಸಂಧಿಯ ಅಂಗಗಳೆಂದು [2]ಕಾವ್ಯಪ್ರಕಾಶದಲ್ಲಿ ಹೇಳಿರುವುದನ್ನು ತಿಳಿಯಬೇಕು. 936-936A

### ನಿರ್ವಹಣಸಂಧಿಯ ಅಂಗಗಳು

(ಪ್ರಭಾವಲಿಯಲ್ಲಿ)

| | | | | | |
|---|---|---|---|---|---|
| 1. | ಸಂಧಿ | 2. | ವಿರೋಧ | 3. | ಗ್ರಥನ |

---

1. 'ಕಾವ್ಯಪ್ರಕಾಶ'ದಲ್ಲಿ ರೂಪಕದ ಭಾಗವನ್ನು ಹೇಳಿಲ್ಲ. ಗ್ರಂಥಕಾರನು 'ಕಾವ್ಯಪ್ರಕಾಶ'ದಲ್ಲಿ ಹೇಳಿದೆ ಎಂದು ತಪ್ಪಾಗಿ ಬರೆದಿದ್ದಾನೆ.
2. 'ಕಾವ್ಯಪ್ರಕಾಶ'ದಲ್ಲಿ ಹೇಳಿದೆ ಎಂದು ಗ್ರಂಥಕಾರನು ತಪ್ಪಾಗಿ ಬರೆದಿದ್ದಾನೆ.

| | | | | | | |
|---|---|---|---|---|---|---|
| 4. | ನಿರ್ಣಯ | 5. | ಪರ್ಯುಪಾಸನ | 6. | ಆನಂದ | |
| 7. | ಪ್ರಸಾದ | 8. | ಸಮಯ | 9. | ಅಭಿಭಾಷಣ | 937 |
| 10. | ಪೂರ್ವಭಾವ | 11. | ಕೃತಿ | 12. | ಪ್ರಶಸ್ತಿ | |
| 13. | ಉಪಗೂಹನ | 14. | ಉಪಸಂಹಾರ | | | |

ಎಂಬುದಾಗಿ ಇವು ಹದಿನಾಲ್ಕು ನಿರ್ವಹಣಸಂಧಿಯ ಅಂಗಗಳೆಂದು [1]ಕಾವ್ಯಾದರ್ಶದಲ್ಲಿ ವಿವರಿಸಲಾಗಿದೆ. 938-938A

## ಪ್ರಹಸನದ ಅಂಗಗಳು

### (ಅಲಂಕಾರಶಾಸ್ತ್ರದಲ್ಲಿ)

| | | | | | | |
|---|---|---|---|---|---|---|
| 1. | ಸ್ಥಿತಪಾದ್ಯ | 2. | ಗೇಯಪದ | 3. | ಸೈಂಧವ | |
| 4. | ಪುಷ್ಪಗಂಧಿಕಾ | 5. | ಉಕ್ತಪ್ರತ್ಯುಕ್ತ | 6. | ಆಸೀನ | |
| 7. | ಉತ್ತಮೋತ್ತಮ | | | | | 939 |
| 8. | ಪ್ರಭೇದಕ | 9. | ತ್ರಿಮೂಢ | 10. | ದ್ವಿಮೂಢ | |

ಎಂಬುದಾಗಿ ಕ್ರಮವಾಗಿ ಇವು ಹತ್ತನ್ನು ಪ್ರಹಸನದ ಅಂಗಗಳೆಂದು ಅಲಂಕಾರದಲ್ಲಿ ಸ್ಫುಟವಾಗಿ ಹೇಳಿದೆ. 940

## ವೀಥಿಯ ಅಂಗಗಳು

### (ಪ್ರಭಾವಲಿಯಲ್ಲಿ)

| | | | | | | |
|---|---|---|---|---|---|---|
| 1. | ಉದ್ಘಾತ್ಯಕ | 2. | ಅವಲಗಿತ | 3. | ಪ್ರಪಂಚ | |
| 4. | ತ್ರಿಗತ | 5. | ಛಲ | 6. | ವಾಕ್ಕೇಲಿ | |
| 7. | ಅಧಿಬಲ | 8. | ಗಂಡ | 9. | ಅವಸ್ಕಂದಿತ | |
| 10. | ನಾಲಿಕ | | | | | 941 |
| 11. | ಅಸತ್ಪ್ರಲಾಪ | 12. | ವ್ಯಾಹಾರ | 13. | ಮೃದವ | |

ಎಂಬುದಾಗಿ ಇವು ಹದಿಮೂರು ವೀಥಿಯ ಅಂಗಗಳೆಂದು [2]ಕಾವ್ಯಪ್ರಕಾಶದಲ್ಲಿ ತಿಳಿಸಲಾಗಿದೆ. 942

---

1. 'ಕಾವ್ಯಾದರ್ಶ'ದಲ್ಲಿ ಹೇಳಿದೆ ಎಂದು ಗ್ರಂಥಕಾರನು ಬರೆದಿರುವುದು ತಪ್ಪು. ಏಕೆಂದರೆ ಕಾವ್ಯಾದರ್ಶದಲ್ಲಿ ಈ ಭಾಗದ ಪ್ರಸ್ತಾಪವಿಲ್ಲ.
2. 'ಕಾವ್ಯಪ್ರಕಾಶ'ದಲ್ಲಿ ತಿಳಿಸಿದೆ ಎಂದು ಗ್ರಂಥಕಾರನು ಬರೆದಿರುವುದು ತಪ್ಪು.

ಇವು ಹದಿನೇಳು ಕಾವ್ಯದಲ್ಲಿ ಪದಗತ ದೋಷಗಳೆಂದು ಕಾವ್ಯಪ್ರಕಾಶದಲ್ಲಿ ಉದಾಹೃತವಾಗಿವೆ. ಕಾವ್ಯಲಕ್ಷಣವನ್ನು ತಿಳಿದವರು ಈ ಹದಿನೇಳು ಕಾವ್ಯದ ಪದದೋಷಗಳನ್ನು ಚೆನ್ನಾಗಿ ತಿಳಿದು-ಕೊಳ್ಳಬೇಕು. 950

### ಅರ್ಥಗತದೋಷಗಳು

(ಪ್ರಭಾವಲಿಯಲ್ಲಿ)

182B

1. ಅಪಾರ್ಥತ್ವ 2. ವ್ಯರ್ಥತಾ 3. ಏಕಾರ್ಥತ್ವ
4. ಸಸಂಶಯತ್ವ 5. ಭಿನ್ನತ್ವ 6. ಪಾರುಷ್ಯ
7. ಅತಿಮಾತ್ರತೆ 951
8. ಅಪಕ್ರಮತ್ವ 9. ವೈರಸ್ಯ 10. ನ್ಯೂನೌಪಮ್ಯ
11. ವಿರುದ್ಧತಾ 12. ಅಸದೃಕ್ಷೋಪಮತ್ವ 13. ಹೇತುಶೂನ್ಯತ್ವ 952
14. ಅಧಿಕೋಪಮತ್ವ 15. ನಿರಲಂಕಾರತಾ 16. ಅಶ್ಲೀಲತ್ವ
17. ಸಹಚರಚ್ಯುತತ್ವ 953
18. ಅಪ್ರಸಿದ್ಧೋಪಮತ್ವ

ಇವು ಹದಿನೆಂಟು, ಕಾವ್ಯದಲ್ಲಿ ಉಂಟಾಗುವ ಅರ್ಥಗತದೋಷಗಳೆಂದು ಉಕ್ತವಾಗಿವೆ ಎಂದು ಕಾವ್ಯಪ್ರಕಾಶದಲ್ಲಿ ಹೇಳಲಾಗಿದೆ. ಬಲ್ಲವರು ಇವನ್ನು ತಿಳಿದುಕೊಳ್ಳಬೇಕು. 954

### ವಾಕ್ಯದೋಷಗಳು

(ಪ್ರಭಾವಲಿಯಲ್ಲಿ)

1. ಕ್ರಮಭ್ರಂಶ 2. ವಿಸಂಧಿತ್ವ 3. ಶಬ್ದಹೀನತ್ವ
4. ವ್ಯಾಕೀರ್ಣತ್ವ 5. ಪೌನರುಕ್ತ್ಯ 6. ವಾಕ್ಯಸಂಕೀರ್ಣತಾ 955
7. ನ್ಯೂನೌಪಮ್ಯ 8. ಅಪೂರ್ಣತ್ವ 9. ಭಿನ್ನಲಿಂಗತ್ವ
10. ವಿಭಿನ್ನವಚನತ್ವ 11. ಸಮಾಪ್ತಪುನರಾತ್ತತಾ 956
12. ಛಂದೋಭಗ್ನ 13. ಸಂಬಂಧವರ್ಜಿತತ್ವ
14. ಅಧಿಕೌಪಮ್ಯ 15. ಅಸ್ಥಾನಸಮಾನತ್ವ 16. ಅರೀತಿತಾ 957
17. ಪತತ್ಪ್ರಕರ್ಷತಾ 18. ವಾಚ್ಯವರ್ಜಿತತ್ವ 19. ಯತಿಭ್ರಂಶ
20. ಅಶರೀರತ್ವ 21. ಪ್ರಕ್ರಮಭಗ್ನತಾ 958

22. ವಿಸರ್ಗಲುಪ್ತತಾ 23. ವಾಕ್ಯಗರ್ಭಿತತ್ವ 24. ಅಧಿಕಪದತ್ವ
ಎಂಬುದಾಗಿ ಕಾವ್ಯಪ್ರಕಾಶದಲ್ಲಿ ಇಪ್ಪತ್ತನಾಲ್ಕು ರೀತಿಯ ವಾಕ್ಯದೋಷಗಳನ್ನು ವರ್ಣಿಸಲಾಗಿದೆ. 959-959A

## ಕಾವ್ಯಗುಣಗಳು

### (ಪ್ರಭಾವಲಿಯಲ್ಲಿ)

1. ಶ್ಲೇಷ 2. ಸುಕುಮಾರತ್ವ 3. ಅರ್ಥವ್ಯಕ್ತಿ
4. ಉದಾತ್ತತಾ 5. ಮಾಧುರ್ಯ 6. ಸಮತಾ
7. ಕಾಂತಿ 8. ಪ್ರೇಯಸ್ತ್ವ 9. ಸುಶಬ್ದತಾ 960
10. ಓಜಸ್ 11. ಪ್ರಸಾದ 12. ಔದಾರ್ಯ
13. ಊರ್ಜಿತತ್ವ 14. ವಿಸ್ತರ 15. ಸೌಕ್ಷ್ಮ್ಯ
16. ಸಮಾಧಿ 17. ಗಾಂಭೀರ್ಯ 18. ಸಂಕ್ಷೇಪ
19. ಭಾವಿಕ 961
20. ಪ್ರೌಢಿ 21. ಪ್ರೀತಿ 22. ಸಂಮಿತತ್ವ
23. ಗತಿ 24. ಉಕ್ತಿ
ಎಂಬುದಾಗಿ ಇಪ್ಪತ್ತನಾಲ್ಕು ಬಗೆಯ ಕಾವ್ಯಗುಣಗಳನ್ನು ಕಾವ್ಯಪ್ರಕಾಶದಲ್ಲಿ ಹೇಳಿದೆ. 962

## ಮಹಾಕಾವ್ಯದಲ್ಲಿನ ವರ್ಣನೆಗಳು

### (ಪ್ರಭಾವಲಿಯಲ್ಲಿ)

1. ಸಮುದ್ರ 2. ನಗರ 3. ಯುದ್ಧ
4. ಋತು 5. ಚಂದ್ರೋದಯ 6. ವಿಪ್ರಲಂಭ
7. ವಿವಾಹ 8. ದ್ಯೂತ 9. ಸೂರ್ಯೋದಯ
10. ಗಿರಿ 963
11. ರತ್ಯುತ್ಸವ 12. ಮಂತ್ರ 13. ನಾಯಕಾಭ್ಯುದಯ
14. ಪ್ರಯಾಣ 15. ಜಲಕ್ರೀಡಾ 16. ಕುಮಾರೋದಯ 964
17. ಮಧುಪಾನ 18. ಉದ್ಯಾನ
ಎಂಬುದಾಗಿ ಇವು ಹದಿನೆಂಟು ಮಹಾಕಾವ್ಯದಲ್ಲಿ ವರ್ಣಿತವಾಗುವ ವಿಷಯಗಳೆಂದು ಹೇಳಿ - ಇವು ಅಷ್ಟಾದಶವರ್ಣನೆಗಳು ಎಂದು ಕಾವ್ಯಪ್ರಕಾಶದಲ್ಲಿ ವಿವರಿಸಲಾಗಿದೆ. 965

## ಒಂಭತ್ತು ಬಗೆಯ ರಸಗಳು

### (ಅಲಂಕಾರಶಾಸ್ತ್ರದಲ್ಲಿ)

| | | | | | | |
|---|---|---|---|---|---|---|
| 1. | ಶೃಂಗಾರ | 2. | ವೀರ | 3. | ಕರುಣ | |
| 4. | ಅದ್ಭುತ | 5. | ಹಾಸ್ಯ | 6. | ಭಯಾನಕ | |
| 7. | ಬೀಭತ್ಸ | 8. | ರೌದ್ರ | 9. | ಶಾಂತ | 966 |

ಇವು ಒಂಭತ್ತು ರಸಗಳು. ಇವುಗಳನ್ನು ಕಾವ್ಯಪ್ರಕಾಶದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. 966A

## ನವರಸಗಳ ಸ್ಥಾಯೀಭಾವಗಳು

### (ಅಲಂಕಾರಶಾಸ್ತ್ರದಲ್ಲಿ)

| | | | |
|---|---|---|---|
| 1. | ಶೃಂಗಾರದಲ್ಲಿ | ರತಿಯು ಸ್ಥಾಯಿಭಾವ | |
| 2. | ವೀರದಲ್ಲಿ | ಉತ್ಸಾಹವು ಸ್ಥಾಯಿಭಾವ | |
| 3. | ಕರುಣದಲ್ಲಿ | ಶೋಕವು ಸ್ಥಾಯಿಭಾವ | |
| 4. | ಅದ್ಭುತದಲ್ಲಿ | ವಿಸ್ಮಯವು ಸ್ಥಾಯಿಭಾವ | 967 |
| 5. | ಹಾಸ್ಯದಲ್ಲಿ | ಹಾಸವು ಸ್ಥಾಯಿಭಾವ | |
| 6. | ಭಯಾನಕದಲ್ಲಿ | ಭಯವು ಸ್ಥಾಯಿಭಾವ | |
| 7. | ಬೀಭತ್ಸದಲ್ಲಿ | ಜುಗುಪ್ಸೆಯು ಸ್ಥಾಯಿಭಾವ | |
| 8. | ರೌದ್ರದಲ್ಲಿ | ಕ್ರೋಧವು ಸ್ಥಾಯಿಭಾವ | 968 |
| 9. | ಶಾಂತರಸದಲ್ಲಿ | ಶಮವು ಸ್ಥಾಯಿಭಾವ | |

ಹೀಗೆ ಶೃಂಗಾರ ಮೊದಲಾದ ಒಂಭತ್ತು ರಸಗಳಲ್ಲಿ ಕ್ರಮವಾಗಿ ರತಿ ಮೊದಲಾದವುಗಳು ಒಂಭತ್ತು ಸ್ಥಾಯಿಭಾವಗಳು ಎಂಬುದಾಗಿ ಕಾವ್ಯಪ್ರಕಾಶದಲ್ಲಿ ತಿಳಿಸಲಾಗಿದೆ. 969

## 183A ಶೃಂಗಾರ ಮೊದಲಾದ ಒಂಭತ್ತುರಸಗಳಲ್ಲಿ ವ್ಯಭಿಚಾರಿಭಾವಗಳು

### (ಶಿಂಗಭೂಪಾಲೀಯಸ ರಸಾರ್ಣವ ಸುಧಾಕರದಲ್ಲಿ ಹಾಗೂ ಅಲಂಕಾರಶಾಸ್ತ್ರದಲ್ಲಿ)

| | | | | | | |
|---|---|---|---|---|---|---|
| 1. | ನಿರ್ವೇದ | 2. | ವಿಷಾದ | 3. | ಗ್ಲಾನಿ | |
| 4. | ದೈನ್ಯ | 5. | ಶ್ರಮ | 6. | ಮದ | |
| 7. | ಗರ್ವ | 8. | ತ್ರಾಸ | 9. | ಶಂಕಾ | |
| 10. | ವ್ಯಾಧಿ | 11. | ಉನ್ಮತ್ತತಾ | | | 970 |

12. ಅಪಸ್ಮೃತಿ 13. ಆವೇಗ 14. ಮೃತಿಭಾವ
15. ಸ್ಮೃತಿ 16. ಧೃತಿ 17. ಮೋಹ
18. ವ್ರೀಡಾ 19. ಆಲಸ್ಯ 20. ಅವಹಿತ್ಥಾ
21. ಉಗ್ರತಾ 971
22. ಜಾಡ್ಯ 23. ಚಿಂತಾ 24. ವಿತರ್ಕ
25. ಮತಿ 26. ಹರ್ಷ 27. ಚಾಪಲ
28. ಅಮರ್ಷ 29. ಔತ್ಸುಕ್ಯ 30. ಅಸೂಯಾ
31. ಸುಪ್ತಿ 972
32. ನಿದ್ರಾ 33. ಪ್ರಬೋಧ

ಇವು ಮೂವತ್ತುಮೂರು ವ್ಯಭಿಚಾರಿಭಾವಗಳು ಶೃಂಗಾರಾದಿರಸಗಳಲ್ಲಿ ಉಂಟಾಗುತ್ತವೆ ಎಂದು ಉಕ್ತವಾಗಿವೆ. 973

## ಶೃಂಗಾರರಸ ಸಾತ್ವಿಕಭಾವಗಳು

### (ಅಲಂಕಾರಶಾಸ್ತ್ರದಲ್ಲಿ)

1. ಸ್ತಂಭ 2. ಪ್ರಲಯ 3. ರೋಮಾಂಚ 4. ಸ್ವೇದ 5. ವೈವರ್ಣ್ಯ 6. ವೇಪಥು 7. ಅಶ್ರು 8. ವೈಸ್ವರ್ಯ ಎಂಬುದಾಗಿ ಇವು ಎಂಟು ಶೃಂಗಾರರಸದಲ್ಲಿ ಸಾತ್ವಿಕ ಭಾವಗಳೆಂದು ಸಂಮತ-ವಾಗಿವೆ. 974

## ಶೃಂಗಾರಾವಸ್ಥೆಗಳು

### (ನಮ್ಮಿಂದ ರಚಿತವಾದ ಸಂಖ್ಯಾರತ್ನಕೋಶದ ವ್ಯಾಖ್ಯಾನ ಪ್ರಭಾವಲಿಯಲ್ಲಿ)

1. ಚಕ್ಷುಃಪ್ರೀತಿ 2. ಮನಸ್ಸಂಗ 3. ಕೃಶತಾ 4. ಜಾಗರ 5. ಅರತಿ 6. ಅಂತ (ಮರಣದ ಪೂರ್ವಾವಸ್ಥೆ) 7. ಹ್ರೀತ್ಯಾಗ 8. ಸಂಕಲ್ಪ 9. ಮೂರ್ಛಾ 10. ಉನ್ಮಾದ ಎಂಬುದಾಗಿ ಹತ್ತು ವಿಧವಾದ ಅವಸ್ಥೆಗಳು ಅಲಂಕಾರಶಾಸ್ತ್ರದಲ್ಲಿ ಚೆನ್ನಾಗಿ ಉಕ್ತವಾಗಿವೆ. 975-975A

## ಸ್ತ್ರೀಜಾತಿಭೇದಗಳು

### (ರತಿರಹಸ್ಯದಲ್ಲಿ)

1. ಪದ್ಮಿನೀ 2. ಹಸ್ತಿನೀ 3. ಶಂಖಿನೀ 4. ಚಿತ್ತಿನೀ ಎಂಬುದಾಗಿ ನಾಲ್ಕು ಬಗೆಯ ಸ್ತ್ರೀಜಾತಿಗಳು ರತಿರಹಸ್ಯದಲ್ಲಿ ಹೇಳಲ್ಪಟ್ಟಿವೆ. 976

## ಸ್ತ್ರೀಯರ ಅವಾಂತರ ಜಾತಿಭೇದಗಳು

(ರತಿರಹಸ್ಯದಲ್ಲಿ)

1.ಮೃಗೀಜಾತಿ 2. ವಡವಾಜಾತಿ 3. ಹರಿಣೀಜಾತಿ ಇವು ಸ್ತ್ರೀಯರ ಮೂರು ಅವಾಂತರ ಜಾತಿಗಳೆಂದು ವಾತ್ಸ್ಯಾಯನನ ಕಾಮಶಾಸ್ತ್ರದಲ್ಲಿ ಹೇಳಿದೆ. **977**

## ಪುರುಷಜಾತಿಭೇದಗಳು

(ರತಿರಹಸ್ಯದಲ್ಲಿ)

1.ಭದ್ರ 2. ದತ್ತ 3.ಕೂಚಿಮಾರ 4.ಪಾಂಚಾಲವೆಂದು. ಇವು ನಾಲ್ಕು ಕ್ರಮವಾಗಿ ಪುರುಷಜಾತಿಗಳೆಂದು ರತಿರಹಸ್ಯದಲ್ಲಿ ಹೇಳಲಾಗಿದೆ. **978**

## ಪುರುಷರ ಅವಾಂತರಜಾತಿಭೇದಗಳು

(ರತಿರಹಸ್ಯದಲ್ಲಿ)

1. ಶಶಿಜಾತಿ 2. ಅಶ್ವಜಾತಿ 3. ವೃಷಜಾತಿ ಇವು ಮೂರು ಕ್ರಮವಾಗಿ ಪುರುಷರಲ್ಲಿರುವ ಅವಾಂತರಜಾತಿಗಳೆಂದು ಕಕ್ಕೋಲನ ರತಿರಹಸ್ಯದಲ್ಲಿ ಹೇಳಲಾಗಿದೆ. **979**

## ಕಾವ್ಯಪ್ರಬಂಧದಲ್ಲಿ ಬರುವ ನಾಲ್ಕು ಬಗೆಯ ನಾಯಕರ ಹೆಸರುಗಳು

(ಅಲಂಕಾರಶಾಸ್ತ್ರದಲ್ಲಿ)

1. ಧೀರೋದಾತ್ತ 2. ಧೀರೋದ್ಧತ 3. ಧೀರಲಲಿತ 4. ಧೀರಶಾಂತ - ಎಂದು ಕ್ರಮವಾಗಿ ಇವರು ನಾಲ್ಕು ಬಗೆಯ ನಾಯಕರು ಕಾವ್ಯಪ್ರಬಂಧದಲ್ಲಿ ಬರುತ್ತಾರೆಂದು ಅಲಂಕಾರಶಾಸ್ತ್ರದಲ್ಲಿ ತಿಳಿಸಿದ್ದಾರೆ. **980-980A**

## ಕಾವ್ಯಪ್ರಬಂಧದಲ್ಲಿ ಬರುವ ನಾಯಕರ ಅವಾಂತರ ಭೇದಗಳು

(ಅಲಂಕಾರಲಕ್ಷಣಶಾಸ್ತ್ರದಲ್ಲಿ)

ನಾಯಕರ ಲಕ್ಷಣ ಹೇಳುವಾಗ 1. ನಾಯಕ 2. ಉಪನಾಯಕ 3.ಪ್ರತಿನಾಯಕರೆಂದು ಮೂರು ಬಗೆಯ ಅವಾಂತರನಾಯಕರಾಗುತ್ತಾರೆಂದು ಲಕ್ಷಣಶಾಸ್ತ್ರದಲ್ಲಿ ಹೇಳಲಾಗಿದೆ. **981**

## ನಾಲ್ಕು ರೀತಿಯ ನಾಯಕರು

(ಅಲಂಕಾರಶಾಸ್ತ್ರದಲ್ಲಿ)

1. ಅನುಕೂಲ 2. ದಕ್ಷಿಣ 3. ಧೃಷ್ಟ 4. ಶಠ - ಹೀಗೆ ಹೆಂಗಸರಿಗೆ ನಾಲ್ಕು ರೀತಿಯ ನಾಯಕರು ಇರುವರೆಂದು ಅಲಂಕಾರಶಾಸ್ತ್ರದಲ್ಲಿ ವಿವರಿಸಲಾಗಿದೆ. **982**

## ನಾಲ್ಕು ರೀತಿಯ ಉಪನಾಯಕರು

(ಅಲಂಕಾರಶಾಸ್ತ್ರದಲ್ಲಿ)

183B 1.ವಿಟ 2. ವಿದೂಷಕ 3. ಚೇಟ 4. ಪೀಠಮರ್ದ - ಎಂಬುದಾಗಿ ಕ್ರಮವಾಗಿ ನಾಲ್ಕು ರೀತಿಯ ಉಪನಾಯಕರು. ಇವರು ನಾಯಕನಿಗೆ ಸಹಾಯಕರಾಗುತ್ತಾರೆ. **983**

## ಎಂಟು ವಿಧ ನಾಯಿಕೆಯರ ಹೆಸರುಗಳು

(ಅಲಂಕಾರಶಾಸ್ತ್ರದಲ್ಲಿ)

1. ಸ್ವಾಧೀನಪತಿಕಾ 2. ಕಲಹಾಂತರಿತಾ 3. ಖಂಡಿತಾ 4. ವಿಪ್ರಲಬ್ಧಾ 5. ಪ್ರೋಷಿತಭರ್ತೃಕಾ **984**

6. ವಿರಹೋತ್ಕಂಠಿತಾ 7. ವಾಸಕಸಜ್ಜಿಕಾ 8. ಅಭಿಸಾರಿಕಾ - ಎಂಬುದಾಗಿ ಎಂಟು ಬಗೆಯ ನಾಯಿಕೆಯರು ಅಲಂಕಾರಶಾಸ್ತ್ರದಲ್ಲಿ ಸ್ಮೃತರಾಗಿದ್ದಾರೆ. **985**

## ಎಂಟು ವಿಧ ನಾಯಿಕೆಯರ ಸಹಾಯಕರಾದ ಚೇಟಿ ಮೊದಲಾದವರ ಹೆಸರುಗಳು

(ಅಲಂಕಾರಶಾಸ್ತ್ರದಲ್ಲಿ)

1. ಪ್ರಾತಿವೇಶಿನಿಕೀ 2. ಚೇಟೀ 3. ಶಿಲ್ಪಿನೀ 4. ಅಂಗಿನೀ 5. ಸಖೀ 6.ಧಾತ್ರೇಯೀ 7. ದೂತೀ 8. ದಾಸೀ - ಎಂಬುದಾಗಿ ಕ್ರಮವಾಗಿ ಇವರು ಎಂಟು ಜನರು ನಾಯಿಕೆಯರಿಗೆ ಸಹಾಯಕರಾದ ಚೇಟಿಯರು ಎಂದು ಅಲಂಕಾರಶಾಸ್ತ್ರದಲ್ಲಿ ಹೇಳಿದೆ. **986-986A**

## ಹೆಂಗಸರ ಕಲಾಸ್ಥಾನಗಳು

(ರತಿರಹಸ್ಯದಲ್ಲಿ ಹೇಳಿರುವ ರೀತಿಯಂತೆ ಬರೆಯಲಾಗುತ್ತವೆ)

ಋತುದಿವಸದ ಪ್ರಾರಂಭದ ದಿನದಲ್ಲಿ ಅಂಗುಷ್ಠ, ಎರಡನೆಯ ದಿವಸದಲ್ಲಿ ಕಾಲು, ಮೂರನೆಯ ದಿವಸದಲ್ಲಿ ಕಾಲಿನಗಂಟು, ನಾಲ್ಕನೆಯ ದಿನದಲ್ಲಿ ಮಂಡಿ, **987**

ಐದನೆಯ ದಿವಸದಲ್ಲಿ ಜಘನ (ಹೆಂಗಸರ ಸೊಂಟದ ಮುಂಭಾಗ), ಆರನೆಯ ದಿನದಲ್ಲಿ ಹೊಕ್ಕಳು, ಏಳನೆಯ ದಿವಸದಲ್ಲಿ ವಕ್ಷಃ (ಎದೆಯ ಭಾಗ) ಸ್ಥಳ, ಎಂಟನೆಯ ದಿವಸದಲ್ಲಿ ಮೊಲೆಗಳು, **988**

ಒಂಬತ್ತನೆಯ ದಿವಸದಲ್ಲಿ ಕಂಕುಳು, ಹತ್ತನೆಯ ದಿವಸದಲ್ಲಿ ಕಂಠ, ಹನ್ನೊಂದನೆಯ ದಿವಸದಲ್ಲಿ ಕೆನ್ನೆ, ಹನ್ನರಡನೆಯ ದಿವಸದಲ್ಲಿ ಕೆಳದುಟಿ, **989**

ಹದಿಮೂರನೆಯ ದಿನದಲ್ಲಿ ಕಣ್ಣು, ಹದಿನಾಲ್ಕನೆಯ ದಿನದಲ್ಲಿ ಮುಂಗುರುಳು, ಹದಿನೈದನೆಯ ದಿನದಲ್ಲಿ ತಲೆ ಹೀಗೆ ಕ್ರಮವಾಗಿ ಅಂಗುಷ್ಠದಿಂದ ಹಿಡಿದು ತಲೆಯವರೆಗೆ ಹದಿನೈದು ಸ್ಥಾನಗಳು ಸ್ತ್ರೀಯರ

ಋತುದಿವಸವು ಪ್ರಾರಂಭವಾದಂದಿನಿಂದ ಹದಿನೈದು ದಿನಗಳು ಪೂರ್ತಾ ಹೆಂಗಸರ ಕಲಾಸ್ಥಾನಗಳೆಂದು ರತಿರಹಸ್ಯದಲ್ಲಿ ಹೇಳಿದೆ. **990-991**

ಋತುದಿವಸದಿಂದ ಕ್ರಮವಾಗಿ ಎಡಗಾಲಿನ ಅಂಗುಷ್ಠದಿಂದ ಆರಂಭಿಸಿ ತಲೆಯವರೆಗೆ ಸ್ತ್ರೀಯರ ಕಲಾಸ್ಥಾನಗಳ ಆರೋಹಣವಾಗುತ್ತದೆ. **992**

ನಂತರ ಋತುಸ್ರಾವವಿಲ್ಲದ ಹದಿನಾರನೆಯ ದಿನಗಳು ಪೂರ್ತಾ ತಲೆಯಿಂದ ಪ್ರಾರಂಭಿಸಿ ಬಲಗಾಲಿನ ಹೆಬ್ಬೆಟ್ಟಿನವರೆಗೆ ಸ್ತ್ರೀಯರ ಹದಿನೈದುಸ್ಥಾನಗಳಲ್ಲಿ ಕಲಾಸ್ಥಾನಗಳ ಅವರೋಹಣವು ಉಂಟಾಗುತ್ತದೆ ಎಂದು ತಿಳಿಯಬೇಕು. **993**

## ಸ್ತ್ರೀಪುರುಷರು ಮುತ್ತು ಕೊಡುವ ಜಾಗಗಳು

### (ಕಕ್ಕೋಕಶಾಸ್ತ್ರದಲ್ಲಿ)

1. ಕಣ್ಣುಗಳು 2. ಕುತ್ತಿಗೆ 3. ಕೆನ್ನೆಗಳು 4. ಗಲ್ಲ 5. ಕೆಳದುಟಿ 6. ನಾಲಿಗೆ 7. ಮೊಲೆಗಳು 8. ಹಣೆ 9. ಹೊಕ್ಕಳು 10.ಗುಹ್ಯಸ್ಥಾನ **994**

ಇವು ಹತ್ತು ಹೆಂಗಸರು ಮತ್ತು ಗಂಡಸರು ಒಬ್ಬರಿಗೊಬ್ಬರು ಮುತ್ತು ಕೊಡುವ ಜಾಗಗಳೆಂದು ಕಕ್ಕೋಕನ ರತಿಶಾಸ್ತ್ರದಲ್ಲಿ ಹೇಳಿದೆ. **995**

## ಹತ್ತುವಿಧವಾದ ದಂತಕ್ಷತಗಳ ಹೆಸರುಗಳು

### (ಹೆಂಗಸರು ಗಂಡಸರು ಒಬ್ಬೊರಿಗೊಬ್ಬರು ಹಲ್ಲಿನಿಂದ ಕಚ್ಚಿದಾಗ ಉಂಟಾಗುವ ಗಾಯದ ಹತ್ತು ವಿಧ ಹೆಸರುಗಳು)

### (ರತಿರಹಸ್ಯದಲ್ಲಿ)

1. ಮಂಡಲಾಕೃತಿ 2. ಕಂಕಣಭೂಷಣ 3. ಛಿನ್ನಾಭ್ರಕ 4. ಬಿಂದು 5. ಮಣಿವಿದ್ರುಮ **996**

6. ಉತ್ಥಾನಕ 7. ಗೂಢಕ 8. ತಿಲ 9. ಕಾಲವಂಚಿತ 10. ಪ್ರವಾಲಮಣಿ

ಇವು ಹತ್ತು ದಂತಕ್ಷತಗಳ ಹೆಸರುಗಳು. ಈ ಹತ್ತು ದಂತಕ್ಷತ ಹೆಸರುಗಳನ್ನು ಕ್ರಮವಾಗಿ ರತಿರಹಸ್ಯದಲ್ಲಿ ಹೇಳಲಾಗಿದೆ. **997-997A**

## ಏಳು ವಿಧವಾದ ನಖಕ್ಷತಗಳ ಬೇರೆ ಬೇರೆ ಹೆಸರುಗಳು

### (ಉಗುರಿನಿಂದ ಮಾಡಿದ ಗಾಯಗಳ ಏಳು ಬಗೆಯ ಹೆಸರುಗಳು)

### (ವಿವೇಕಚಿಂತಾಮಣಿಯಲ್ಲಿ)

1. ಮಯೂರಪ್ಲುತಯೋಗ 2. ಅರ್ಧಚಂದ್ರಯೋಗ 3. ಪಂಚನಖಯೋಗ 4. ಕಮಂಡಲು-ಯೋಗ **998**

5. ಶಶಪ್ಲುತಯೋಗ 6. ಉತ್ಪಲಯೋಗ 7. ದ್ವಂದ್ವಯೋಗ ಇವು ನಖಕ್ಷತಗಳ ಏಳು ಬಗೆಗಳೆಂದು ವಿವೇಕಚಿಂತಾಮಣಿಯಲ್ಲಿ ವರ್ಣಿತವಾಗಿವೆ. 999-999A

184A

## ಬಾಹ್ಯಸುರತ ಕ್ರಿಯೆಯ ಭೇದಗಳು

(ಅನಂಗರಂಗದಲ್ಲಿ)

1. ಸಲ್ಲಾಪ 2. ಚುಂಬನ 3. ಗಾಢಾಲಿಂಗನ 4. ಸ್ತನಪೀಡನ 5. ನಖಕ್ಷತ 6. ತಾಡನ 7. ವಿಗ್ರಹ ಇವು ಗಂಡು-ಹೆಣ್ಣುಗಳು ಒಂದಾಗಿ ಮಾಡುವ ಬಾಹ್ಯಸುರತಕ್ರಿಯೆಯ ಏಳುಬಗೆಗಳೆಂದು ಅನಂಗರಂಗದಲ್ಲಿ ಉಕ್ತವಾಗಿದೆ. 1000-1000A

## ರೇತಸ್ಸು ಬೀಳುವ ಕಾಲದಲ್ಲಿ ಆಗುವ ಚೇಷ್ಟಾಭೇದಗಳು

(ವಾತ್ಸ್ಯಾಯನನ ಕಾಮಶಾಸ್ತ್ರದಲ್ಲಿ)

1. ಮಣಿತ 2. ಪೇಟನ 3. ಪಾದತಾಡನ 4. ಸ್ತನಪೀಡನ 5. ಹಸ್ತಾಘಾತ 6. ಗಾಢಾಲಿಂಗನ 7. ನಖಪೀಡನ 1001

8. ದಂತಾಘಾತ 9. ಕೇಶಾಕರ್ಷಣ 10. ಚುಂಬನ - ಇವು ಗಂಡಸಿನ ರೇತಸ್ಸು ಹೆಣ್ಣಿನ ಯೋನಿಯಲ್ಲಿ ಬೀಳುವ ಕಾಲದಲ್ಲಿ ಆಗುವ ಹತ್ತು ವಿಧವಾದ ಚೇಷ್ಟೆಗಳು. ರಸಿಕರ ಮನೋಹರವಾದ ಈ ಚೇಷ್ಟೆಗಳನ್ನು ವಾತ್ಸ್ಯಾಯನನ ಕಾಮಶಾಸ್ತ್ರದಲ್ಲಿ ಚೆನ್ನಾಗಿ ತಿಳಿಸಲಾಗಿದೆ. 1002-1002A

## ಗಂಡು-ಹೆಣ್ಣುಗಳು ಒಂದಾಗಿ ರತಿಕ್ರೀಡೆಯಾಡುವಾಗ ಆಗುವ ಎಂಬತ್ತನಾಲ್ಕು ಬಗೆಯ ಬಂಧಗಳು

(ಅನಂಗರಂಗದಲ್ಲಿ)

| | | | | |
|---|---|---|---|---|
| 1. | ಚಕ್ರಬಂಧ | 2. | ಪದ್ಮಬಂಧ | |
| 3. | ಭ್ರಮಣಬಂಧ | 4. | ಅಂಬಕಬಂಧ | |
| 5. | ಧೇನುಕಬಂಧ | 6. | ಏಕಪಾದಬಂಧ | |
| 7. | ಘಟಿತಬಂಧ | | | 1003 |
| 8. | ಉಪರತಿಬಂಧ | 9. | ಮರ್ಕಟಬಂಧ | |
| 10. | ಮಕರಬಂಧ | 11. | ಮಾರ್ಜಾಲಬಂಧ | |
| 12. | ವ್ಯಸ್ತಬಂಧ | 13. | ಶುನಕಬಂಧ | |
| 14. | ಶುಕಬಂಧ | | | 1004 |

65. ಸರ್ವತೋಮುಖಬಂಧ 66. ಮಂಡೂಕಬಂಧ
67. ಅದ್ಭುತಬಂಧ 68. ತ್ರಿವಲೀಬಂಧ
69. ನೀಲಬಂಧ 70. ಕರ್ಣಾಭರಣಬಂಧ 1012
71. ತುರಗಾರೋಹಬಂಧ 72. ಅಂಗುಲೀಪೀಡನಬಂಧ
73. ವಿಚಿತ್ರಬಂಧ 74. ಹಾಸ್ಯಬಂಧ
75. ವೀರದರ್ಪವಿನಾಶನಬಂಧ 1013
76. ವಿಟಾಧಿಪತಿಬಂಧ 77. ಸರ್ವಾಂಗಮರ್ದನಬಂಧ
78. ನೀವೀನಿವಾರಣಬಂಧ 79. ಋಕ್ಷಬಂಧ
80. ವಲಿಕಬಂಧ 1014
81. ಶಾರ್ದೂಲಬಂಧ 82. ವೃಷಭಬಂಧ
83. ಕಂದರ್ಪಬಂಧ 84. ಬಂಧರಾಜಬಂಧ 1015

ಇವು ಅನಂಗರಂಗದಲ್ಲಿ ಹೇಳಿರುವ ರತಿಸಾಧನಗಳಾದ ಎಂಭತ್ತನಾಲ್ಕು ಬಂಧಗಳ ಹೆಸರುಗಳು. 1015A

## ದೋಹಲಭೇದಗಳು

### (ಶಿವತತ್ತ್ವರತ್ನಾಕರದಲ್ಲಿ)

ಹೂವು ಬಿಡದ ಮರಗಳು ಹೂಬಿಡುವಂತೆ ಸುಂದರಿಯರು ಮಾಡುವ ಕ್ರಿಯೆಗೆ ದೋಹಲಕ್ರಿಯೆ ಎಂದು ಹೆಸರು. ಶಿವತತ್ತ್ವರತ್ನಾಕರದಲ್ಲಿ ಹತ್ತು ಬಗೆಯ ಮರಗಳು ಹೂಬಿಡುವಂತೆ ಮಾಡುವ ಹತ್ತುವಿಧವಾದ ದೋಹಲಕ್ರಮಗಳನ್ನು ಕ್ರಮವಾಗಿ ಹೇಳಿದೆ. ಅವು ಇಂತಿವೆ -

1. ಅಶೋಕವೆಂಬ ಮರವನ್ನು ಸುಂದರಿಯು ಕಾಲಿನಿಂದ ಒದ್ದರೆ ಅದು ಹೂಬಿಡುತ್ತದೆ. (ಅಶೋಕಮರಕ್ಕೆ ಸುಂದರಿಯ ಪಾದತಾಡನವು ದೋಹಲಕ್ರಿಯೆ)
2. ಸಂಪಿಗೆ ಮರಕ್ಕೆ ತರುಣಿಯು ಬಾಯಿಂದ ಎಂಜಲು ನೀರನ್ನು ಉಗಿದರೆ ಅದು ಹೂಬಿಡುತ್ತದೆ. (ಸಂಪಿಗೆ ಮರಕ್ಕೆ ಗಂಡೂಷಜಲಷ್ಠೀವನದೋಹಲ) 1016

184B 3. ಕುರವಕಗಿಡವನ್ನು (ಗೋರಂಟಿಗಿಡ ಅಥವಾ ಮದರಂಗಿಗಿಡ) ಯುವತಿಯು ತಬ್ಬಿಕೊಂಡರೆ ಅದು ಕೂಡಲೇ ಹೂಬಿಡುತ್ತದೆ. (ಕುರವಕ ಗಿಡಕ್ಕೆ ಯುವತಿಯ ಆಲಿಂಗನದೋಹಲ)

4. ತಿಲಕವೆಂಬ ಮರವನ್ನು ಹೆಂಗಸು ನೋಡಿದರೆ ಅದರಿಂದ ಶುಭವಾಗುತ್ತದೆ. (ತಿಲಕವೃಕ್ಷಕ್ಕೆ ರಮಣೀದರ್ಶನದೋಹಲ) 1017

5. ಮಾವಿನ ಮರವನ್ನು ಮತ್ತಕಾರಿಣಿಯಾದ ತರುಣಿಯು ಮುಟ್ಟಿದರೆ ಅದು ಹೂಬಿಡುತ್ತದೆ. (ಮಾಕಂದವೃಕ್ಷಕ್ಕೆ ತರುಣೀಸ್ಪರ್ಶನದೋಹಲ)

6. ಬಕುಲಗಿಡದ ಬುಡದಲ್ಲಿ ಭಾಮಿನಿಯು ಕುಳಿತರೆ ಅದು ಹೂಬಿಡುತ್ತದೆ. (ಬಕುಲಗಿಡಕ್ಕೆ ಭಾಮಿನಿಯು ಬುಡದಲ್ಲಿ ಕುಳಿತುಕೊಳ್ಳುವುದು ದೋಹಲ) 1018

7. ಕರ್ಣಿಕಾರ ಮರಕ್ಕೆ (ಗಣಿಗಲೆ ಗಿಡ ಅಥವಾ ಕಕ್ಕೆಗಿಡ) ಉತ್ತಮ ಹೆಂಗಸು ಮಾತನಾಡುವುದರಿಂದ ಹೂಬಿಡುತ್ತದೆ. (ಕರ್ಣಿಕಾರ ಮರಕ್ಕೆ ಅದರ ಬುಡದಲ್ಲಿ ಉತ್ತಮ ಸ್ತ್ರೀಯ ಉಪವೇಶನದೋಹಲ)

8. ಒಳ್ಳೆಯ ಹುಬ್ಬುಳ್ಳ ಹೆಂಗಸು ಪುನ್ನಾಗವೃಕ್ಷಕ್ಕೆ (ಸುರಗಿಮರ ಅಥವಾ ಬಿಳಿನೈದಿಲೆ) ನಿಟ್ಟುಸಿರು ಬಿಟ್ಟರೆ ಹೂಬಿಡುತ್ತದೆ. (ಪುನ್ನಾಗವೃಕ್ಷಕ್ಕೆ ಹೆಂಗಸಿನನಿಶ್ವಾಸಸಂಪರ್ಕದೋಹಲ) 1019

9. ಪ್ರಿಯಾಲುವೃಕ್ಷವು (ಮೊರಟೆಗಿಡ) ಕಾಮಿನಿಯ ಸಂಗೀತದಿಂದ ಬೆಳೆದು ಹೂಬಿಡುತ್ತದೆ. (ಪ್ರಿಯಾಲುವೃಕ್ಷಕ್ಕೆ ಕಾಮಿನಿಯ ಗಾನವು ದೋಹಲ)

10. ನಮೇರು ವೃಕ್ಷಕ್ಕೆ (ಸುರಗಿಮರ ಅಥವಾ ಸುರಹೊನ್ನೆಮರ) ಮಾನಿನಿಯ ನಗುವು ಹೂಬಿಡು-ವಂತೆ ಮಾಡುತ್ತದೆ. (ನಮೇರು ವೃಕ್ಷಕ್ಕೆ ಮಾನಿನಿಯ ಹಾಸವು ದೋಹಲ) 1020

ಹೀಗೆ ಹತ್ತು ವಿಧ ಮರಗಳಿಗೆ ಹತ್ತು ವಿಧವಾದ ದೋಹಲಗಳನ್ನು ಕ್ರಮವಾಗಿ ಶಿವತತ್ತ್ವರತ್ನಾಕರದಲ್ಲಿ ಹೇಳಿದೆ. ಈ ರೀತಿ ಮಾಡಿದರೆ ಈ ಮರಗಳು ಕೂಡಲೇ ಹೂ ಬಿಡುತ್ತವೆ. 1021

## ಒಂದುನೂರು ಅಲಂಕಾರಗಳು

### (ಅಲಂಕಾರಶಾಸ್ತ್ರದಲ್ಲಿ)

1. ಮೊದಲಿಗೆ ಉಪಮಾಲಂಕಾರ 2. ಅನನ್ವಯಾಲಂಕಾರ
3. ಉಪಮೇಯೋಪಮಾಲಂಕಾರ 4. ಪ್ರತೀಪಾಲಂಕಾರ 1022
5. ರೂಪಕಾಲಂಕಾರ 6. ಪರಿಣಾಮಾಲಂಕಾರ
7. ಉಲ್ಲೇಖಾಲಂಕಾರ 8. ಸ್ಮೃತಿಮದಲಂಕಾರ
9. ಭ್ರಾಂತಿಮದಲಂಕಾರ
10. ಹತ್ತನೆಯದು ಸಂದೇಹಾಲಂಕಾರ 1023

97. ನಿರುಕ್ತಿ ಅಲಂಕಾರ 1040

98. ವಿಧಿ ಅಲಂಕಾರ 99. ಪ್ರತಿಷೇಧಾಲಂಕಾರ

100. ಹೇತು ಅಲಂಕಾರ

ಇವು ಒಂದು ನೂರು ಮುಖ್ಯವಾದ ಅಲಂಕಾರಗಳು (ಇವು ಅರ್ಥಾಲಂಕಾರಗಳು). ಇವುಗಳನ್ನು ಕಾಳಿದಾಸ ಮೊದಲಾದ ಮಹಾಕವಿಗಳು ತಮ್ಮ ಕಾವ್ಯಗಳಲ್ಲಿ ಪ್ರಯೋಗಿಸಿದ್ದಾರೆ. 1041-1041A

### ಇಪ್ಪತ್ತಾರು ಅಕ್ಷರ ಛಂದಸ್ಸುಗಳು

### ಅವುಗಳಿಂದ ಉಂಟಾದ ವೃತ್ತಗಳ ಭೇದಗಳು, ಅವುಗಳ ಸಂಖ್ಯೆಗಳು

### (ಛಂದಶ್ಶಾಸ್ತ್ರದ ಅನುಸಾರವಾಗಿ ಬರೆಯಲ್ಪಡುತ್ತವೆ)

| | | | | | | |
|---|---|---|---|---|---|---|
| 1. | ಉಕ್ತಾ | 2. | ಅತ್ಯುಕ್ತಾ | 3. | ಮಧ್ಯಾ | |
| 4. | ಪ್ರತಿಷ್ಠಾ | 5. | ಸುಪ್ರತಿಷ್ಠಿಕಾ | 6. | ಗಾಯತ್ರೀ | |
| 7. | ಉಷ್ಣಿಕ್ | 8. | ಅನುಷ್ಟುಪ್ | 9. | ಬೃಹತೀ | |
| 10. | ಪಂಕ್ತಿ | | | | | 1042 |
| 11. | ತ್ರಿಷ್ಟುಪ್ | 12. | ಜಗತೀ | 13. | ಅತಿಜಗತೀ | |
| 14. | ಶಕ್ವರೀ | 15. | ಅತಿಶಕ್ವರೀ | 16. | ಅಷ್ಟಿ | |
| 17. | ಅತ್ಯಷ್ಟಿ | 18. | ಧೃತಿ | | | 1043 |
| 19. | ಅತಿಧೃತಿ | 20. | ಕೃತಿ | 21. | ಪ್ರಕೃತಿ | |
| 22. | ಆಕೃತಿ | 23. | ವಿಕೃತಿ | 24. | ಸಂಕೃತಿ | |
| 25. | ತಿಕೃ | 26. | ಉತ್ಕೃತಿ | | | 1044 |

ಇವು ಇಪ್ಪತ್ತಾರು ಎಲ್ಲ ವೃತ್ತಗಳಿಗೂ ಮೂಲಭೂತವಾದ ಛಂದಸ್ಸುಗಳು. ಇವುಗಳನ್ನು ಛಂದಶ್ಶಾಸ್ತ್ರಜ್ಞರು ತಿಳಿಸಿದ್ದಾರೆ. 1045

ಆಯಾಯಾ ಛಂದಸ್ಸುಗಳಿಂದ ಹುಟ್ಟಿದ ಸುಪ್ರಸಿದ್ಧವಾದ ವೃತ್ತಗಳ ಪ್ರಸ್ತಾರ ರೀತಿಗಳಿಗೆ ಅನುಗುಣವಾಗಿ ಅವುಗಳ ಹೆಸರುಗಳು ಮತ್ತು ಸಂಖ್ಯೆಗಳು ಹೇಳಲ್ಪಡುತ್ತವೆ. 1046

ಅವುಗಳಲ್ಲಿ ಮೊದಲನೆಯ ಛಂದಸ್ಸಿನಲ್ಲಿ ಎರಡು ವೃತ್ತಗಳು ಹೇಳಲ್ಪಟ್ಟಿವೆ. ಎರಡನೆಯ ಛಂದಸ್ಸಿನಲ್ಲಿ ನಾಲ್ಕು ವೃತ್ತಗಳು, ಮೂರನೆಯ ಛಂದಸ್ಸಿನಲ್ಲಿ ಎಂಟು ವೃತ್ತಗಳು. 1047

ನಾಲ್ಕನೆಯ ಛಂದಸ್ಸಿನಲ್ಲಿ ಹದಿನಾರು ವೃತ್ತಗಳು. ಐದನೆಯ ಛಂದಸ್ಸಿನಲ್ಲಿ ಮೂವತ್ತೆರಡು ವೃತ್ತಗಳು. ಆರನೆಯ ಛಂದಸ್ಸಿನಲ್ಲಿ ಅರವತ್ತನಾಲ್ಕು ವೃತ್ತಗಳು. 1048

ಏಳನೆಯ ಛಂದಸ್ಸಿನಲ್ಲಿ ನೂರಿಪ್ಪತ್ತೆಂಟು ವೃತ್ತಗಳು ಹುಟ್ಟಿವೆ. ಉಕ್ತ ಮೊದಲಾದ ಏಳು ಛಂದಸ್ಸುಗಳಲ್ಲಿ ಉಂಟಾದ ಯಾವ ವೃತ್ತಗಳಿವೆಯೋ 1049

ಅವುಗಳ ಬಳಕೆಯು ಲೋಕದಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ಆ ಛಂದಸ್ಸುಗಳಿಂದುಂಟಾದ ವೃತ್ತಗಳ ಪ್ರಯೋಗವು ವೇದಗಳಲ್ಲಿ ಕಂಡುಬರುತ್ತದೆ. 1050

ವೃತ್ತಗಳಲ್ಲಿ ಮಾತ್ರಾವೃತ್ತ ಮತ್ತು ವರ್ಣವೃತ್ತವೆಂದು ಎರಡು ಜಾತಿಗಳಿವೆ. ವರ್ಣವೃತ್ತವು ಸಮವೃತ್ತ, ಅರ್ಧಸಮವೃತ್ತ, 1051

ವಿಷಮವೃತ್ತವೆಂದು ಮೂರು ಬಗೆಯಾಗಿದೆಯೆಂದು ಹೇಳಿದ್ದಾರೆ. ಈ ವೃತ್ತಗಳಲ್ಲಿ ಸ್ವರಗಳನ್ನು ತನ್ನ ಇಚ್ಛಾನುಸಾರ ಬಳಸಬಹುದು. ಸಮವೃತ್ತಗಳಲ್ಲಿ ನಾಲ್ಕು ಪಾದಗಳೂ ಸಮವಾಗಿರುತ್ತವೆಂದು ಹೇಳಿದೆ. 1052

ಅರ್ಧಸಮವೃತ್ತಗಳಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧಗಳು ಇವೆರಡೂ ಒಂದಕ್ಕೊಂದು ಬೇರೆ ಬೇರೆ ಲಕ್ಷಣಗಳಿಂದ ಕೂಡಿರುತ್ತದೆ. 1053

ಕೆಲವರು ಅರ್ಧಸಮವೃತ್ತಗಳಲ್ಲಿ ಒಂದು ಮತ್ತು ಮೂರನೆಯ ಪಾದಗಳು, ಎರಡು ಮತ್ತು ನಾಲ್ಕನೆಯ ಪಾದಗಳು ಪರಸ್ಪರವಾಗಿ ಸಮವಾಗಿರುತ್ತವೆ ಎಂದು ಹೇಳುತ್ತಾರೆ. 1054

ವಿಷಮವೃತ್ತಗಳಲ್ಲಿ ನಾಲ್ಕು ಪಾದಗಳೂ ತಮ್ಮ ತಮ್ಮದೇ ಆದ ಬೇರೆ ಬೇರೆ ಲಕ್ಷಣಗಳಿಂದ ಕೂಡಿದ್ದು ಬೇರೆ ಬೇರೆ ಜಾತಿಗಳಿಂದ ಕೂಡಿರುತ್ತವೆ ಎಂದು ಹೇಳಲ್ಪಟ್ಟಿದೆ. 1055

ಅನುಷ್ಟುಪ್ ಮುಂತಾದ ಛಂದಸ್ಸುಗಳಲ್ಲಿ ಹುಟ್ಟಿದ ಕೆಲವು ಪ್ರಸಿದ್ಧ ವೃತ್ತಗಳನ್ನು ಇಲ್ಲಿ ಇನ್ನು ಮುಂದೆ ಕ್ರಮವಾಗಿ ಪ್ರತ್ಯೇಕವಾಗಿ ತೋರಿಸಿ ತಿಳಿಸಲಾಗುವುದು. 1056

## I. ಅನುಷ್ಟುಪ್‌ಛಂದಸ್ಸಿನಲ್ಲಿ

1. ವಿದ್ಯುನ್ಮಾಲಾವೃತ್ತ  2. ಚಿತ್ರಪದಾವೃತ್ತ
3. ವಿತಾನವೃತ್ತ  4. ಪ್ರಮಾಣಿಕಾವೃತ್ತ
5. ಸಮಾನಿಕಾವೃತ್ತ  6. ಹಂಸರುತಾವೃತ್ತ
7. ಮಾಣವಕಾ ಎಂಬ ಹೆಸರಿನ ವೃತ್ತ 1057
8. ನಗಸ್ವರೂಪಿಣೀ - ಮೊದಲಾದ ವೃತ್ತಗಳು ಎಂಟನೆಯ ಈ ಅನುಷ್ಟುಪ್- ಛಂದಸ್ಸಿನಲ್ಲಿ ಬರುತ್ತವೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಈ ಛಂದಸ್ಸಿನಲ್ಲಿ ಹಾಗೂ ಮುಂದೆ ಬರುವ ಛಂದಸ್ಸುಗಳಲ್ಲಿ ಉಂಟಾಗುವ ವೃತ್ತಭೇದಗಳನ್ನು ಭಾಷಾ, ಅರ್ಥ, ಸಮುದ್ರ ಮೊದಲಾದ ಸಂಜ್ಞಾವಾಚಕಶಬ್ದಗಳಿಂದ ತಿಳಿಸಲಾಗಿದೆ. ಈ ಅನುಷ್ಟುಪ್ ಛಂದಸ್ಸಿನಲ್ಲಿ ಒಟ್ಟು 256 ವೃತ್ತಗಳು ಉಂಟಾಗಿವೆ. || ೮ || 1058

(ಭಾಷಾ ಎಂದರೆ 6. ಷಡ್ಭಾಷಾಚಂದ್ರಿಕಾಗ್ರಂಥದಲ್ಲಿ ಷಟ್‌ಭಾಷಾ ಎಂದು ಹೇಳಿದೆ. ಭಾಷಾ ಶಬ್ದಕ್ಕೆ 6 ಎಂದು ಅರ್ಥ. ಅರ್ಥಗಳು - ನಾಟಕಲಕ್ಷಣದಲ್ಲಿ ಬೀಜ, ಬಿಂದು, ಪತಾಕ, ಪ್ರಕರೀ, ಕಾರ್ಯವೆಂದು ಐದು ಅರ್ಥಪಂಚಕಗಳು ಬರುವುದರಿಂದ ಅರ್ಥ ಶಬ್ದಕ್ಕೆ 5 ಎಂದು ಪರಿಗಣನೆ. ಅಕ್ಷಿ - ಕಣ್ಣುಗಳು 2. ಸಂಖ್ಯೆಗಳನ್ನು ಎಡಭಾಗದಿಂದ ಓದಬೇಕಾದ್ದರಿಂದ 256 ಭೇದಗಳೆಂದು ಪರಿಗಣಿತವಾಗಿದೆ.) ಮುಂದಿನ ಛಂದಸ್ಸುಗಳಲ್ಲಿ ಹಿಂದಿನ ವೃತ್ತಸಂಖ್ಯೆಯು ದ್ವಿಗುಣಿತವಾಗುತ್ತಾ ಹೋಗುತ್ತದೆ.)

II. ಬೃಹತೀಛಂದಸ್ಸಿನಲ್ಲಿ

185B 1. ವಸಂತತಿಲಕಾವೃತ್ತ 2. ಭುಜಗಶಿಶುಭೃತ್‌ವೃತ್ತ

3. ಹಲಮುಖ್ಯವೃತ್ತ 4. ಮಣಿಬಂಧವೃತ್ತ 1059

5. ಉತ್ಸುಕವೃತ್ತ

ಮುಂತಾದ 512 ವೃತ್ತಗಳು ಒಂಭತ್ತನೆಯ ಈ ಬೃಹತೀ ಛಂದಸ್ಸಿನಲ್ಲಿ ಉಂಟಾಗುತ್ತವೆ. || ೯ || 1060

(ದ್ವಂದ್ವ - 2 ರೂಪ - (ರೂಪವೆಂಬ ಗುಣ) 1 ಪ್ರಾಣ - ಪ್ರಾಣ, ಅಪಾನಾದಿ ಪಂಚಪ್ರಾಣಗಳು 5 ಅಲ್ಲಿಗೆ 512 ಒಟ್ಟು ವೃತ್ತಗಳು)

III. ಪಂಕ್ತಿಛಂದಸ್ಸಿನಲ್ಲಿ

1. ಮಯೂರಸಾರಿಣೀವೃತ್ತ 2. ಶುದ್ಧವಿರಾಡ್‌ವೃತ್ತ

3. ಚಂಪಕಮಾಲಿಕಾವೃತ್ತ 4. ಮನೋರಮಾವೃತ್ತ

5. ರುಕ್ಮವತೀವೃತ್ತ 6. ಪ್ರಮತ್ತಾವೃತ್ತ

7. ಕೌಮುದೀವೃತ್ತ 1061

8. ಪಣವವೃತ್ತ ಇವೇ ಮುಂತಾದ 1024 ವೃತ್ತಗಳು.

ಈ ಹತ್ತನೆಯ ಪಂಕ್ತಿ ಛಂದಸ್ಸಿನಲ್ಲಿ ಉಂಟಾಗುತ್ತವೆ. || ೧೦ || 1062

(ಅಂಬುಧಿ (ಸಮುದ್ರ) - 4 ; ಪಾದ (ಕಾಲುಗಳು) 2 ; ಅರ್ಥ - 0 ; ಚಂದ್ರ - 1 ಒಟ್ಟು ವೃತ್ತಗಳ ಸಂಖ್ಯೆ 1024)

IV. ತ್ರಿಷ್ಟುಪ್‌ಛಂದಸ್ಸಿನಲ್ಲಿ

1. ಇಂದ್ರವಜ್ರಾವೃತ್ತ 2. ಉಪೇಂದ್ರವಜ್ರಾವೃತ್ತ

3. ಸುಮುಖೀವೃತ್ತ 4. ಶ್ರೀವೃತ್ತ

5. ಉಪಸ್ಥಿತಾವೃತ್ತ 6. ರಥೋದ್ಧತಾವೃತ್ತ
7. ಇಂದ್ರಮಾಲಾವೃತ್ತ 8. ಚಂದ್ರಲೇಖಾವೃತ್ತ
9. ಶಾಲಿನೀವೃತ್ತ 1063
10. ವಾತೋರ್ಮಿೀವೃತ್ತ 11. ಮೌಕ್ತಿಕೀಮಾಲಾವೃತ್ತ
12. ದೋಧಕವೃತ್ತ 13. ಸ್ವಾಗತವೆಂಬ ಹೆಸರಿನ ವೃತ್ತ
14. ಶಿಖಂಡಕವೃತ್ತ 15. ಭ್ರಮರವಿಲಸಿತವೃತ್ತ
16. ಮುದ್ರಿಕಾ ಎಂಬ ಹೆಸರಿನ ವೃತ್ತ 1064
17. ಶ್ಯೇನಿಕೋಪಸ್ಥಿತವೃತ್ತ 18. ಮತ್ತಾವೃತ್ತ

ಇವೇ ಮುಂತಾದ 2048 ವೃತ್ತಗಳು ಈ ಹನ್ನೊಂದನೆಯ ತ್ರಿಷ್ಟುಪ್‌ಛಂದಸ್ಸಿನಲ್ಲಿ ಹೇಳಲ್ಪಟ್ಟಿವೆ. || ೧೧ || 1065

(ವೃತ್ತಗಳ ಸಂಖ್ಯಾಗಣನೆ - ಆಯ - 8 ; ಅಬ್ಧಿ (ಸಮುದ್ರ) 4 ; ನಖ - ಕಾಲ್ಬೆರಳು-ಕೈಬೆರಳುಗಳಿಂದ ಉಗುರುಗಳು ಒಟ್ಟು 20 - ಒಟ್ಟು ವೃತ್ತಗಳ ಸಂಖ್ಯೆ 2048)

## V. ಜಗತೀಛಂದಸ್ಸಿನಲ್ಲಿ

1. ಜಲೋದ್ಧತಗತಿವೃತ್ತ 2. ಇಂದ್ರವಂಶಾವೃತ್ತ
3. ದ್ರುತವಿಲಂಬಿತವೃತ್ತ 4. ಪ್ರಿಯಂವದಾವೃತ್ತ
5. ಕುಸುಮಾವೃತ್ತ 6. ವಿಚಿತ್ರಾವೃತ್ತ
7. ಸ್ರಗ್ವಿಣೀವೃತ್ತ 8. ಪುಟವೃತ್ತ 1066
9. ಕಾಂತೋತ್ಪೀಡಾವೃತ್ತ 10. ಭುಜಂಗಪ್ರಯಾತಾವೃತ್ತ
11. ತೋಟಕವೃತ್ತ 12. ಚಂದ್ರವರ್ತ್ಮವೃತ್ತ
13. ಪ್ರಮುದಿತವದನಾವೃತ್ತ 14. ಪ್ರಮಿತಾಕ್ಷರಾವೃತ್ತ 1067
15. ಮಣಿಮಾಲಾವೃತ್ತ 16. ಜಲಧರಮಾಲಾವೃತ್ತ
17. ವಂಶಸ್ಥವೃತ್ತ 18. ವೈಶ್ವದೇವೀವೃತ್ತ
19. ತಾಮರಸವೃತ್ತ 20. ಸ್ವಾಗತವೃತ್ತ
21. ಲಲಿತಾವೃತ್ತ 22. ಉಜ್ವಲಾವೃತ್ತ 1068

ಮುಂತಾದ 4096 ವೃತ್ತಗಳು ಈ ಹನ್ನೆರಡನೆಯ ಜಗತೀ ಛಂದಸ್ಸಿನಲ್ಲಿ ಬರುತ್ತವೆ. || ೧೨ || 1069

(ಭಾಷಾ - 6, ಅಂಕ - 9 ಅಂಕ ಶಬ್ದಕ್ಕೆ 9 ಎಂದು ಅರ್ಥ. (ಅಲ್ಲದೆ ದಶರೂಪಕಗಳಲ್ಲಿ ಅಂಕವು 9ನೆಯದು. ಹಾಗಾಗಿ ಅಂಕ ಶಬ್ದಕ್ಕೆ 9 ಎಂದು ಗಣನೆ) ಆಕಾಶ - 0 ; ಜಲಧಿ (ಸಮುದ್ರ) - 4 - ಒಟ್ಟು ವೃತ್ತಗಳು 4096)

## VI. ಅತಿಜಗತೀಛಂದಸ್ಸಿನಲ್ಲಿ

1. ಚಂಚರೀಕಾವಲೀವೃತ್ತ 2. ಗೌರೀವೃತ್ತ
3. ಚಂದ್ರಿಕಾವೃತ್ತ 4. ಮತ್ತಭಾಸಿನೀವೃತ್ತ
5. ಕ್ಷಮಾವೃತ್ತ 6. ರುಚಿರಾವೃತ
7. ಮತ್ತಮಯೂರಾವೃತ್ತ 8. ಮಂಜುಭಾಷಿಣೀವೃತ್ತ **1070**
9. ಪ್ರಹರ್ಷಿಣೀವೃತ್ತ 10. ಉರ್ವಶೀವೃತ್ತ
11. ಪ್ರಪದಾವೃತ್ತ 12. ಸುಮಂಗಲೀವೃತ್ತ

ಇವೇ ಮುಂತಾದ 8192 ವೃತ್ತಗಳು ಈ ಹದಿಮೂರನೆಯ ಅತಿಜಗತೀಛಂದಸ್ಸಿನಲ್ಲಿ ಉಂಟಾಗುತ್ತವೆ. || ೧೩ || **1071-1071A**

(ಭುಜ - 2 ; ವೀರ - ನಂದ, ಸುನಂದ, ಉಪನಂದ, ಪ್ರನಂದ, ಲೋಕನಂದ, ಕುರುನಂದ, ಪ್ರಿಯನಂದ, ಮಿತ್ರನಂದ, ವಿನಂದ ಎಂದು ಒಂಭತ್ತು ಜನ ನವನಂದರು ವೀರರು. ಹಾಗಾಗಿ ಸಂಖ್ಯೆ - 9 ; ಸ್ಥಿತ - ಇರುವ ದೇವ ಒಬ್ಬನೇ - 1 ; ಸ್ತಂಬೇರಮ - ಆನೆ.ಅಷ್ಟದಿಗ್ಗಜಗಳು ಪ್ರಸಿದ್ಧವಾದ್ದರಿಂದ 8 ಎಂದು ಅರ್ಥ. ಒಟ್ಟು ವೃತ್ತಗಳ ಸಂಖ್ಯೆ 8192)

## VII. ಶಕ್ವರೀಛಂದಸ್ಸಿನಲ್ಲಿ

1. ವಸಂತತಿಲಕಾವೃತ್ತ 2. ಇಂದುವದನಾವೃತ್ತ
3. ಮಧುಮಾಧವೀವೃತ್ತ 4. ಸುಕೇಸರವೃತ್ತ
5. ಅಲೋಲಾವೃತ್ತ 6. ಕುಮಾರೀವೃತ್ತ
7. ನವನಂದಿನೀವೃತ್ತ **1072**
8. ಪ್ರಭಾಷಿಣೀವೃತ್ತ - ಇವೇ ಮುಂತಾದ 16384 ವೃತ್ತಗಳು ಈ ಶಕ್ವರೀಛಂದಸ್ಸಿನಲ್ಲಿ ಆಗುತ್ತವೆ. || ೧೪ || **1073**

(ವಾರ್ಧಿ (ಸಮುದ್ರ) - 4 ; ನಾಗ - ಆನೆ (ಅಷ್ಟದಿಗ್ಗಜಗಳು) - 8 ; ಅಗ್ನಿ - ಗಾರ್ಹಪತ್ಯ, ಆಹವನೀಯ, ದಾಕ್ಷಿಣಾಗ್ನಿ ಎಂದು ಮೂರು ಅಗ್ನಿಗಳು. ಆದ್ದರಿಂದ - 3 ; ಭೂಪಾಲ (ರಾಜ) - 1. ಮಾಂಧಾತಾ

2. ನಹುಷ 3. ಅಂಬರೀಷ 4. ಸಗರ 5. ಪೃಥು 6. ಕಾರ್ತವೀರ್ಯ ಅರ್ಜುನ 7. ಧರ್ಮರಾಯ 8. ನಳ 9. ದಶರಥ 10. ಶ್ರೀರಾಮ 11. ಯಯಾತಿ 12. ಯದು 13. ಇಕ್ಷ್ವಾಕು 14. ವಿಭೀಷಣ 15. ಭರತ 16. ಉತ್ತಾನಪಾದ - ಎಂದು 16 ಜನರಾದರು. ಹಾಗಾಗಿ ಭೂಪಾಲ ಶಬ್ದಕ್ಕೆ 16 ಎಂದು ಪರಿಗಣನೆ.)

VIII. ಅತಿಶಕ್ವರೀಛಂದಸ್ಸಿನಲ್ಲಿ

1. ಚಂದ್ರರೇಖಾವೃತ್ತ
2. ಚಂದ್ರಸೇನಾವೃತ್ತ
3. ಚಾಮರವೃತ್ತ
4. ಮಣಿಭೂಷಣವೃತ್ತ
5. ಮದಲೇಖಾವೃತ್ತ
6. ಮಣಿಗುಣನಿಕರವೃತ್ತ
7. ಪ್ರಭದ್ರಕವೃತ್ತ 1074
8. ಮಾಲಿನೀವೃತ್ತ
9. ಸ್ರಗ್‌ವೃತ್ತ
10. ಶಶಿಕಲಾವೃತ್ತ

ಇವೇ ಮುಂತಾದ 32768 ಮನೋಹರವಾದ ವೃತ್ತಗಳು ಈ ಅತಿಶಕ್ವರೀಛಂದಸ್ಸಿನಲ್ಲಿ ಬರುತ್ತವೆ. || ೧೫ || 1075-1075A

(ಲಕ್ಷ್ಮೀ - 8 (ಅಷ್ಟಲಕ್ಷ್ಮಿಯರು ಪ್ರಸಿದ್ಧಿ) ; ಭಾಷಾ - 6 (ಷಡ್ಭಾಷಾಚಂದ್ರಿಕಾ ಗ್ರಂಥ ಭಾಷಾ ಎಂದರೆ ಆರು ಎಂದು ತಿಳಿಸುತ್ತದೆ.) ; ಅಶ್ವ (ಕುದುರೆ) - 7 ; ಸೂರ್ಯನ ರಥಕ್ಕೆ ಏಳು ಕುದುರೆಗಳೆಂದು ಪ್ರಸಿದ್ಧಿ. ಹೇರಂಬ - ಗಣಪತಿ (32) 32 ಬಗೆಯ ಗಣಪತಿಗಳು ಮುದ್ಗಲಪುರಾಣದಲ್ಲಿ ಪ್ರಸಿದ್ಧವಾಗಿವೆ. ಹಾಗಾಗಿ 32768 ವೃತ್ತಗಳು.)

IX. ಅಷ್ಟಿಛಂದಸ್ಸಿನಲ್ಲಿ

1. ವಾಣಿನೀವೃತ್ತ
2. ಋಷಭಗತಿಲಸಿತವೃತ್ತ
3. ಪಂಚಚಾಮರವೃತ್ತ

ಇವೇ ಮೊದಲಾದ 65536 ಬಗೆಯ ಅನೇಕ ವೃತ್ತಗಳು ಈ ಹದಿನಾರನೆಯ ಅಷ್ಟಿಛಂದಸ್ಸಿನಲ್ಲಿ ಉಂಟಾಗುತ್ತವೆ. || ೧೬ || 1076-1076A

(ರಾಗ - 36 ರಾಗಗಳು ಪ್ರಸಿದ್ಧವಾದ್ದರಿಂದ 36 ಸಂಖ್ಯೆ ; ಅರ್ಥ - ನಾಟಕದಲ್ಲಿ ಬೀಜ, ಬಿಂದು, ಪತಾಕ, ಪ್ರಕರೀ, ಕಾರ್ಯವೆಂದು ಐದು ಅರ್ಥಪಂಚಕಗಳು ಬರುವುದರಿಂದ ಅರ್ಥ ಶಬ್ದಕ್ಕೆ 5 ಎಂದು ಅರ್ಥ ; ಬಾಣ - ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲಗಳೆಂದು ಮನ್ಮಥನ ಪಂಚಬಾಣಗಳು ಪ್ರಸಿದ್ಧವಾಗಿರುವುದರಿಂದ ಬಾಣ ಶಬ್ದಕ್ಕೆ 5 ಎಂದು ಅರ್ಥ. ಭೃಂಗಾಂಘ್ರಿ - ದುಂಬಿಗೆ ಆರು ಕಾಲುಗಳಾದ್ದರಿಂದ - 6 ಎಂದು ಅರ್ಥ. ಅಲ್ಲಿಗೆ ವೃತ್ತಭೇದಗಳು ಒಟ್ಟು 65536)

X. ಅತ್ಯಷ್ಟಿಛಂದಸ್ಸಿನಲ್ಲಿ

1. ಮಂದಾಕ್ರಾಂತಾವೃತ್ತ 2. ವಂಶಪತ್ರಪತಿತವೃತ್ತ

3. ಹರಿಣೀವೃತ್ತ 4. ಪೃಥ್ವೀವೃತ್ತ

5. ಶಿಖರಿಣೀವೃತ್ತ 6. ನಕ್ಕುಟಕವೃತ್ತ

7. ಕೋಕಿಲಕವೃತ್ತ 1077

ಇವೇ ಮುಂತಾದ 131072 ಬಗೆಯ ವೃತ್ತಗಳು ಈ ಗುಹಸಂಖ್ಯೆಯ ಹದಿನೇಳನೆಯ ಅತ್ಯಷ್ಟಿಛಂದಸ್ಸಿನಲ್ಲಿ ಉಂಟಾಗುತ್ತವೆ. || ೧೭ || 1078

ಶ್ರೀತತ್ತ್ವನಿಧಿಯ 'ಶಿವನಿಧಿ'ಯಲ್ಲಿ 17 ಬಗೆಯ ಸುಬ್ರಹ್ಮಣ್ಯನನ್ನು ಹೇಳಿದ್ದಾರೆ. ಗುಹ ಎಂದರೆ ಸುಬ್ರಹ್ಮಣ್ಯ. ಹಾಗಾಗಿ ಗುಹ ಶಬ್ದಕ್ಕೆ 17 ಎಂದು ಅರ್ಥ.

(ಅದೇ ರೀತಿ ಪಾದ - 2 ; ಅಶ್ವ - 7 ; ಪಂಕ್ತಿ - ಪಂಕ್ತಿ ಶಬ್ದಕ್ಕೆ 10 ಎಂದು ಅರ್ಥ. (ಪಂಕ್ತಿ ಛಂದಸ್ಸಿನಲ್ಲಿ ಪಾದವೊಂದರಲ್ಲಿ 10 ಅಕ್ಷರಗಳು ಬರುತ್ತವೆ). ಶಕ್ತಿ - 3 (ರಾಜರಲ್ಲಿರುವ ಪ್ರಭು, ಮಂತ್ರ, ಉತ್ಸಾಹಗಳೆಂಬ 3 ಶಕ್ತಿಗಳು) ಇಂದು - ಚಂದ್ರ 1. ಅಲ್ಲಿಗೆ ಒಟ್ಟು ವೃತ್ತಗಳು 131072).

XI. ಧೃತಿಛಂದಸ್ಸಿನಲ್ಲಿ

1. ನಿಶಾವೃತ್ತ 2. ಕುಸುಮಿತಲತಾವೃತ್ತ

3. ಹರಿಣಪ್ಲುತಾವೃತ್ತ 4. ಶೇಖರಕಲಿಕಾವೃತ್ತ

5. ಹರಿನರ್ತಕವೃತ್ತ 1079

ಇವೇ ಮುಂತಾದ 262144 ಬಗೆಯ ವೃತ್ತಗಳು ಈ ಹದಿನೆಂಟನೆಯ ಧೃತಿಛಂದಸ್ಸಿನಲ್ಲಿ ಕ್ರಮವಾಗಿ ಬರುತ್ತವೆ. || ೧೮ || 1080

(ಕೃತ - ಕೃತ, ತ್ರೇತ, ದ್ವಾಪರ, ಕಲಿ ಎಂದು ನಾಲ್ಕು ಯುಗಗಳು. ಆದ್ದರಿಂದ 4 ಎಂದು ಅರ್ಥ. ಯುಗ - ಇಲ್ಲಿ ಯುಗ ಶಬ್ದಕ್ಕೆ ಮನ್ವಂತರವೆಂದು ಅರ್ಥ ತೆಗೆದುಕೊಂಡರೆ ಮನ್ವಂತರಗಳು. ಸ್ವಯಂಭೂ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸೂರ್ಯಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿಗಳೆಂದು 14. ಹಾಗಾಗಿ ಯುಗ ಶಬ್ದಕ್ಕೆ 14 ಎಂದು ಅರ್ಥ. ಸ್ವರ್ಗ - ಸ್ವರ್ಗವು ಸಶರೀರಸ್ವರ್ಗ, ಅಶರೀರಸ್ವರ್ಗ ಎಂದು ಎರಡು ವಿಧವಾದ್ದರಿಂದ ಸ್ವರ್ಗಶಬ್ದಕ್ಕೆ 2 ಎಂದು ಅರ್ಥ. ಛಂದಸ್ - ಉಕ್ತಾದಿ ಛಂದಸ್ಸುಗಳು 26. ಅಲ್ಲಿಗೆ ವೃತ್ತಗಳು ಒಟ್ಟು 262144.)

XII. ## ಅತಿಧೃತಿಛಂದಸ್ಸಿನಲ್ಲಿ

1. ಶಾರ್ದೂಲವಿಕ್ರೀಡಿತವೃತ್ತ 2. ಮೇಘವಿಸ್ಫೂರ್ಜಿತವೃತ್ತ

ಇವೇ ಮುಂತಾದ 524288 ಬಗೆಯ ವೃತ್ತಗಳು ಈ ಹತ್ತೊಂಭತ್ತನೆಯ ಅತಿಧೃತಿಛಂದಸ್ಸಿನಲ್ಲಿ ಸ್ಫುಟವಾಗಿ ಉಕ್ತವಾಗಿವೆ. || ೧೯ || **1081-1081A**

(ಅಹಿ - ಹಾವು ಎಂದು ಹೆಸರು. ಅನಂತ, ಕುಳಿಕ, ವಾಸುಕಿ, ಶಂಬಾಪಾಲ, ತಕ್ಷಕ, ಪದ್ಮ, ಮಹಾಪದ್ಮ, ಕಾರ್ಕೋಟಕ ಎಂದು ಎಂಟು ನಾಗಗಳು ಪ್ರಸಿದ್ಧವಾಗಿವೆ. ಹಾಗಾಗಿ ಅಹಿ ಶಬ್ದಕ್ಕೆ 8 ಎಂದು ಅರ್ಥ. ಇಭ - ಆನೆ. ಅಷ್ಟದಿಗ್ಗಜಗಳಾದ್ದರಿಂದ 8 ಎಂದು ಅರ್ಥ. ನೇತ್ರ - ಎರಡು ಕಣ್ಣುಗಳು 2. ಅಬ್ಧಿ (ಸಮುದ್ರ) - 4. ಬಾಹು - ಕೈಗಳು 2. ಬಾಣ - ಮನ್ಮಥನ ಐದು ಪುಷ್ಪಬಾಣಗಳು - 5. ಅಲ್ಲಿಗೆ ವೃತ್ತಗಳ ಒಟ್ಟು ಸಂಖ್ಯೆ 524288.)

XIII. ## ಕೃತಿಛಂದಸ್ಸಿನಲ್ಲಿ

1. ಮತ್ತೇಭವಿಕ್ರೀಡಿತವೃತ್ತ 2. ಸುವದನಾ ಎಂಬ ಹೆಸರಿನ ವೃತ್ತ ಇವೇ ಮೊದಲಾದ 1048576 ವೃತ್ತಗಳು. ಈ ಇಪ್ಪತ್ತನೆಯ ಕೃತಿಛಂದಸ್ಸಿನಲ್ಲಿ ಕ್ರಮವಾಗಿ ಬರುತ್ತವೆ. || ೨೦ || **1082-1082A**

(ಭಾಷಾ - 6 ; ಅಶ್ವ - 7 ; ಶರ (ಬಾಣ) - 5 ; ನಾಗ (ಆನೆ) - 8 ; ಅಬ್ಧಿ (ಸಮುದ್ರ)4 ; ಪಂಕ್ತಿ - 10 ಎಂಬ ಕ್ರಮದಂತೆ ಒಟ್ಟು ವೃತ್ತಗಳು 1048576.)

XIV ## ಪ್ರಕೃತಿಛಂದಸ್ಸಿನಲ್ಲಿ

1. ಸ್ರಗ್ಧರಾವೃತ್ತ 2. ಕನಕಲತಿಕಾವೃತ್ತ 3. ಪಂಚಕಾವಲಿವೃತ್ತ 4. ಕನಕಮಾಲಾವೃತ್ತ ಇವೇ ಮೊದಲಾದ ವೃತ್ತಗಳು ಅನುಕ್ರಮವಾಗಿ **1083**

ಈ ಇಪ್ಪತ್ತೊಂದನೆಯ ಪ್ರಕೃತಿಛಂದಸ್ಸಿನಲ್ಲಿ ಉಂಟಾಗುತ್ತವೆ. ಇಲ್ಲಿ 2097152 ಬಗೆಯ ವೃತ್ತಗಳು ಆಗುತ್ತವೆ. || ೨೧ || **1084**

(ದ್ವಂದ್ವ - 2 ; ಅರ್ಥ - (ಅರ್ಥಪಂಚಕಗಳು ನಾಟಕದಲ್ಲಿ) - 5 ; ಭೂಮಿ - 1 ; ಶೈಲ - (ಹಿಮಾಲಯ, ನಿಷಧ, ವಿಂಧ್ಯ, ಮಾಲ್ಯವಂತ, ಪಾರಿಯಾತ್ರಕ, ಗಂಧಮಾದನ, ಹೇಮಕೂಟ-ವೆಂದು ಏಳು ಪರ್ವತಗಳು ಪ್ರಸಿದ್ಧವಾಗಿವೆ) ಆದ್ದರಿಂದ ಶೈಲ ಶಬ್ದಕ್ಕೆ 7 ಎಂದು ಅರ್ಥ. ಅಂಕ - ಸಂಖ್ಯೆಗಳು 1 ರಿಂದ 9 ಪ್ರಸಿದ್ಧವಾದ್ದರಿಂದ ಅಂಕ ಶಬ್ದಕ್ಕೆ 9 ಎಂದು. ನಖರ - ಉಗುರುಗಳು 20 ಎಂದು. ಕ್ರಮವಾಗಿ 2097152 ಬಗೆಯ ವೃತ್ತಗಳು ಆಗುತ್ತವೆ.)

XV. ## ಆಕೃತಿಛಂದಸ್ಸಿನಲ್ಲಿ

1. ಮಹಾಸ್ರಗ್ಧರಾ 2. ಪ್ರಭದ್ರಕ 3. ತುರಂಗಸಮುಚಿತವೃತ್ತ ಇವೇ ಮೊದಲಾದ ವೃತ್ತಗಳು ಈ ಇಪ್ಪತ್ತೆರಡನೆಯ ಛಂದಸ್ಸಿನಲ್ಲಿ ಸ್ಫುಟವಾಗಿ ಬರುತ್ತವೆ. || ೨೨ || **1085-1086**

(ಈ ಛಂದಸ್ಸಿನಲ್ಲಿ ವಾರ್ಧಿ (ಸಮುದ್ರ) - 4 ; ಪೂರ್ಣ - 0 ; ಅಗ್ನಿ - 3 ; ಕೇಂದ್ರ - 4 (ಜ್ಯೋತಿಷ್ಯದಲ್ಲಿ ಲಗ್ನ ಮತ್ತು ಅದರಿಂದ 4, 7 ಮತ್ತು 10ನೆಯ ಸ್ಥಾನಗಳು ಕೇಂದ್ರ-ಸ್ಥಾನಗಳು. ಹಾಗಾಗಿ ಕೇಂದ್ರ ಎಂದರೆ 4 ಸಂಖ್ಯೆ ಆಗುತ್ತದೆ.) ; ಅಂಕ - 9 ; ಭೂಮಿ - 1 ; ಸಮುದ್ರ - 4 ಎಂಬ ಸಂಖ್ಯಾಕ್ರಮದಂತೆ, 4194304 ಬಗೆಯ ವೃತ್ತಗಳು ಆಗುತ್ತವೆ.)

XVI. ## ವಿಕೃತಿಛಂದಸ್ಸಿನಲ್ಲಿ

1. ಮತ್ತಾಕ್ರೀಡಾವೃತ್ತ 2. ಲಲಿತಾವೃತ್ತ ಇವೇ ಮುಂತಾದ ವೃತ್ತಗಳು ಈ ಇಪ್ಪತ್ತಮೂರನೆಯ ವಿಕೃತಿಛಂದಸ್ಸಿನಲ್ಲಿ ಉಂಟಾಗುತ್ತವೆ. || ೨೩ || **1087**

(ಇಲ್ಲಿ ಮಾ - ಲಕ್ಷ್ಮಿ (ಅಷ್ಟಲಕ್ಷ್ಮಿಯರು ಪ್ರಸಿದ್ಧರಾದ್ದರಿಂದ) - 8 ಎಂದು ಸಂಖ್ಯೆ. ಅಬ್ದ - ಸಂವತ್ಸರಗಳು (ಪ್ರಭವಾದಿ 60 ಸಂವತ್ಸರಗಳು). ವಸು - ಅಷ್ಟವಸುಗಳು ಪ್ರಸಿದ್ಧವಾದ್ದರಿಂದ - 8 ಎಂದು ಸಂಖ್ಯೆ. ನಾಗ (ಆನೆ) ಅಷ್ಟದಿಕ್ಕುಗಳನ್ನು ಹೊತ್ತಿರುವ ಎಂಟು ಆನೆಗಳು ಪ್ರಸಿದ್ಧವಾಗಿವೆ. ಹಾಗಾಗಿ ನಾಗ ಶಬ್ದಕ್ಕೆ 8 ಎಂದು ಅರ್ಥ. ಅಗ್ನಿ - ಮೂರು ಅಗ್ನಿಗಳು ಪ್ರಸಿದ್ಧವಾದ್ದರಿಂದ ಅಗ್ನಿ ಶಬ್ದಕ್ಕೆ ಸಂಖ್ಯೆ 3 ಎಂದು ಪರಿಗಣನೆ. ಆಯ - 8 (ಮನೆಯನ್ನು ಕಟ್ಟುವಾಗ, ಉದ್ದ-ಅಗಲ, ವಿಸ್ತಾರಗಳ ಸಂಖ್ಯಾಪ್ರಮಾಣಗಳುಳ್ಳ ಎಂಟು ಆಯಗಳನ್ನು ಮುಖ್ಯವಾಗಿ ಹೇಳುತ್ತಾರೆ. ಅವೆಂದರೆ - 1. ಧ್ವಜಾಯ 2. ಧೂಮ್ರಾಯ 3. ಸಿಂಹಾಯ 4. ಶುನಕಾಯ 5. ವೃಷಭಾಯ 6. ಖರಾಯ 7. ಗಜಾಯ 8. ಕಾಕಾಯ ಹಾಗಾಗಿ ಆಯ ಎಂದರೆ ಸಂಖ್ಯೆ 8ನ್ನು ತೆಗೆದುಕೊಳ್ಳಬೇಕು.) - ಎಂಬ ಸಂಖ್ಯಾ ಕ್ರಮಕ್ಕನುಗುಣವಾಗಿ 8388608 ವೃತ್ತಭೇದಗಳು ಉಂಟಾಗುತ್ತವೆ.)

XVII. ## ಸಂಕೃತಿಛಂದಸ್ಸಿನಲ್ಲಿ

1. ತನ್ವೀವೃತ್ತ 2. ಹಸ್ತಿಮಣಿಮಾಲಾವೃತ್ತ ಮೊದಲಾದ ವೃತ್ತಗಳು ಈ 24ನೆಯ ಸಂಕೃತಿ ಛಂದಸ್ಸಿನಲ್ಲಿ ಸ್ಫುಟವಾಗಿ ಉಂಟಾಗುತ್ತವೆ. ಇಲ್ಲಿ 16777216 ಬಗೆಯ ವೃತ್ತಗಳು ಆಗುತ್ತವೆ. || ೨೪ || **1088-1088A**

(ಇಲ್ಲಿ ರಾಜ - ರಾಜ ಶಬ್ದದಿಂದ 1. ಮಾಂಧಾತ 2. ನಹುಷ 3. ಅಂಬರೀಷ 4. ಸಗರ 5. ಪೃಥು 6. ಕಾರ್ತವೀರ್ಯಾರ್ಜುನ 7. ಧರ್ಮರಾಯ 8. ನಳ 9. ದಶರಥ 10. ಶ್ರೀರಾಮ 11. ಯಯಾತಿ

12. ಯದು 13. ಇಕ್ಷ್ವಾಕು 14. ವಿಭೀಷಣ 15. ಭರತ 16. ಉತ್ತಾನಪಾದರೆಂಬ ಹದಿನಾರು ರಾಜರನ್ನು ಗ್ರಹಿಸಬೇಕು. ಹಾಗಾಗಿ ರಾಜಶಬ್ದಕ್ಕೆ - 16 ಎಂದು ಸಂಖ್ಯೆ. ಯುಗ್ಮ (ಜೋಡಿ) - ಸಂಖ್ಯೆ 2. ಅಶ್ವ (ಕುದುರೆ) - ಸಂಖ್ಯೆ 7. ಧಾತು - ಶರೀರದ ಬೆಳವಣಿಗೆಗೆ ಬೇಕಾದ ರಸ, ರಕ್ತ, ಮಾಂಸ, ಮೇದಸ್ಸು, ಮಜ್ಜಾ, ಅಸ್ಥಿ, ವೀರ್ಯಗಳೆಂಬ ಏಳು ಧಾತುಗಳು. ಹಾಗಾಗಿ ಧಾತು ಶಬ್ದಕ್ಕೆ ಸಂಖ್ಯೆ 7. ರಾಜ (ದೊರೆ) - ಸಂಖ್ಯೆ 16. ಈ ಕ್ರಮದಂತೆ 16777216 ವೃತ್ತಭೇದಗಳು ಆಗುತ್ತವೆ.)

## XVIII. ಅತಿಕೃತಿಛಂದಸ್ಸಿನಲ್ಲಿ

1. ಕುಮುದ್ವತೀವೃತ್ತ 2. ಕ್ರೌಂಚಪದಾವೃತ್ತ 3. ತುರಂಗಪದ ಎಂಬ ಹೆಸರಿನ ವೃತ್ತ 4. ಭಾಸ್ಕರ ವಿಲಸಿತವೃತ್ತ, ಇವೇ ಮುಂತಾದ ಸುಮಾರು 33554432 ಬಗೆಯ ವೃತ್ತಗಳು ಈ ಇಪ್ಪತ್ತೈದನೆಯ ಅತಿಕೃತಿಛಂದಸ್ಸಿನಲ್ಲಿ ಹುಟ್ಟುತ್ತವೆ. || ೨೫ || **1089-1090**

(ಹೇರಂಬ (ಗಣಪತಿ) ಶ್ರೀತತ್ತ್ವನಿಧಿಯ ಮೂರನೆಯ ಶಿವನಿಧಿಯಲ್ಲಿ 32 ಬಗೆಯ ಗಣಪತಿಗಳನ್ನು ವಿವರಿಸಿದೆ. ಆದ್ದರಿಂದ ಹೇರಂಬ ಶಬ್ದಕ್ಕೆ ಸಂಖ್ಯೆ 32. ಅಬ್ಧಿ (ಸಮುದ್ರ) - ಸಂಖ್ಯೆ 4. ಕೃತ - ಕೃತ ಮುಂತಾದ ನಾಲ್ಕು ಯುಗಗಳು. ಸಂಖ್ಯೆ - 4.

ಅರ್ಥ - ರೂಪಕದಲ್ಲಿ ಆರಂಭ, ಯತ್ನ, ಪ್ರಾಪ್ತ್ಯಾಶಾ, ನಿಯತಾಪ್ತಿ, ಫಲಾಗಮ ಎಂದು ಐದು ಬಗೆಯ (ಅರ್ಥಪಂಚಕ) ಅಂಶಗಳನ್ನು ಹೇಳಿದ್ದಾರೆ. ಇವಕ್ಕೆ ಅರ್ಥಪಂಚಕಗಳೆಂದು ಹೆಸರು. ಆದ್ದರಿಂದ ಅರ್ಥ ಶಬ್ದಕ್ಕೆ ಸಂಖ್ಯೆ 5 ಎಂದು ಪರಿಗಣನೆ.

ಪುನಃ ಅರ್ಥ - ಸಂಖ್ಯೆ 5. ದೇವ - 33 ಕೋಟಿ ದೇವತೆಗಳು ವೇದಗಳಲ್ಲಿ ಪ್ರಸಿದ್ಧವಾಗಿವೆ. ಕೋಟಿ ಶಬ್ದಕ್ಕೆ ಉಚ್ಚ ಎಂದು ಅರ್ಥ. 33 ಶ್ರೇಷ್ಠದೇವತೆಗಳೆಂದು ಅರ್ಥ. ಆದ್ದರಿಂದ ಇಲ್ಲಿ ದೇವಶಬ್ದಕ್ಕೆ ಸಂಖ್ಯೆ 33 ಎಂದು ಪರಿಗಣನೆ. ಆದ ಕಾರಣ, 33554432 ಬಗೆಯ ವೃತ್ತಗಳು ಈ ಛಂದಸ್ಸಿನಲ್ಲಿ ಉಂಟಾಗುತ್ತವೆ.)

## XIX. ಉತ್ಕೃತಿಛಂದಸ್ಸಿನಲ್ಲಿ

1. ಅಪದಾಹವೃತ್ತ 2. ನವಲತಾವೃತ್ತ 3. ಭುಜಂಗವಿಜೃಂಭಿತವೃತ್ತ ಇವೇ ಮುಂತಾದ ವೃತ್ತಗಳು. ಈ ಇಪ್ಪತ್ತಾರನೆಯ ಉತ್ಕೃತಿಛಂದಸ್ಸಿನಲ್ಲಿ ಆಗುತ್ತವೆ. ಈ ಛಂದಸ್ಸಿನಲ್ಲಿ 67108864 ಬಗೆಯ ವೃತ್ತಗಳು ಉಂಟಾಗುತ್ತದೆ. || ೨೬ || **1091-1091A**

(ತಂತ್ರ - ಉಪಾಯ, ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಬಗೆಯ ಉಪಾಯಗಳು ತಂತ್ರ ಶಬ್ದದ ಅರ್ಥ. ಆದ್ದರಿಂದ ತಂತ್ರಶಬ್ದಕ್ಕೆ ಸಂಖ್ಯೆ 4 ಎಂದು ಪರಿಗಣನೆ.

ಶ್ರೀ - ಶ್ರೀ ಶಬ್ದಕ್ಕೆ ಲಕ್ಷ್ಮೀ, ಸಂಪತ್ತು ಎಂದು ಅರ್ಥಗಳಿವೆ. ರಾಜ್ಯಲಕ್ಷ್ಮೀ, ಧೈರ್ಯಲಕ್ಷ್ಮೀ, ಶೌರ್ಯಲಕ್ಷ್ಮೀ, ಧಾನ್ಯಲಕ್ಷ್ಮೀ, ಜಯಲಕ್ಷ್ಮೀ, ಕೀರ್ತಿಲಕ್ಷ್ಮೀ, ವಿದ್ಯಾಲಕ್ಷ್ಮೀ ಎಂದು ಎಂಟು ಜನ ಲಕ್ಷ್ಮಿಯರು ಪ್ರಸಿದ್ಧರಾಗಿದ್ದಾರೆ. ದಾಸೀಜನರು, ಭೃತ್ಯರು, ಮಿತ್ರರು, ಪುತ್ರರು, ಬಂಧುಗಳು, ಧನಸಮೃದ್ಧಿ, ಧಾನ್ಯಸಮೃದ್ಧಿ, ವಾಹನಗಳೆಂದು ಎಂಟು ಬಗೆಯ ಐಶ್ವರ್ಯಗಳು ಪ್ರಸಿದ್ಧವಾಗಿವೆ. ಆದ್ದರಿಂದ ಶ್ರೀಶಬ್ದಕ್ಕೆ ಸಂಖ್ಯೆ 8 ಎಂದು ಪರಿಗಣನೆ.

ಸಿದ್ಧಿ - ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ ಎಂಬುದಾಗಿ ಸಿದ್ಧಿಗಳು ಎಂಟು ಬಗೆಯಾಗಿರುವುದರಿಂದ, ಸಿದ್ಧಿ ಶಬ್ದಕ್ಕೆ ಸಂಖ್ಯೆ 8 ಎಂದು ಅರ್ಥ.

ಪಂಕ್ತಿ - ಹತ್ತು ಎಂದು ಅರ್ಥ. ಛಂದಸ್ಸಿನಲ್ಲಿ ಪಂಕ್ತಿಯು ಹತ್ತನೆಯದು. ಇದರಲ್ಲಿ ಒಂದು ಪಾದಕ್ಕೆ ಹತ್ತು ಅಕ್ಷರಗಳು ಬರುತ್ತವೆ. ಆದ್ದರಿಂದ ಪಂಕ್ತಿ ಶಬ್ದಕ್ಕೆ ಸಂಖ್ಯೆ 10 ಎಂದು ಪರಿಗಣನೆ.

ಚಕ್ರವರ್ತಿ - ಮಾಂಧಾತಾದಿ 67 ಜನ ಚಕ್ರವರ್ತಿಯರು ಉಕ್ತರಾಗಿರುವುದರಿಂದ ಚಕ್ರವರ್ತಿ ಶಬ್ದಕ್ಕೆ 67 ಎಂದು ಪರಿಗಣನೆ. ಅಲ್ಲಿಗೆ 67108834 ಬಗೆಯ ವೃತ್ತಗಳು ಈ ಛಂದಸ್ಸಿನಲ್ಲಿ ಆಗುತ್ತವೆ.)

ಈ ರೀತಿ ಎಲ್ಲ ಛಂದಸ್ಸುಗಳಲ್ಲೂ ಹುಟ್ಟಿದ ಎಲ್ಲ ವೃತ್ತಗಳನ್ನೂ ಒಟ್ಟುಗೂಡಿಸಿದರೆ ಒಟ್ಟು 134217726 ಬಗೆಯ ಅನೇಕ ವೃತ್ತಗಳು ಉಂಟಾಗುತ್ತವೆ. **1092**

(ಛಂದಸ್ - ಉಕ್ತಾದಿಂದ ಉತ್ಕೃತಿವರೆಗೆ 26 ಛಂದಸ್ಸುಗಳು ಪ್ರಸಿದ್ಧವಾಗಿವೆ. ಆದ್ದರಿಂದ ಛಂದಸ್ ಶಬ್ದಕ್ಕೆ ಸಂಖ್ಯೆ 26 ಎಂದು ಪರಿಗಣನೆ.

ಸಪ್ತಿ (ಕುದುರೆ) - ಸೂರ್ಯನ ರಥಕ್ಕೆ ಏಳು ಕುದುರೆಗಳಾದ್ದರಿಂದ ಸಪ್ತಿ ಶಬ್ದಕ್ಕೆ ಸಂಖ್ಯೆ 7 ಎಂದು ಪರಿಗಣನೆ.

ಅಶ್ವ - ಕುದುರೆ. ಸಂಖ್ಯೆ 7. ಭೂ - ಭೂಮಿ. ಸಂಖ್ಯೆ 1. ಪಾದ (ಕಾಲುಗಳು) - ಸಂಖ್ಯೆ 2. ವಾರ್ಧಿ (ಸಮುದ್ರ) - ಸಂಖ್ಯೆ 4. ವಿಶ್ವ (ವಿಶ್ವೇದೇವತೆಗಳು) - 1. ಸತ್ಯ 2. ವಸು 3. ಧುರಿ 4. ವಿಲೋಚನ 5. ಪುರೂರವ 6. ಆರ್ದ್ರವ 7. ಕಾಮ 8. ಕಾಲಕ 9. ದಕ್ಷ 10. ಕ್ರತು 11. ವಿಶ್ವ 12. ವಸವ 13. ಆದಿತ್ಯ ಎಂದು ವಿಶ್ವೇದೇವತೆಗಳು 13 ಜನ ಪ್ರಸಿದ್ಧರು. ಆದ್ದರಿಂದ ವಿಶ್ವಶಬ್ದಕ್ಕೆ ಸಂಖ್ಯೆ 13 ಎಂದು ಪರಿಗಣನೆ, ಈ ಕ್ರಮದಿಂದ ಈ ಎಲ್ಲ ಛಂದಸ್ಸುಗಳ ಒಟ್ಟು ಸಂಖ್ಯೆಯು 134217726 ಆಗುತ್ತದೆ.)

## ಒಟ್ಟು ಛಂದಸ್ಸುಗಳ ಸಂಖ್ಯಾಪರಿಗಣನೆಯ ಪಟ್ಟಿ

| | | ವೃತ್ತಗಳು |
|---|---|---|
| 1. | ಅನುಷ್ಟುಪ್‌ಛಂದಸ್ಸಿನಲ್ಲಿ | 256 |
| 2. | ಬೃಹತೀಛಂದಸ್ಸಿನಲ್ಲಿ | 512 |
| 3. | ಪಂಕ್ತಿಛಂದಸ್ಸಿನಲ್ಲಿ | 1024 |
| 4. | ತ್ರಿಷ್ಟುಪ್‌ಛಂದಸ್ಸಿನಲ್ಲಿ | 2048 |
| 5. | ಜಗತೀಛಂದಸ್ಸಿನಲ್ಲಿ | 4096 |
| 6. | ಅತಿಜಗತೀಛಂದಸ್ಸಿನಲ್ಲಿ | 8192 |
| 7. | ಶಕ್ವರೀಛಂದಸ್ಸಿನಲ್ಲಿ | 16384 |
| 8. | ಅತಿಶಕ್ವರೀಛಂದಸ್ಸಿನಲ್ಲಿ | 32768 |
| 9. | ಅಷ್ಟಿಛಂದಸ್ಸಿನಲ್ಲಿ | 65536 |
| 10. | ಅಂತ್ಯಷ್ಟಿಛಂದಸ್ಸಿನಲ್ಲಿ | 131072 |
| 11. | ಧೃತಿಛಂದಸ್ಸಿನಲ್ಲಿ | 262144 |
| 12. | ಅತಿಧೃತಿಛಂದಸ್ಸಿನಲ್ಲಿ | 524288 |
| 13. | ಕೃತಿಛಂದಸ್ಸಿನಲ್ಲಿ | 1048576 |
| 14. | ಪ್ರಕೃತಿಛಂದಸ್ಸಿನಲ್ಲಿ | 2097152 |
| 15. | ಆಕೃತಿಛಂದಸ್ಸಿನಲ್ಲಿ | 4194304 |
| 16. | ವಿಕೃತಿಛಂದಸ್ಸಿನಲ್ಲಿ | 8388608 |
| 17. | ಸಂಕೃತಿಛಂದಸ್ಸಿನಲ್ಲಿ | 16777216 |
| 18. | ಅತಿಕೃತಿಛಂದಸ್ಸಿನಲ್ಲಿ | 33554432 |
| 19. | ಉತ್ಕೃತಿಛಂದಸ್ಸಿನಲ್ಲಿ | 67108864 |
| | **ಒಟ್ಟು 19 ಛಂದಸ್ಸುಗಳಿಂದ** | **134217726** |

ಗಣವಿನ್ಯಾಸಗಳ ಭೇದದಿಂದ ವೃತ್ತಗಳು ಒಂದಕ್ಕಿಂತ ಮತ್ತೊಂದು ಬೇರೆ ಬೇರೆಯಾಗುತ್ತವೆ. **1093**

ಅಕ್ಷರ ವೃತ್ತಗಳಲ್ಲಿ ಒಂದು ಗಣದಲ್ಲಿ ಮೂರು ಅಕ್ಷರಗಳಿರುತ್ತವೆ. ಯ, ರ, ತ, ಭ, ಜ, ಸ, ಮ,
ಎಂಬ ಎಂಟು ಅಕ್ಷರಗಳಲ್ಲಿ ಎಂಟು ಗಣಗಳು ಆಗುತ್ತವೆಯೆಂದು ಸ್ಮೃತವಾಗಿವೆ. 1094

I. ಗಣದ ಆದಿ, ಮಧ್ಯ, ಕೊನೆಯ ಅಕ್ಷರಗಳು ಕ್ರಮವಾಗಿ ಲಘುವಾಗಿದ್ದರೆ ಆಗ ಕ್ರಮವಾಗಿ ಯಗಣ, ರಗಣ, ತಗಣಗಳಾಗುತ್ತವೆ. 1095A

(ಆದಿಲಘು + ಮಧ್ಯಗುರು + ಅಂತ್ಯಗುರು = ಯಗಣ) ( ಯಮಾತಾ )

(ಆದಿಗುರು + ಮಧ್ಯಲಘು + ಅಂತ್ಯಗುರು = ರಗಣ) ( ರಾಜಭಾ )

(ಆದಿಗುರು + ಮಧ್ಯಗುರು + ಅಂತ್ಯಲಘು = ತಗಣ) ( ತಾರಾಜ )

II. ಗಣದ ಆದಿ, ಮಧ್ಯ, ಅಂತ್ಯವರ್ಣಗಳು ಗುರುವಾಗಿದ್ದರೆ, ಆಗ ಕ್ರಮವಾಗಿ ಭಗಣ, ಜಗಣ, ಸಗಣಗಳಾಗುತ್ತವೆ. 1095B

(ಆದಿಗುರು + ಮಧ್ಯಲಘು + ಅಂತ್ಯಲಘು = ಭಗಣ) ( ಭಾನಸ )

(ಆದಿಲಘು + ಮಧ್ಯಗುರು + ಅಂತ್ಯಲಘು = ಜಗಣ) ( ಜಭಾನ )

(ಆದಿಲಘು + ಮಧ್ಯಲಘು + ಅಂತ್ಯಗುರು = ಸಗಣ) ( ಸಲಗಂ )

ಗಣದ ಮೂರೂ ಅಕ್ಷರಗಳೂ ಗುರುವಾಗಿದ್ದರೆ ಅದು ಮಗಣ.

(ಆದಿಗುರು + ಮಧ್ಯಗುರು + ಅಂತ್ಯಗುರು = ಮಗಣ) ( ಮಾತಾರ )

ಗಣದ ಮೂರೂ ಅಕ್ಷರಗಳೂ ಲಘುವಾಗಿದ್ದರೆ ಅದು ನಗಣ.

(ಆದಿಲಘು + ಮಧ್ಯಲಘು + ಅಂತ್ಯಲಘು = ನಗಣ) ( ನಸಲ )

("ಯಮಾತಾರಾಜಭಾನಸಲಗಂ" ಎಂದು ಗಣಗಳನ್ನು ಹೇಳುವ ಸೂತ್ರ. ಲ ಎಂದರೆ ಒಂದು ಮಾತ್ರೆ ಲಘು. ಗಂ ಎಂದರೆ ಎರಡು ಮಾತ್ರೆ ಗುರು.)

ವಿಷ್ಣುವು ಮೂರು ಲೋಕಗಳಲ್ಲೂ ನೆಲಸಿರುವಂತೆ ಈ ಎಂಟು ಗಣಗಳಿಂದ ಕಾವ್ಯ ವಾಙ್ಮಯವು ವ್ಯಾಪಿಸಿಕೊಂಡಿದೆ. ಮಾತ್ರಾವೃತ್ತಗಳಲ್ಲಿ ಆರ್ಯಾವೃತ್ತ ಮುಂತಾದ ಯಾವ ವೃತ್ತ-ಭೇದಗಳಿವೆಯೋ, 1096

ಅವುಗಳಲ್ಲಿ ಮುಖ್ಯವಾದ ಸುಮಾರು ಎಂಭತ್ತು ಬಗೆಯ ಮುಖ್ಯವಾದ ವೃತ್ತಗಳ ಹೆಸರು, ಲಕ್ಷಣ-ಗಳನ್ನು ಛಂದೋರತ್ನ, ಹಲಾಯುಧಗ್ರಂಥಗಳಲ್ಲಿ ಉದಾಹರಣಪೂರ್ವಕವಾಗಿ ವಿವರಿಸಿ ತೋರಿ-ಸಿದ್ದಾರೆ. 1097

186B ಮಾತ್ರಾವೃತ್ತಗಳಲ್ಲಿ ಎಲ್ಲ ಕಡೆ ಒಂದು ಗಣಕ್ಕೆ ನಾಲ್ಕು ಮಾತ್ರೆಗಳೆಂದು (ನಾಲ್ಕು ಮಾತ್ರೆಗಳ ಒಂದು ಗಣವೆಂದು) ಹೇಳಲಾಗಿದೆ. ಅವುಗಳಲ್ಲಿ ಭ, ಜ, ಸ, ನ, ಮ ಎಂಬ ಐದೇ ಅಕ್ಷರಗಳು ಬರುತ್ತವೆ. 1098

ಆದಿಯಲ್ಲಿ, ಮಧ್ಯದಲ್ಲಿ, ಕೊನೆಯಲ್ಲಿ ಕ್ರಮವಾಗಿ ಗುರುವು ಬಂದರೆ ಆಗ ಕ್ರಮವಾಗಿ ಭಗಣ, ಜಗಣ, ಸಗಣಗಳಾಗುತ್ತವೆ. ನಾಲ್ಕು ಲಘುಗಳಿಂದ ಕೂಡಿರುವುದು ನಗಣವೆಂದು ತಿಳಿಯಬೇಕು. ಎರಡು ಗುರುಗಳಿರುವುದು ಮಗಣವೆಂದು ಹೇಳಲಾಗಿದೆ. 1099

ಹಿಂದಿನಂತೆ ಗಣವಿನ್ಯಾಸಗಳ ಭೇದದಿಂದ ಮಾತ್ರಾವೃತ್ತಗಳು ಅನೇಕ ವಿಧಗಳಾಗುತ್ತವೆ. ಆಯಾಯಾ ಲಕ್ಷಣಗಳಿಂದ ಕೂಡಿದ ಮಾತ್ರಾವೃತ್ತಗಳು ಮಂಗಳಕರಗಳಾಗಿವೆ. 1100

ಹೀಗೆ ಛಂದಸ್ಸುಗಳ ಹಾಗೂ ಅಲ್ಲಿನ ವೃತ್ತಗಳ ಕ್ರಮವನ್ನು ಸಂಗ್ರಹವಾಗಿ ತಿಳಿಸಲಾಯಿತು. ಛಂದಃ ಶಾಸ್ತ್ರದಲ್ಲಿ ಆ ಎಲ್ಲ ವಿಚಾರಗಳನ್ನೂ ನಿರೂಪಿಸಲಾಗಿದೆ. ಗ್ರಂಥವು ದೊಡ್ಡದಾಗುವುದೆಂಬ ಹೆದರಿಕೆ-ಯಿಂದ ನಾವು ಅವೆಲ್ಲವನ್ನೂ ವಿಶದವಾಗಿ ಹೇಳಿಲ್ಲ. 1101-1101A

## ರಾಜಸ್ತುತಿಗದ್ಯ

ಈ ಗದ್ಯದಲ್ಲಿ ಮುಮ್ಮಡಿಕೃಷ್ಣರಾಜ ಒಡೆಯರ್ ಅವರ ಕುಲದೇವತೆ ಚಾಮುಂಡಾಂಬೆಯ ಮಹಿಮಾತಿಶಯಪರಾಕ್ರಮ ವರ್ಣನೆ ಹಾಗೂ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಪರಾಕ್ರಮಾದಿಗಳ ವರ್ಣನೆಯು ಇದೆ.

ರಣಾಂಗಣದಲ್ಲಿ ನಿರಂತರವಾಗಿ ಆಕಾಶಪರ್ಯಂತ ವ್ಯಾಪಿಸಿಕೊಂಡ, ಚಾಮುಂಡಾಂಬೆಯ ರಣಕಹಳೆ, ಭೇರೀ, ದುಂದುಭಿ ಇತ್ಯಾದಿಗಳ ಶಬ್ದವು ಅಂಧಕ, ಮದನ ಮೊದಲಾದವರ ಹೃದಯಗ್ರಂಥಿಯನ್ನು ನಾಶ ಮಾಡುವಂತಿತ್ತು. ಗಂಧರ್ವಾದಿಗಳ ಅಹಂಕಾರವನ್ನು ಆ ಶಬ್ದವು ನಾಶಮಾಡುವಂತಿತ್ತು. ಶುಂಭ, ನಿಶುಂಭರನ್ನು ಸಂಹರಿಸಿದ ಚಾಮುಂಡಾಂಬೆಯ ಚರಣಗಳೆಂಬ ಕಮಲಪುಷ್ಪಗಳನ್ನು ಮುಮ್ಮಡಿ ಕೃಷ್ಣರಾಜರು ನಮಸ್ಕರಿಸಿ ಆ ಚರಣಕಮಲಗಳ ಸೌರಭವನ್ನು ಆಘ್ರಾಣಿಸುವ ಸಾಮರ್ಥ್ಯ ಹೊಂದಿದ್ದರು. ಇವರು ಸಂಸ್ಕೃತ, ಆಂಧ್ರ, ಕನ್ನಡ ಮುಂತಾದ ಅನೇಕ ಭಾಷೆಗಳಲ್ಲಿ ಅತ್ಯಂತ ಚತುರರಾಗಿದ್ದರು. ಪ್ರತಿದಿನವು ಅನೇಕ ಕಾವ್ಯಾದಿಗಳನ್ನು ರಚಿಸುವುದರಲ್ಲಿ ನಿರತರಾಗಿದ್ದರು. ಉತ್ತಮರಾದ ದೇವತೆಗಳಿಗೆ ಕ್ಷೋಭೆಯನ್ನುಂಟುಮಾಡುವ ಶ್ರೇಷ್ಠ ರಾಕ್ಷಸರನ್ನು ಶಿಕ್ಷಿಸುವುದರಲ್ಲಿ ಇವರು ನಿರತರಾಗಿದ್ದರು. ಸಹಸ್ರಾಕ್ಷನಾದ ಇಂದ್ರ, ಪಕ್ಷಿಧ್ವಜ ವಿಷ್ಣು, ಬ್ರಹ್ಮ, ಅಗ್ನಿ, ಯಕ್ಷೇಶ ಕುಬೇರ ಮುಂತಾದ ದೇವತೆಗಳನ್ನು ರಕ್ಷಿಸಲು ಸದಾ ನಿರತನಾಗಿರುವ ಗರನಗರವೆಂದು ಪ್ರಸಿದ್ಧವಾದ ನಂಜನಗೂಡಿನಲ್ಲಿ ವಾಸಿಸುವ ಮುಕ್ಕಣ್ಣನಾದ ನಂಜುಂಡೇಶ್ವರನ ಕೃಪಾಕಟಾಕ್ಷವನ್ನು ಪಡೆದಿದ್ದವರು ಇವರು. ಪ್ರತಿಪಕ್ಷದ ಶತ್ರುಗಳನ್ನು

ಸದೆಬಡೆಯುವಲ್ಲಿ ನಿರತರಾದ ಇವರ ಕತ್ತಿಯು ಇವರ ಕೈನಲ್ಲಿ ಸದಾ ಇರುತ್ತಿತ್ತು. ಹೀಗೆ ಖಡ್ಗಧಾರಿಗಳಾಗಿ ಕಂಗೊಳಿಸುವ ಇವರು ಚಾಮರಾಜ ಒಡೆಯರ್ ಅವರ ಪುತ್ರರು. ಸಾಹಿತ್ಯಕಾರನಾದ ಭೋಜರಾಜನಂತೆ ಇವರೂ ಸಹ ಉತ್ತಮ ಸಾಹಿತ್ಯಕಾರರಾಗಿ ಕಂಗೊಳಿಸುತ್ತಿದ್ದರು. ಅಪ್ರತಿಮ ಪ್ರಭಾವವುಳ್ಳವರು ಇವರು. ಪರಿಭವವೆನ್ನುವುದನ್ನು ತಿಳಿಯದವರಾಗಿದ್ದರು. ಭಾಗ್ಯಲಕ್ಷ್ಮೀ ಸಂಪನ್ನರಾಗಿ ಅನುದಿನವೂ ದಾನ-ಧರ್ಮಾದಿಗಳನ್ನು ಮಾಡುತ್ತಾ ದಾನಶೂರಕರ್ಣರೆನಿಸಿ, ಮಂಗಳವಾದ ಸೌಭಾಗ್ಯ ಚಿಹ್ನೆಗಳಿಂದಲೂ, ಭಾಗ್ಯಲಕ್ಷ್ಮೀ ಸಂಪನ್ನರಾಗಿ ವರಾಹ, ಶರಭ, ಶಂಖ, ಚಕ್ರ, ಗಂಡಭೇರುಂಡ ಚಿಹ್ನೆಗಳಿಂದ ಕೂಡಿ, ಗಂಡರಗಂಡ, ಮೊದಲಾದ ಶ್ರೇಷ್ಠ ಬಿರುದುಗಳಿಂದ ಭೂಷಿತರಾಗಿ, ಸಾಮಂತರಾಜರೆಂಬ ಇಂದ್ರರ ಅಖಂಡ ಗರ್ವವನ್ನು ಇವರು ಖಂಡಿಸುವ ಶಕ್ತಿ ಹೊಂದಿದ್ದರು. ಉತ್ತಮವಾದ ಮಾತುಗಾರರಾಗಿದ್ದರು. ಪುಂಡರೀಕಾಕ್ಷನಾದ ವಿಷ್ಣುವಿನ ಅನುಕಂಪಕ್ಕೆ ಪಾತ್ರರಾದ ಮಹಾರಾಣಿ ಕೆಂಪನಂಜಮಾಂಬಾದೇವಿಯವರ ಗರ್ಭವೆಂಬ ಕಪ್ಪೆಚಿಪ್ಪಿನ ಸಂಪುಟದಲ್ಲಿ ಮುತ್ತಿನಂತೆ ಹುಟ್ಟಿ ಮುತ್ತಿನಂತೆ ಸುಂದರವಾಗಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ್ ಕಂಠೀರವ ಸಾರ್ವಭೌಮರು ಹುಟ್ಟಿದರು. ಇಂತಹ ಶ್ರೀ ಮುಮ್ಮಡಿ ಕೃಷ್ಣರಾಜ ಕಂಠೀರವ ಸಾರ್ವಭೌಮರು ರಚಿಸಿದ ಶ್ರೀತತ್ತ್ವನಿಧಿಯೆಂಬ ಗ್ರಂಥದಲ್ಲಿ ಚತುರ್ಮುಖಬ್ರಹ್ಮ ಮುಂತಾದವರ ಸ್ವರೂಪವನ್ನು ತಿಳಿಸುವ ಶಾಸ್ತ್ರಸಂಗ್ರಹ ನಿರೂಪಣೆಯಾದ ನಾಲ್ಕನೆಯ ಸಂಪುಟ ಬ್ರಹ್ಮನಿಧಿಯು ಮುಕ್ತಾಯವಾಯಿತು.

187A ಶ್ರೀಕೃಷ್ಣರಾಜೇಂದ್ರರಿಂದ ರಚಿತವಾದ, ಹವಳದ ಮಣಿಯ ಕಾಂತಿಯಂತೆ ಕಂಗೊಳಿಸುವ ಶ್ರೀಮದ್ಬ್ರಹ್ಮ-ನಿಧಿಯೆಂಬ ಪ್ರಸಿದ್ಧವಾದ ಈ ಗ್ರಂಥವು ಬಹುಕಾಲ ಅಭಿವೃದ್ಧಿಯನ್ನು ಹೊಂದಲಿ. **1102**

ಈ ಬ್ರಹ್ಮನಿಧಿಯೆಂಬ ಗ್ರಂಥವನ್ನು ಪ್ರತಿನಿತ್ಯವೂ ಭಕ್ತಿಯಿಂದ ಯಾರು ಪಠಿಸುತ್ತಾರೋ ಅಂತಹ ನರೋತ್ತಮರ ಮುಖಕಮಲದಲ್ಲಿ ವಾಗ್ದೇವೀ ಸರಸ್ವತಿಯು ಸಂತೋಷದಿಂದ ನಲಿಯುವಂತಾಗಲಿ. **1103**

## ಈ ನಾಲ್ಕನೆಯ ಬ್ರಹ್ಮನಿಧಿಯಲ್ಲಿ ಇರುವ ಚಿತ್ರಗಳ ವಿವರಣೆಯನ್ನು ಕೊಡುವ ಶ್ಲೋಕಗಳು

ಉತ್ತಮವಾದ ಹವಳದ ಮಣಿಯಂತೆ ಶೋಭಿಸುವ ನಾಲ್ಕನೆಯ ಈ ಬ್ರಹ್ಮನಿಧಿಯಲ್ಲಿ ಹೇಳಿರುವ ಪರಿವಾರಸಹಿತರಾದ ದೇವತೆಗಳ ವಿವರವನ್ನು ತಿಳಿಸಲಾಗುವುದು. **1104**

1. ಮೊದಲಿಗೆ ನಾಲ್ಕು ಮುಖ ಮತ್ತು ನಾಲ್ಕು ತೋಳುಗಳುಳ್ಳ ಬ್ರಹ್ಮನನ್ನು ಹೇಳಿ ಅನಂತರ 2. ಸರಸ್ವತಿಯನ್ನು 3. ಆಮೇಲೆ ನಾಲ್ಕು ಕೈಗಳ ಸರಸ್ವತಿಯನ್ನು 4. ಅನಂತರ ಎರಡು ಕೈಗಳ ಸರಸ್ವತಿಯನ್ನು ಹೇಳಲಾಗಿದೆ. **1105**

ಅನಂತರ 5. ಆದ್ಯಬ್ರಹ್ಮ 6. ಲೋಕಪಾಲಬ್ರಹ್ಮ 7. ವಿಶ್ವಕರ್ಮಬ್ರಹ್ಮ 8. ಪ್ರಜಾಪತಿ ಬ್ರಹ್ಮ 9. ವಿಧಿಬ್ರಹ್ಮ ಎಂಬುದಾಗಿ ಶಾಸ್ತ್ರದಲ್ಲಿ ಐದು ಜನ ಬ್ರಹ್ಮರು ಹೇಳಲ್ಪಟ್ಟಿದ್ದಾರೆ. **1106**

ಇದರ ನಂತರ 10. ಮರೀಚಿ 11. ಅಂಗಿರಸ್ 12. ಅತ್ರಿ 13. ಪುಲಸ್ತ್ಯ 14. ಪುಲಹ 15. ಕ್ರತು 16. ಕರ್ದಮ 17. ಕಶ್ಯಪ 18. ದಕ್ಷ ಎಂಬುದಾಗಿ ಒಂಭತ್ತು ಜನ ಪ್ರಜೇಶ್ವರರು ಉಕ್ತರಾಗಿದ್ದಾರೆ. **1107**

ಅನಂತರದಲ್ಲಿ 19. ಕಶ್ಯಪ 20. ಅತ್ರಿ 21. ಭರದ್ವಾಜ 22. ವಿಶ್ವಾಮಿತ್ರ 23. ಗೌತಮ 24. ಜಮದಗ್ನಿ 25. ವಸಿಷ್ಠ ಎಂಬುದಾಗಿ ಏಳು ಜನ ಋಷಿಗಳು ಉದಾಹೃತರಾಗಿದ್ದಾರೆ. **1108**

ಇವರ ನಂತರ ವೀಣಾಲೋಲನಾದ, ಬ್ರಹ್ಮನ ಮಗನಾದ 26. ನಾರದ ಮಹಾಮುನಿಯು ಚಿತ್ರಿತನಾಗಿದ್ದಾನೆ. i) ಭೃಗು ii) ವಸಿಷ್ಠ iii) ಸಾವೇದ iv) ಅಂಗಿರಸ್ v) ಪುಲಹ vi) ಕ್ರತು **1109**

vii) ಪುಲಸ್ತ್ಯ viii) ಅತ್ರಿ ix) ಮರೀಚಿ ಎಂಬುದಾಗಿ ಈ ಒಂಭತ್ತು ಜನರು ಋಷಿಗಳೆಂದು ಪ್ರಸಿದ್ಧರಾಗಿದ್ದಾರೆ. ಈ ಒಂಭತ್ತು ಜನ ಮಹರ್ಷಿಗಳ ಆಕಾರಗಳೂ ಒಂದೇ ಆಗಿರುವುದರಿಂದ ಒಂಭತ್ತು ಜನ ಮಹರ್ಷಿಗಳ ಪ್ರತೀಕವಾಗಿ 27. ಒಂದೇ ಚಿತ್ರವನ್ನು ಬರೆಯಲಾಗಿದೆ. **1110**

ಇವರ ನಂತರ 28. ನಾಲ್ಕು ತೋಳುಗಳ ಅಗಸ್ತ್ಯ 29. ಎರಡು ತೋಳುಗಳ ಅಗಸ್ತ್ಯರ ಚಿತ್ರಗಳನ್ನು ಬರೆಯಲಾಗಿದೆ. ಆಮೇಲೆ i) ಗಂಗಾ ii) ಯಮುನಾ iii) ಗೋದಾವರೀ iv) ರೇವಾ v) ಕೃಷ್ಣಾ vi) ತಾಪಿನೀ **1111**

vii) ವೇಣೀ viii) ಸರಸ್ವತೀ ಎಂಬುದಾಗಿ ಎಂಟು ಮಹಾನದಿಗಳನ್ನು ಹೇಳಲಾಗಿದೆ. ಈ ಎಂಟು ನದಿಗಳ ಆಕಾರಗಳು ಒಂದೇ ಆಗಿರುವುದರಿಂದ ಇವುಗಳ ಪ್ರತೀಕವಾಗಿ 30. ಒಂದೇ ಚಿತ್ರವನ್ನು ತೋರಿಸಲಾಗಿದೆ. **1112**

ಅನಂತರ 14 ಜನ ಮನುಗಳನ್ನು ಹೇಳಲಾಗಿದೆ. 31. ಮೊದಲಿಗೆ ಸ್ವಾಯಂಭುವಮನು 32. ಸ್ವಾರೋಚಿಷಮನು 33. ಉತ್ತಮಮನು 34. ತಾಮಸಮನು **1113**

35. ರೈವತಮನು 36. ಚಾಕ್ಷುಷಮನು 37. ಏಳನೆಯ ವೈವಸ್ವತಮನು 38. ಸೂರ್ಯಸಾವರ್ಣಿ ಎಂಬ ಹೆಸರಿನ ಮನು 39. ದಕ್ಷಸಾವರ್ಣಿಮನು **1114**

40. ಬ್ರಹ್ಮಸಾವರ್ಣಿಮನು 41. ಧರ್ಮಸಾವರ್ಣಿಮನು 42. ರುದ್ರಸಾವರ್ಣಿ ಎಂಬ ಮನು 43. ವೇದಸಾವರ್ಣಿ ಎಂಬ ಮನು **1115**

44. ಇಂದ್ರಸಾವರ್ಣಿಮನು ಎಂಬುದಾಗಿ ಇವರು ಹದಿನಾಲ್ಕು ಜನ ಮನುಗಳು, ಪತ್ನೀ-ಪುತ್ರರೊಡಗೂಡಿ, ಮಹಾತ್ಮರೆನಿಸಿ ಕೀರ್ತಿಶಾಲಿಗಳಾಗಿದ್ದಾರೆ. **1116**

ಈ ಹದಿನಾಲ್ಕು ಜನ ಮನುಗಳ ಜೊತೆಯಲ್ಲಿಯೇ ಇವರ ತಂದೆಯರ ಹೆಸರುಗಳು, ಮನು ಮೊದಲಾದವರ ಹುಟ್ಟಿದ ದಿವಸಗಳು ಆಯಾಯಾ ಮನುಗಳ ಕಾಲದಲ್ಲಿ ಇದ್ದ ಇಂದ್ರರು, ಹರಿಗಳು 1117

ಮತ್ತು ಋಷಿಗಳ ಹೆಸರುಗಳನ್ನು ಕ್ರಮವಾಗಿ ಹೇಳಲಾಗಿದೆ. ಇವರ ನಂತರ 45. ಪರ್ಜನ್ಯ ಮೂರ್ತಿ 46. ಬ್ರಹ್ಮಾಸ್ತ್ರಮೂರ್ತಿ 1118

47. ಕಾಮಧೇನು 48. ಮತ್ತೊಂದು ರೀತಿಯಲ್ಲಿ ಕಾಮಧೇನುವನ್ನು ಚಿತ್ರಿಸಿ ತೋರಿಸಲಾಗಿದೆ. ಮುಂದೆ 49. ಅಶ್ವತ್ಥಾಮ 50. ಬಲಿ 51. ವ್ಯಾಸ 52. ಹನೂಮಾನ್ 53. ವಿಭೀಷಣ 1119

54. ಕೃಪ 55. ಪರಶುರಾಮ 56. ಪ್ರಹ್ಲಾದ 57. ಮಾರ್ಕಂಡೇಯ ಎಂಬುದಾಗಿ ಇವರು ಒಂಭತ್ತು ಜನರು ಚಿರಂಜೀವಿಗಳೆಂದು ಪ್ರಸಿದ್ಧರಾಗಿದ್ದಾರೆ. 1120

ಇವರ ನಂತರ 58. ಧ್ರುವ 59. ಅಧ್ವರ 60. ಸೋಮ 61. ಆಪ 62. ಅನಿಲ 63. ಅನಲ 64. ಪ್ರತ್ಯೂಷ 65. ಪ್ರಭಾಸ ಎಂಬುದಾಗಿ ಇವರು ಎಂಟು ಜನ ವಸುಗಳು ಪ್ರಸಿದ್ಧರಾಗಿದ್ದಾರೆ. (ಅಷ್ಟವಸುಗಳು) 1121

ಅಷ್ಟವಸುಗಳ ನಂತರ 66. ಆವಹ 67. ವಿವಹ 68. ಅನುವಹ 69. ಸಂವಹ 70. ಉದ್ವಹ 71. ನಿವಹ 72. ಪ್ರವಹ ಎಂದು ಸಪ್ತ ಮರುತ್ತುಗಳು ಉದಾಹೃತರಾಗಿದ್ದಾರೆ. 1122

187B ಮುಂದೆ ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನ, ನಾಗ, ಕ್ರಕರ, ಕೂರ್ಮ, ದೇವದತ್ತ, ಧನಂಜಯ 1123

ಪ್ರವಹ, ವಿವಹ, ಶಂಭು, ಸಂವಹ, ಉದ್ವಹ, ಶಂಭು, ಅನ್ವಹ, ಕಾಲ, ಆವಹ, ನಿವಹ, 1124

ಶ್ವಾಸ, ಅನಿಲ, ಅನಲ, ಪ್ರತಿಭಾ, ಕುಮುದ, ಕಾಂತ, ಶಿಬಿ, ಶ್ವೇತ, ರಕ್ತ, ಕೃಷ್ಣ, ಜಿತ, ಅಜಿತ 1125

ಜಂಝಾ, ಕ್ರತು, ದ್ಯೋತ, ಸಿದ್ಧ, ಪಿಂಗ, ಶುಭ, ಹನು, ಮಾರುತ, ಕಂಪನ, ಸೌಮ್ಯ, ಮಂಡೂಕ, ಸಂತತ 1126

ಸಂವರ್ತಕ, ಕಪಿ, ಭೀಮ, ಜಡ, ಅತಿಜಡ* ಎಂಬುದಾಗಿ ನಲವತ್ತೊಂಭತ್ತು ಜನ ಮರುದ್ದೇವತೆಗಳೆಂದು ಕೀರ್ತಿತರಾಗಿದ್ದಾರೆ. 1127

ಇವರಲ್ಲಿ ಆವಹ ಮೊದಲಾದ ಹೆಸರುಳ್ಳ ಏಳು ಜನರು ಹಿಂದೆ ಹೇಳಿದ ಸಪ್ತ ಮರುದ್ದೇವತೆಗಳು. ಇವರು ಈ 49 ಜನರಲ್ಲೇ ಸೇರಿಕೊಳ್ಳುತ್ತಾರೆ. 1128

---

* ಹಿಂದೆ ವರ್ಣಿಸಿರುವ ಕ್ರಮದಲ್ಲೂ ಇಲ್ಲಿ ಹೇಳಿರುವ ಹೆಸರಿನ ಕ್ರಮದಲ್ಲೂ ಸ್ವಲ್ಪ ವ್ಯತ್ಯಾಸವು ಕಂಡುಬರುತ್ತದೆ.

ಹಾಗಾಗಿ ಇವರೆಲ್ಲರ ರೂಪಗಳು ಒಂದೇ ಆಗಿರುವುದರಿಂದ ರೂಪಸಾಮ್ಯದಿಂದ 73. ಒಂದೇ ಮೂರ್ತಿಯನ್ನು ಚಿತ್ರಿಸಿ ತೋರಿಸಲಾಗಿದೆ. ಕ್ರತು, ದಕ್ಷ, ವಸು, ಸತ್ಯ, ಕಾಲ, ಕಾಮ, ದನು, **1129**

ಪುರೂರವ, ರುದ್ರ, ರುಚಿಕ, ಆರ್ದ್ರವ, ಧುನಿ, ವಿಲೋಚನ ಎಂದು ಹದಿಮೂರು ಜನರು ವಿಶ್ವೇದೇವತೆಗಳು. **1130**

ಈ ಹದಿಮೂರು ಜನರ ರೂಪವು ಒಂದೇ ರೀತಿ ಇರುವುದರಿಂದ 74. ಒಂದೇ ಚಿತ್ರವನ್ನು ಬರೆದು ತೋರಿಸಲಾಗಿದೆ. ಇವರ ನಂತರ 75. ಇಂದ್ರ 76. ವಹ್ನಿ 77. ದಂಡಧರ 78. ನೈಋತ 79. ವರುಣ 80. ಮರುತ್ **1131**

81. ಕುಬೇರ 82. ಈಶಾನ ಎಂಬುದಾಗಿ ಇವರು ಎಂಟು ಜನ ದಿಕ್ಪಾಲಕರು ಚಿತ್ರಿತರಾಗಿದ್ದಾರೆ. ಮುಂದೆ 83. ಐರಾವತ 84. ಪುಂಡರೀಕ 85. ವಾಮನ 86. ಕುಮುದ 87. ಅಂಜನ **1132**

88. ಪುಷ್ಪದಂತ 89. ಸಾರ್ವಭೌಮ 90. ಸುಪ್ರತೀಕ ಎಂದು ಎಂಟು ದಿಗ್ಗಜಗಳು ಚಿತ್ರಿತ-ವಾಗಿವೆ (ಎಂಟು ದಿಕ್ಕುಗಳನ್ನು ಹೊತ್ತುಕೊಂಡಿರುವ ಎಂಟು ಆನೆಗಳು) 91. ಅನಂತ 92. ವಾಸುಕಿ 93. ತಕ್ಷಕ 94. ಕರ್ಕೋಟ 95. ಪದ್ಮ **1133**

96. ಮಹಾಪದ್ಮ 97. ಶಂಖಪಾಲ 98. ಕುಲಿಕ - ಎಂಬುದಾಗಿ ಇವರು ಎಂಟು ಜನರು ಎಂಟು ದಿಕ್ಕಿನಲ್ಲಿರುವ ಎಂಟು ಜನ ಸರ್ಪಗಳು. ಹೀಗೆ ಅಷ್ಟದಿಕ್ಪಾಲಕರು, ಅಷ್ಟದಿಗ್ಗಜಗಳು ಮತ್ತು ಅಷ್ಟನಾಗಗಳನ್ನು ಕ್ರಮವಾಗಿ ಹೇಳಿ ಚಿತ್ರಿಸಲಾಗಿದೆ. **1134**

ಇವರನ್ನು ಪೂರ್ವದಿಕ್ಕಿನಿಂದ ಪ್ರಾರಂಭಿಸಿ ಕ್ರಮವಾಗಿ ಎಂಟು ದಿಕ್ಕುಗಳಲ್ಲಿ ನೆಲಸಿದ್ದಾರೆಂದು ಬುದ್ಧಿವಂತರಾದವರು ತಿಳಿಯಬೇಕು. ಇವರಾದ ಮೇಲೆ 99. ಪೂರ್ವ 100. ಆಗ್ನೇಯ 101. ದಕ್ಷಿಣ 102. ನೈಋತ್ಯ 103. ಪಶ್ಚಿಮ **1135**

104. ವಾಯವ್ಯ 105. ಉತ್ತರ 106. ಈಶಾನ್ಯ 107. ಮೇಲಿನ ದಿಕ್ಕು 108. ಕೆಳಗಿನ ದಿಕ್ಕು ಎಂಬುದಾಗಿ ಹತ್ತು ದಿಕ್ಕುಗಳ ದೇವತೆಗಳ ಸ್ವರೂಪಗಳನ್ನು ಚಿತ್ರಿಸಿ ತೋರಿಸಿದ್ದಾರೆ. 109. ಬ್ರಹ್ಮನು ಮೇಲಿನ ದಿಕ್ಕಿನ ಅಧಿಪತಿ 110. ಅನಂತನೆಂಬ ಹೆಸರಿನ (ಸರ್ಪವು) ಪಾತಾಳ-ಲೋಕದ ಅಧಿಪತಿ. **1136**

ಮುಂದಕ್ಕೆ ಕುದುರೆಯನ್ನೇರಿ ಕುಳಿತಿರುವ 111. ಅಶ್ವಿನೀ ದೇವತೆಗಳು, ನಂತರ 112. ಮೂರು ಮುಖದ ಅಗ್ನಿದೇವನು✕ ಚಿತ್ರಿತರಾಗಿದ್ದಾರೆ. ನಂತರ ನಾಲ್ಕು ತೋಳುಗಳ ಜಘನ-ದಸ್ರ ಎಂಬ ಹೆಸರುಳ್ಳ, 113. ಅಶ್ವಿನೀದೇವತೆಗಳು ಮತ್ತೆ ಉಕ್ತರಾಗಿದ್ದಾರೆ. **1137**

---

✕ ಹಿಂದೆ ವರ್ಣಿತವಾಗಿರುವ ಸ್ಥಳದಲ್ಲಿ ಮೊದಲಿಗೆ ಮೂರುಮುಖದ ಅಗ್ನಿದೇವನು ಚಿತ್ರಿತನಾಗಿದ್ದು ನಂತರ ಅಶ್ವಿನೀದೇವತೆಗಳು ಚಿತ್ರಿತರಾಗಿದ್ದಾರೆ. ಇಲ್ಲಿ ಹೆಸರನ್ನು ಹೇಳುವಾಗ ತ್ರಿಮುಖ ಅಗ್ನಿಯು ನಂತರ ಸ್ತುತನಾಗಿದ್ದಾನೆ.

ಇನ್ನು ಮುಂದೆ 114. ಲವಣಸಮುದ್ರ 115. ಇಕ್ಷುಸಮುದ್ರ 116. ಸುರಾಸಮುದ್ರ 117. ಘೃತಸಮುದ್ರ 118. ದಧಿಸಮುದ್ರ 119. ಕ್ಷೀರಸಮುದ್ರ 120. ಜಲಸಮುದ್ರ ಎಂಬುದಾಗಿ ಸಪ್ತಸಮುದ್ರಗಳು ಚಿತ್ರಿತವಾಗಿವೆ. **1138**

ಮುಂದಕ್ಕೆ 121. ಭೂಮಿ 122. ಜಲ 123. ತೇಜಸ್ಸು 124. ವಾಯು 125. ಆಕಾಶ ಎಂಬುದಾಗಿ ಐದು ಭೂತದೇವತೆಗಳನ್ನು ಯಥಾಕ್ರಮವಾಗಿ ತಿಳಿಯಬೇಕು. **1139**

126. ಧರ್ಮ 127. ಜ್ಞಾನ 128. ವೈರಾಗ್ಯ 129. ಐಶ್ವರ್ಯ ಎಂಬ ನಾಲ್ಕು ದೇವತೆಗಳು ಚಿತ್ರಿತರಾಗಿದ್ದಾರೆ. 130. ಯಮನು ಧರ್ಮದ ಅಭಿಮಾನಿದೇವತೆ 131. ಜ್ಞಾನದ ಅಭಿಮಾನಿದೇವತೆ ವಾಯು. **1140**

132. ವೈರಾಗ್ಯಾಭಿಮಾನಿದೇವತೆ ಶಿವ 133. ಐಶ್ವರ್ಯದ ಅಭಿಮಾನಿದೇವತೆ ಪುರಂದರ (ಇಂದ್ರ) ಹಾಗೆಯೇ ಮಧ್ಯದಿಂದ 134. ಪುಣ್ಯಪುರುಷನು ಹೀಗೆ ಇವರೆಲ್ಲರೂ ಚಿತ್ರಿಸಿ ತೋರಿಸಲ್ಪಟ್ಟಿದ್ದಾರೆ. **1141**

ಇವರ ನಂತರ 135. ಅಧರ್ಮ 136. ಅಜ್ಞಾನ 137. ಅವೈರಾಗ್ಯ 138. ಅನೈಶ್ವರ್ಯಗಳೆಂಬ ನಾಲ್ಕು ದೇವತೆಗಳು ಚಿತ್ರಿತರಾಗಿದ್ದಾರೆ. ಮುಂದೆ 139. ಅಧರ್ಮಾಧಿಪತಿಯಾದ ರಕ್ಷ (ನಿರ್ಋತಿ) 140. ಅಜ್ಞಾನದ ಅಧಿದೇವತೆ ದುರ್ಗೆ **1142**

141. ಅವೈರಾಗ್ಯದ ಅಧಿಪತಿ ಕಾಮ 142. ಅನೈಶ್ವರ್ಯದ ಅಧಿದೇವತೆ ರುದ್ರ, ಅದೇ ರೀತಿ ಇವರ ಮಧ್ಯೆ 143. ಪಾಪಪುರುಷನು ಚೆನ್ನಾಗಿ ಚಿತ್ರಿತನಾಗಿದ್ದಾನೆ. **1143**

ಇವರಾದ ನಂತರ - 144. ಋಗ್ವೇದದೇವತೆ145. ಯಜುರ್ವೇದದೇವತೆ 146. ಸಾಮವೇದದೇವತೆ 147. ಅಥರ್ವಣವೇದದೇವತೆ 148. ಆಯುರ್ವೇದದೇವತೆ 149. ಧನುರ್ವೇದದೇವತೆ ಎಂದು ಆರುಜನ ವೇದದೇವತೆಗಳು ಉಕ್ತರಾಗಿದ್ದಾರೆ. **1144**

188A 150. ಋಗ್ವೇದಾಭಿಮಾನಿದೇವತೆ ಸೋಮ 151. ಯಜುರ್ವೇದ ಅಭಿಮಾನಿದೇವತೆ ರುದ್ರ 152. ಸಾಮವೇದ ಅಭಿಮಾನಿದೇವತೆ ಇಂದ್ರ 153. ಅಥರ್ವವೇದದ ಅಭಿಮಾನಿದೇವತೆ ಬ್ರಹ್ಮ 154. ಆಯುರ್ವೇದದ ಅಭಿಮಾನಿದೇವತೆ ಧನ್ವಂತರಿ 155. ಧನುರ್ವೇದದ ಅಭಿಮಾನಿದೇವತೆ ಇಂದ್ರ ಎಂಬುದಾಗಿ ಈ ಆರುಜನ ವೇದಾಭಿಮಾನಿದೇವತೆಗಳು ಚಿತ್ರಿತರಾಗಿದ್ದಾರೆ. **1145**

156. ಧನ್ವಂತರಿ ಮತ್ತು 157. ಧನುರ್ವೇದ ಇವೆರಡರ ಬೇರೆ ಬೇರೆ ಎರಡೆರಡು ದೇವತಾರೂಪಗಳನ್ನು 159. ಬೇರೆ ಗ್ರಂಥದ ಅನುಸಾರ ಚೆನ್ನಾಗಿ ಮುಂದೆ ಬರೆದು ತೋರಿಸಲಾಗಿದೆ. **1146**

ಇಲ್ಲಿಂದ ಮುಂದಕ್ಕೆ - ಚಾಮುಂಡಾನಿಘಂಟುವಿನಲ್ಲಿ ಹೇಳಿರುವ ಒಂದುನೂರು ಇಪ್ಪತ್ತಾರು (126) ಬಗೆಯ ದೇವತೆಗಳ ಕೈಗಳಲ್ಲಿರುವ **1147**

ಆಯುಧಗಳ ಸ್ವರೂಪಗಳನ್ನು ಆಯಾಯಾ ಹೆಸರಿನ ಕ್ರಮದಂತೆ ತೋರಿಸಲಾಗಿದ್ದು, ದೇವತೆಗಳ ಕೈಗಳಲ್ಲಿರುವ ಆಯುಧಗಳ ರೂಪಗಳನ್ನು ಬೇರೆ ಬೇರೆಯಾಗಿ ಚಿತ್ರಿಸಿ ತೋರಿಸಲಾಗಿದೆ.[x] **1148**

ಅಲ್ಲಿಗೆ ಒಟ್ಟು ದೇವತಾಚಿತ್ರಗಳ ಸಂಖ್ಯೆ ಇಲ್ಲಿಯವರೆಗೆ 285. ಇನ್ನು ಮುಂದೆ -

286. ಶಿಕ್ಷಾ 287. ಕಲ್ಪ 288. ವ್ಯಾಕರಣ 289. ನಿರುಕ್ತ 290. ಛಂದಸ್ಸು 291. ಜ್ಯೌತಿಷ 292. ಮೀಮಾಂಸಾ 293. ನ್ಯಾಯಶಾಸ್ತ್ರ **1149**

294. ಧರ್ಮಶಾಸ್ತ್ರ 295. ಪುರಾಣ 296. ಇತಿಹಾಸ 297. ಭಾರತ 298. ಪಾಂಚರಾತ್ರ 299. ಪಾಶುಪತ 300. ಸಾಂಖ್ಯ 301. ಪಾತಂಜಲ (ಯೋಗಶಾಸ್ತ್ರ) **1150**

ಎಂಬುದಾಗಿ ನೃಪಸಂಖ್ಯೆಯ (ಹದಿನಾರು ಸಂಖ್ಯೆಯ) ಶಾಸ್ತ್ರಗಳ ಸ್ವರೂಪಗಳನ್ನು ತೋರಿಸಲಾಗಿದೆ. ನಂತರ 302. ಪ್ರಜಾಪತಿ 303. ಬ್ರಹ್ಮ 304. ವಾಗ್ದೇವೀ 305. ವರುಣ 306. ಅದಿತಿ **1151**

307. ಹರಿ 308. ಸೋಮ 309. ವಾಯು 310. ಧರ್ಮ 311. ಸ್ವಾಯಂಭುವಮನು 312. ಪಿತಾಮಹ 313. ಉಮೇಶ 314. ಸಂಕರ್ಷಣ **1152**

315. ರುದ್ರ 316. ಕಪಿಲ 317 ಅನಂತ ಎಂಬುದಾಗಿ ಹದಿನಾರು ಜನ ಶಿಕ್ಷಾದಿಶಾಸ್ತ್ರಗಳ ಅಧಿದೇವತೆಗಳನ್ನು ಶಾಸ್ತ್ರಕ್ರಮಾನುಸಾರ ಹೇಳಲಾಗಿದೆ. ಮುಂದಕ್ಕೆ - 318. ಪ್ರಭುಶಕ್ತಿ 319. ಮಂತ್ರಶಕ್ತಿ 320. ಉತ್ಸಾಹಶಕ್ತಿ ಎಂಬ ಹೆಸರಿನ **1153**

ರಾಜನೀತಿಯಲ್ಲಿ ಉದಾಹೃತವಾದ ಮೂರು ಶಕ್ತಿಸ್ವರೂಪಗಳನ್ನು ತಿಳಿಸಲಾಗಿದೆ. ಮುಂದೆ, 321. ಸಾಮ 322. ದಾನ 323. ಭೇದ 324. ದಂಡಗಳೆಂಬ ನಾಲ್ಕು ಉಪಾಯಗಳ ದೇವತಾಸ್ವರೂಪಗಳನ್ನು ಚಿತ್ರಿಸಿದ್ದಾರೆ. **1154**

ನಂತರ, 325. ಧರ್ಮದೇವತೆ 326. ವಿಶ್ವಕರ್ಮ 327. ಮಯ 328. ಮಂತ್ರಶಾಸ್ತ್ರ 329. ಕಾವ್ಯಶಾಸ್ತ್ರ 330. ಕಾಮಶಾಸ್ತ್ರ 331. ಶಕುನಶಾಸ್ತ್ರ **1155**

332. ಶಿಲ್ಪಶಾಸ್ತ್ರ 333. ಅಲಂಕಾರಶಾಸ್ತ್ರ 334. ಇಂದ್ರಜಾಲ 335. ನಾಟ್ಯಶಾಸ್ತ್ರ 336. ಸೂಪಶಾಸ್ತ್ರ 337. ಮಲ್ಲಶಾಸ್ತ್ರ **1156**

---

x ಹಿಂದೆ ವರ್ಣಿಸಿರುವ ಕ್ರಮದಲ್ಲೂ ಮತ್ತು ಇಲ್ಲಿ ಹೇಳಿರುವ ಹೆಸರಿನ ಕ್ರಮದಲ್ಲೂ ಸ್ವಲ್ಪ ವ್ಯತ್ಯಾಸವು ಕಂಡುಬರುತ್ತದೆ.

188B 392. ಧನಶ್ರೀರಾಗ 393. ಮಲ್ಹಾರೀರಾಗ 394. ಮೇಘವೆಂಬ ಹೆಸರಿನ ರಾಗ 395. ಭೂಪಾಲೀರಾಗ
396. ದೇಶಕಾರಿರಾಗ 397. ಟಕ್ಕಾರಾಗ 398. ಘೂರ್ಜರರಾಗ 1168

ಎಂಬುದಾಗಿ ಒಟ್ಟು ಮೂವತ್ತಾರು ರಾಗ ದೇವತೆಗಳ ಸ್ವರೂಪಗಳನ್ನು ಚಿತ್ರಿಸಿ ತೋರಿಸಲಾಗಿದೆ.

ರಾಗದೇವತೆಗಳ ನಂತರ - 399. ಧ್ರುವತಾಲ 400. ಮಠ್ಯತಾಲ 401. ರೂಪಕತಾಳ 402. ಝಂಪವೆಂಬ ಹೆಸರಿನ ತಾಳ 1169

403. ತ್ರಿಪುಟತಾಳ 404. ಅಟ್ಟತಾಳ 405. ಏಳನೆಯದಾದ ಏಕತಾಳಗಳೆಂದು ಏಳು ತಾಳಗಳನ್ನು ಹೇಳಿ ಮುಂದಕ್ಕೆ ಕೆಲವು ಹೊಸದಾದ ತಾಳಗಳನ್ನು ಹೇಳಲಾಗಿದೆ.[x] 1170

ಈ ಬ್ರಹ್ಮನಿಧಿಯಲ್ಲಿ ಶರ ಅಂದರೆ ಬಾಣಗಳು (ಮನ್ಮಥನ ಐದು ಬಾಣಗಳು ಪ್ರಸಿದ್ಧಿ. ಹಾಗಾಗಿ ಸಂಖ್ಯೆ 5

ಪೂರ್ಣ ಎಂದರೆ 0. ಅಬ್ಧ (ಸಮುದ್ರ) ಎಂದರೆ ಸಮುದ್ರಗಳು ನಾಲ್ಕು ಎಂದು ಪ್ರಸಿದ್ಧವಾದ್ದರಿಂದ ಸಂಖ್ಯೆ 4ನ್ನು ತೆಗೆದುಕೊಳ್ಳಬೇಕು. "ಸಂಖ್ಯಾನಾಂ ವಾಮತೋ ಗತಿಃ" ಸಂಖ್ಯೆಗಳಿಗೆ ಹಿಂದಿನಿಂದ ಗಣನೆ ಎಂದು ಹೇಳಿರುವುದರಿಂದ ಒಟ್ಟು 405 ಸಂಖ್ಯೆಯ ದೇವತಾಮೂರ್ತಿಗಳನ್ನು ಚಿತ್ರಿಸಿ ಬರೆದು ತೋರಿಸಲಾಗಿದೆ.

ಶಿಖಾ - ಐದು ರೀತಿಯ ಅಗ್ನಿಗಳು - ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ಸಭ್ಯ, ಆವಸಥ್ಯ ಎಂಬುದಾಗಿ ಪಂಚಾಗ್ನಿಗಳು. ಹಾಗಾಗಿ ಸಂಖ್ಯೆ 5.

ಅಶ್ವ - ಕುದುರೆ. ಸೂರ್ಯನ ರಥದ ಕುದುರೆಗಳು 7. ಹಾಗಾಗಿ ಸಂಖ್ಯೆ 7.

ಶಿಖಾಶ್ವಸಂಖ್ಯೆಗಳ ಪ್ರತಿಮೆಗಳೆಂದರೆ 75 ಪ್ರತಿಮೆಗಳೆಂದು ಅರ್ಥ.

ದೇವತೆಗಳ ರೂಪಗಳು ಒಂದೇ ರೀತಿಯಿರುವ ಕಾರಣ ರೂಪಸಾಮ್ಯದಿಂದ ಬರೆಯದೇ ಇರುವ ದೇವತಾಮೂರ್ತಿಗಳು ಒಟ್ಟು 75. (ಅಂದರೆ 75 ದೇವತಾಮೂರ್ತಿಗಳ ಚಿತ್ರಗಳನ್ನು ಇಲ್ಲಿ ಬರೆದು ತೋರಿಸಿಲ್ಲ.) 1171

ಈ ಬ್ರಹ್ಮನಿಧಿಯಲ್ಲಿ ಬರೆದು ಚಿತ್ರಿಸಿ ತೋರಿಸಿರುವ ದೇವತಾಮೂರ್ತಿಗಳು 405. ಮತ್ತು ಬರೆಯದೆ ಚಿತ್ರಿಸಿ ತೋರಿಸದಿರುವ ದೇವತಾಮೂರ್ತಿಗಳು 75.

ಎರಡನ್ನೂ ಸೇರಿಸಿದರೆ - ಒಟ್ಟು 405 + 75 = 480

---

x ಮುಂದಕ್ಕೆ ಹಿಂದೆ ವಿವರಿಸಿದ ಅನೇಕ ವಿಷಯಗಳನ್ನು ಪಟ್ಟಿ ಮಾಡಿ ಹೇಳಿಲ್ಲದಿರುವುದು ಕಂಡುಬರುತ್ತದೆ.

ಪೂರ್ಣ ಎಂದರೆ 0. ಶ್ರೀ ಎಂದರೆ ಲಕ್ಷ್ಮೀ - 8. ವೇದ ಎಂದರೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು 4.

ಹಿಂದಿನಿಂದ ಓದಿದರೆ 480 ದೇವತೆಗಳು ಬರುತ್ತವೆ.

ಈ ನಾಲ್ಕನೆಯ ಬ್ರಹ್ಮನಿಧಿಯಲ್ಲಿ ಒಟ್ಟು 480 ದೇವತಾಮೂರ್ತಿಗಳನ್ನು ಹೇಳಲಾಗಿದೆ. **1172**

ಶ್ರೀತತ್ತ್ವನಿಧಿಯ ನಾಲ್ಕನೆಯ ಬ್ರಹ್ಮನಿಧಿಯಲ್ಲಿ,

| | | |
|---|---|---|
| i) | ಹೇಳಲಾಗಿರುವ ದೇವತಾಮೂರ್ತಿಗಳು ಒಟ್ಟು | 480 |
| ii) | ರೂಪಸಾದೃಶ್ಯದಿಂದ ಬರೆಯದೇ ಇರುವ ದೇವತಾಮೂರ್ತಿಗಳು ಒಟ್ಟು | 75 |
| iii) | ಚಿತ್ರಗಳನ್ನು ಬರೆದು ತೋರಿಸಿರುವ ದೇವತಾಮೂರ್ತಿಗಳು ಒಟ್ಟು | 405 |
| | ಒಟ್ಟು | **480** |

ಹೀಗೆ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರ್‌ರವರಿಂದ ರಚಿತವಾದ
"ಶ್ರೀತತ್ತ್ವನಿಧಿ"ಯ ನಾಲ್ಕನೆಯ ನಿಧಿಯಾದ
'ಬ್ರಹ್ಮನಿಧಿ'ಯ ಕನ್ನಡಾನುವಾದವು ಮುಕ್ತಾಯವಾಯಿತು



# ಅನುಬಂಧ

ಸಂಗೀತವು ಮುಖ್ಯವಾಗಿ ಹಾಡುವುದಾಗಿದೆ. ರಾಗ, ಲಯ, ಭಾವ, ಸಾಹಿತ್ಯ, ನೃತ್ಯ, ವಾದ್ಯಾದಿಗಳಿಂದ ಸಮ್ಮಿಳಿತವಾಗಿ ನಾದರೂಪದಿಂದ ಕರ್ಣಾನಂದಕರವಾಗಿ ಹೊರಹೊಮ್ಮುವುದೇ ಸಂಗೀತವೆನಿಸಿದೆ. ಭಾರತೀಯರಿಗೆ ಪವಿತ್ರವಾದ ಗ್ರಂಥಗಳು ವೇದಗಳು. ಅವು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳೆಂದು ನಾಲ್ಕು ಬಗೆ. ಅವುಗಳಲ್ಲಿ ಒಂದಾದ ಸಾಮವೇದದಿಂದ ಸಂಗೀತವು ಹುಟ್ಟಿದೆ. ಬ್ರಹ್ಮನ ರಾಣಿ ಸರಸ್ವತಿಯು ನಾದದೇವತೆಯೆಂದು ಪ್ರಸಿದ್ಧಳಾಗಿದ್ದಾಳೆ. ನಾರದ, ತುಂಬುರ, ಹನುಮಂತ ಮೊದಲಾದವರು ಸಂಗೀತದಲ್ಲಿ ಅದ್ವಿತೀಯ ಸಿದ್ಧಿಯನ್ನು ಪಡೆದಿದ್ದ ಸಂಗೀತವಿದ್ವಾಂಸರೆಂದು ಪ್ರಸಿದ್ಧಿಯನ್ನು ಪಡೆದಿದ್ದಾರೆ. ಇದು ಹೃದಯವನ್ನು ಕಲಕುವ ಕಲೆ. ಎಲ್ಲ ಕ್ಲೇಶಗಳನ್ನೂ, ದುಃಖ-ದುಮ್ಮಾನಗಳನ್ನೂ, ಬೇಸರಗಳನ್ನೂ ದೂರ ಮಾಡಿ, ಮನಸ್ಸಿಗೆ ಅನಿರ್ವಚನೀಯವಾದ ಆನಂದ ನೀಡುವುದು ಸಂಗೀತ. ವಿದ್ವಾಂಸರು, ಮಕ್ಕಳು, ಪಶು-ಪಕ್ಷಿ-ಪ್ರಾಣಿಗಳು, ಸರ್ಪಗಳು ಎಲ್ಲವೂ ಸಂಗೀತನಾದಕ್ಕೆ ಮೈಮರೆಯುತ್ತವೆ. ತಲೆದೂಗುತ್ತವೆ. ಅಂತಹ ಆಕರ್ಷಕ ಶಕ್ತಿ ಸಂಗೀತಕ್ಕಿದೆ.

**1. ನಾದ :** 'ಣದ-ಅವ್ಯಕ್ತೇ ಶಬ್ದೇ' ಎಂಬ ಣದ ಧಾತುವಿನಿಂದ 'ನಾದ'ವೆಂಬ ಶಬ್ದವು ಹುಟ್ಟಿದೆ. ನಾದವೆಂದರೆ ಶಬ್ದ ಮಾಡುವುದು ಅಥವಾ ಶಬ್ದರೂಪವಾಗಿ ಹೊರಬರುವುದು ಎಂದು ಅರ್ಥ. 'ಒಂದೇ ರೀತಿಯ ಕಂಪನಗಳುಳ್ಳ ಅಥವಾ ಸ್ಪಂದನಗಳುಳ್ಳ, ನಿರಂತರವಾಗಿ ಹೊರಹೊಮ್ಮುವ, ಕಿವಿಗಳಿಂದ ಕೇಳಲು ಯೋಗ್ಯವಾದ ದನಿಗೆ ನಾದ'ವೆಂದು ಹೆಸರು.

ಪ್ರಾಣಾಗ್ನಿ ಮತ್ತು ಪ್ರಾಣವಾಯುಗಳ ಸಂಘರ್ಷಣೆಯಿಂದ ಹುಟ್ಟುವ ಶಬ್ದವಿಶೇಷವೇ 'ನಾದ'ವೆಂದು ಸಂಗೀತಶಾಸ್ತ್ರದಲ್ಲಿ ತಿಳಿಸಲಾಗಿದೆ. ಮನುಷ್ಯಶರೀರದಲ್ಲಿರುವ ಹೊಕ್ಕಳು, ಹೃದಯ, ಕಂಠ, ನಾಲಿಗೆ, ಮೂಗು ಮತ್ತು ತಲೆಗಳೆಂಬ ಆರು ಮುಖ್ಯಸ್ಥಾನಗಳಲ್ಲಿ ಪುಷ್ಟಿಗೊಂಡು ಹೊರಬರುವ ದನಿಯೇ ನಾದವೆನಿಸುತ್ತದೆ. ನಾದವು ಅನಾಹತನಾದ ಮತ್ತು ಆಹತನಾದವೆಂದು ಎರಡು ವಿಧವಾಗಿದೆ. ಮೂಲಾಧಾರಚಕ್ರದಿಂದ ಹುಟ್ಟಿ ಹೊರಬರುವ, ಕಿವಿಗಳಿಗೆ ಕೇಳಿಸದಿರುವ ಅವ್ಯಕ್ತನಾದವು ಅನಾಹತನಾದ. ಕಂಪನ ಅಥವಾ ಸ್ಪಂದನೆಗಳನ್ನು ಹೊಂದಿ ಕಿವಿಗೆ ಕೇಳಿಸುವ ಸ್ಥಿತಿಯನ್ನು ಮುಟ್ಟುವ ನಾದವು ಆಹತನಾದವಾಗುತ್ತದೆ.

**2. ಶ್ರುತಿ :** ಕಿವಿಗಳಿಂದ ಕೇಳಲು ಸಾಧ್ಯವಾಗುವ, ಮಧುರವಾದ, ಹೃದಯವನ್ನು ತಾಗುವ, ನಿಯತವಾದ ಅತಿಸೂಕ್ಷ್ಮವಾದ ನಾದಕಂಪನಕ್ಕೆ ಶ್ರುತಿಯೆಂದು ಹೆಸರು. ಇದು ಅನೇಕವಾಗಿದೆ. ಒಂದು ಸ್ಥಾಯಿಯಲ್ಲಿ ಶ್ರುತಿಗಳು ಇಪ್ಪತ್ತೆರಡು ಎಂದು ಪರಿಗಣಿತವಾಗಿವೆ. ಕಂಪನಗಳು ಹೆಚ್ಚು ಹೆಚ್ಚು ಆವರ್ತವಾದಂತೆ ಸ್ವರವು ತೀವ್ರಸ್ಥಾಯಿಗಳಾಗಲು ಕಾರಣವಾಗುತ್ತದೆ.

**3. ಆಧಾರಶ್ರುತಿ :** ಸಂಗೀತಗಾರರು ತಮ್ಮ ಶರೀರಕ್ಕೆ ಹೊಂದುವಂತೆ, ವಾದ್ಯಗಾರರು ತಮ್ಮ ವಾದ್ಯಗಳಿಗೆ ಹೊಂದಿಕೆಯಾಗುವಂತೆ ಆರಿಸಿಕೊಳ್ಳುವ ಆಧಾರಭೂತಸ್ವರವನ್ನು ಆಧಾರಶ್ರುತಿ ಎಂದು ಕರೆಯುತ್ತಾರೆ. ಈ ಆಧಾರಶ್ರುತಿಯೇ ಮಧ್ಯಸ್ಥಾಯಿಗೆ ಹೊಂದುವ ಆಧಾರ ಷಡ್ಜವಾಗಿರುತ್ತದೆ.

**4.** ಸ್ವರ : ಶಾರ್ಙ್ಗದೇವನು ತನ್ನ ಸಂಗೀತರತ್ನಾಕರದಲ್ಲಿ,

"ಸ್ವತೋ ರಂಜಯತಿ ಶ್ರೋತೃಚಿತ್ತಂ ಸ ಸ್ವರ ಉಚ್ಯತೇ |
ಶ್ರುತ್ಯನಂತರಭಾವೀ ಯಃ ಸ್ನಿಗ್ಧೋಽನುರಣಾತ್ಮಕಃ ||"

ಎಂಬುದಾಗಿ ಸ್ವರದ ವಿವರಣೆಯನ್ನು ಹೇಳಿದ್ದಾನೆ. ಕೇಳುಗರ ಮನಸ್ಸನ್ನು ತಾನಾಗಿ ರಂಜಿಸುವ ನಾದವಿಶೇಷಕ್ಕೆ ಸ್ವರ ಎಂದು ಹೆಸರು. ಇದು ಶ್ರುತಿಗೆ ಸರಿಯಾಗಿ ಹೊಂದುತ್ತಿದ್ದು, ಮನೋಹರವಾಗಿಯೂ, ಅನುರಣನರೂಪವಾಗಿಯೂ ಇರುತ್ತದೆ.

ಸ್ವರಗಳು ಏಳು. ಏಳುಸ್ವರಗಳ ಹೆಸರುಗಳ ಮೊದಲನೆಯ ಅಕ್ಷರವನ್ನೇ ಸ್ವರದ ಸಂಕೇತಾಕ್ಷರವನ್ನಾಗಿ ಇಟ್ಟುಕೊಂಡಿದ್ದಾರೆ.

| | ಸ್ವರದ ಹೆಸರು | ಸಂಕೇತಾಕ್ಷರ |
|---|---|---|
| 1. | ಷಡ್ಜಸ್ವರ | ಸ |
| 2. | ರಿಷಭಸ್ವರ | ರಿ |
| 3. | ಗಾಂಧಾರಸ್ವರ | ಗ |
| 4. | ಮಧ್ಯಮಸ್ವರ | ಮ |
| 5. | ಪಂಚಮಸ್ವರ | ಪ |
| 6. | ಧೈವತಸ್ವರ | ಧ |
| 7. | ನಿಷಾದಸ್ವರ | ನಿ |

ಈ ಏಳು ಸ್ವರಗಳನ್ನು ಪ್ರಕೃತಿಸ್ವರಗಳು ಮತ್ತು ವಿಕೃತಿಸ್ವರಗಳೆಂದು ಎರಡು ಗುಂಪುಗಳನ್ನಾಗಿ ಮಾಡಿದ್ದಾರೆ.

i) ಯಾವ ವ್ಯತ್ಯಾಸವನ್ನೂ ಹೊಂದದೆ ಪ್ರಕೃತಿರೂಪದಲ್ಲೇ ನಿರ್ದಿಷ್ಟವಾಗಿ ಇರುವ ಸ್ವರಗಳು ಪ್ರಕೃತಿಸ್ವರಗಳು. ಷಡ್ಜ ಮತ್ತು ಪಂಚಮಸ್ವರಗಳು (ಪ, ಮ ಇವೆರಡು) ಪ್ರಕೃತಿಸ್ವರಗಳು.

ii) ಪ್ರಕೃತಿರೂಪದಿಂದ ವ್ಯತ್ಯಾಸವಾಗುವ ಸ್ವರಗಳು ವಿಕೃತಿಸ್ವರಗಳು. ರಿಷಭ, ಗಾಂಧಾರ, ಮಧ್ಯಮ, ಧೈವತ, ನಿಷಾದಸ್ವರಗಳು ವಿಕೃತಿಸ್ವರಗಳು.

## ಸ್ವರದ ಪ್ರಭೇದಗಳು

ಸ್ವರದ ಪ್ರಭೇದಗಳು ವಿಕೃತಿಸ್ವರಗಳಿಗೆ ಮಾತ್ರ ಅನ್ವಯವಾಗುತ್ತದೆ. ಒಂದು ಸ್ಥಾಯಿಯಲ್ಲಿ ಪ್ರಕೃತಿಸ್ವರಗಳು ಮತ್ತು ವಿಕೃತಿಸ್ವರಗಳು ಒಟ್ಟು ಸೇರಿ ಹನ್ನೆರಡು ರೀತಿಯ ಸ್ವರಸ್ಥಾನಗಳಾಗುತ್ತದೆ. ಕರ್ಣಾಟಕಸಂಗೀತದಲ್ಲಿ ಹನ್ನೆರಡು ಸ್ವರಸ್ಥಾನಗಳನ್ನು ಹದಿನಾರು ಸ್ವರಸ್ಥಾನಗಳನ್ನಾಗಿ ಬದಲಾವಣೆ ಮಾಡಿಕೊಳ್ಳಲಾಗಿದೆ.

## ವಿಕೃತಿಸ್ವರಗಳ ಪ್ರಭೇದಗಳು

1. ರಿಷಭಸ್ವರದಲ್ಲಿ - (i) ಶುದ್ಧರಿಷಭ (ii) ಚತುಃಶ್ರುತಿರಿಷಭ (iii) ಷಟ್‌ಶ್ರುತಿರಿಷಭ ಎಂದು ಮೂರು ವಿಧ.
2. ಗಾಂಧಾರಸ್ವರದಲ್ಲಿ - (i) ಶುದ್ಧಗಾಂಧಾರ (ii) ಸಾಧಾರಣಗಾಂಧಾರ (iii) ಅಂತರಗಾಂಧಾರವೆಂದು ಮೂರು ವಿಧ.
3. ಮಧ್ಯಮದಲ್ಲಿ - (i) ಶುದ್ಧಮಧ್ಯಮ (ii) ಪ್ರತಿಮಧ್ಯಮ ಎಂದು ಎರಡು ವಿಧ.
4. ಧೈವತದಲ್ಲಿ - (i) ಶುದ್ಧಧೈವತ (ii) ಚತುಃಶ್ರುತಿಧೈವತ (iii) ಷಟ್‌ಶ್ರುತಿಧೈವತ ಎಂದು ಮೂರು ವಿಧ.
5. ನಿಷಾದದಲ್ಲಿ - (i) ಶುದ್ಧನಿಷಾದ (ii) ಕೈಶಿಕೀನಿಷಾದ (iii) ಕಾಕಲೀನಿಷಾದ ಎಂದು ಮೂರು ವಿಧ.

## ರಾಗಗಳ ಸ್ವರೂಪ ನಿರೂಪಣಕ್ರಮ

ರಾಗಗಳ ಸ್ವರೂಪವನ್ನು ಸ್ಥೂಲವಾಗಿ ತಿಳಿಸಿಕೊಡುವಾಗ, ಸ್ವರಗಳ ಆರೋಹಣ ಮತ್ತು ಅವರೋಹಣಗಳ ಮುಖಾಂತರ ಪರಿಚಯಿಸಲಾಗುತ್ತದೆ.

1) **ಸ್ವರಗಳ ಆರೋಹಣಕ್ರಮ :** ಆರೋಹಣವೆಂದರೆ ಹತ್ತುವುದು ಅಥವಾ ಏರುವುದು ಎಂದು ಅರ್ಥ. ಷಡ್ಜ ಮೊದಲಾದ ಸ್ವರಗಳು ಕ್ರಮವಾಗಿ ಏರುತ್ತಾ ಹೋದರೆ ಅದು ಆರೋಹಣವಾಗುತ್ತದೆ.

   ಉದಾಹರಣೆ : ಸ, ರಿ, ಗ ಮ, ಪ, ಧ, ನಿ

2) **ಸ್ವರಗಳ ಅವರೋಹಣಕ್ರಮ :** ಅವರೋಹಣವೆಂದರೆ ಇಳಿಯುವುದು ಎಂದು ಅರ್ಥ. ಷಡ್ಜ ಮುಂತಾದ ಸ್ವರಗಳು ಕ್ರಮವಾಗಿ ಇಳಿಯುವಿಕೆಯನ್ನು ಅವರೋಹಣವೆಂದು ಕರೆಯುತ್ತಾರೆ.

   ಉದಾಹರಣೆ : ನಿ, ಧ, ಪ, ಮ, ಗ, ರಿ, ಸ

**ಸ್ಥಾಯಿ :** ಏಳು ಸ್ವರಗಳ ಗುಂಪಿಗೆ ಸ್ಥಾಯಿ ಎಂದು ಹೆಸರು. ಇದಕ್ಕೆ ಸಪ್ತಕವೆಂದೂ ಹೆಸರಿದೆ. ನಾದಕಂಪನಗಳ ಹೆಚ್ಚುವಿಕೆಯಿಂದ ಇದು ಉಂಟಾಗುತ್ತದೆ. ಇದಕ್ಕೆ ಮೂಲ ಆಧಾರ ಷಡ್ಜಸ್ವರ. ಕಂಪನಗಳ ಆವರ್ತನಗಳು ಒಂದು ಸ್ಥಾಯಿಯಿಂದ ಇನ್ನೊಂದು ಸ್ಥಾಯಿಗೆ ಬರುವಾಗ ಎರಡರಷ್ಟಾಗಿರುತ್ತವೆ.

ಸ್ಥಾಯಿಯು - i) ಮಧ್ಯಸ್ಥಾಯಿ ii) ಮಂದ್ರಸ್ಥಾಯಿ ಮತ್ತು iii) ತಾರಸ್ಥಾಯಿ ಎಂದು ಮೂರು ಬಗೆಯಾಗಿದೆ.

i) **ಮಧ್ಯಸ್ಥಾಯಿ :** ಆಧಾರಷಡ್ಜಸ್ವರದಿಂದ ಆರಂಭಗೊಂಡು ಅವರೋಹಣಕ್ರಮದಲ್ಲಿ ನಿಷಾದ ಸ್ವರದ ತನಕ ಬರುವ ಸ್ವರಗಳನ್ನು ಮಧ್ಯಸ್ಥಾಯಿ ಎಂದು ಕರೆಯುತ್ತಾರೆ.

   ಉದಾಹರಣೆ : ಸ, ರಿ, ಗ, ಮ, ಪ, ಧ, ನಿ

   ಈ ಸ್ವರಗಳನ್ನು ಬರೆಯುವಾಗ ಇವುಗಳ ಕೆಳಭಾಗದಲ್ಲಿ ಚುಕ್ಕೆಗಳನ್ನು ಇಡುವುದಿಲ್ಲ.

ii) **ಮಂದ್ರಸ್ಥಾಯಿ :** ಸ್ವರಗಳು ಆರೋಹಣಕ್ರಮದಲ್ಲಿ ಬಂದನಂತರ, ನಿಷಾದಸ್ವರದಿಂದ ಪ್ರಾರಂಭಿಸಿ, ಹಿಂದಿನಿಂದ

ಬರುವ ಸ್ವರಗಳನ್ನು ಮಂದ್ರಸ್ಥಾಯಿ ಎಂದು ಕರೆಯುತ್ತಾರೆ.

ಉದಾಹರಣೆ : ನ಼ಿ, ಧ಼, ಪ಼, ಮ಼, ಗ಼, ರಿ಼, ಸ಼

ಈ ಸ್ವರಗಳನ್ನು ಬರೆಯುವಾಗ ಈ ಸ್ವರಗಳ ಕೆಳಗೆ ಚುಕ್ಕಿಗಳನ್ನು ಇಡುತ್ತಾರೆ.

iii) **ತಾರಸ್ಥಾಯಿ :** ತಾರಷಡ್ಜಸ್ವರದಿಂದ ಪ್ರಾರಂಭಿಸಿ ಆರೋಹಣಕ್ರಮದಲ್ಲಿ ನಿಷಾದಸ್ವರದವರೆಗೆ ಬರುವ ಸ್ವರಗಳನ್ನು ತಾರಸ್ಥಾಯಿಸ್ವರಗಳೆಂದು ಕರೆಯುತ್ತಾರೆ. ಹಾಗೆಯೇ ಮಧ್ಯಸ್ಥಾಯಿಯ ನಿಷಾದಸ್ವರದ ನಂತರ ಬರುವ ಷಡ್ಜಸ್ವರವನ್ನು ತಾರಷಡ್ಜವೆಂದು ಕರೆಯುತ್ತಾರೆ.

ಉದಾಹರಣೆ : ಸ̇, ರಿ̇, ಗ̇, ಮ̇, ಪ̇, ಧ̇, ನಿ̇

ಈ ಸ್ವರಗಳನ್ನು ಬರವಣಿಗೆಯಲ್ಲಿ ಬರೆಯುವಾಗ ಸ್ವರಗಳ ಮೇಲೆ ಚುಕ್ಕಿಗಳನ್ನು ಇಡುತ್ತಾರೆ.

## ರಾಗಸ್ವರೂಪಗಳು

ಜನರ ಮನಸ್ಸನ್ನು, ಕಿವಿಗಳನ್ನು ರಂಜಿಸುವ ಧ್ವನಿವಿಶೇಷವೇ ರಾಗ. ಕೇಳುವವರ ಮನಸ್ಸಿಗೆ ಮತ್ತು ಕಿವಿಗಳಿಗೆ ಆನಂದವನ್ನು ನೀಡುವಂತಹ, ಸ್ವರವರ್ಣಗಳಿಂದ ಭೂಷಿತವಾದ ವಿಶೇಷವಾದ ದನಿಯೇ ರಾಗವೆನಿಸುತ್ತದೆ.

ಷಡ್ಜ ಮುಂತಾದ ಏಳು ಸ್ವರಗಳನ್ನು ನಾನಾರೀತಿಯಿಂದ ಜೋಡಿಸಿದಾಗ ಅನೇಕ ರಾಗಗಳಾಗುತ್ತವೆ. ರಾಗದ ಲಕ್ಷಣವನ್ನು ಸಂಗೀತಶಾಸ್ತ್ರವನ್ನು ಬಲ್ಲವರು ನಾನಾರೀತಿಯಲ್ಲಿ ಹೇಳಿದ್ದಾರೆ.

i) **''ಯೋಽಸೌ ಧ್ವನಿವಿಶೇಷಸ್ತು ಸ್ವರವರ್ಣವಿಭೂಷಿತಃ |**
**ರಂಜಕೋ ಜನಚಿತ್ತಾನಾಂ ಸ ಚ ರಾಗ ಉದಾಹೃತಃ ||''**

ಎಂದು ಮತಂಗನು ತನ್ನ 'ಬೃಹದ್ದೇಶಿ' ಎಂಬ ಗ್ರಂಥದಲ್ಲಿ ಹೇಳಿದ್ದಾನೆ.

"ಸ್ವರವರ್ಣಗಳಿಂದ ಅಲಂಕೃತವಾದ, ಜನಮನವನ್ನು ರಂಜಿಸುವ ವಿಶೇಷವಾದ ಧ್ವನಿಯನ್ನು ರಾಗವೆಂದು ಕರೆಯುತ್ತಾರೆ" ಎಂದು ಇದರ ಅರ್ಥ.

ii) ಶಾರ್ಙ್ಗದೇವನು ತನ್ನ 'ಸಂಗೀತರತ್ನಾಕರ'ವೆಂಬ ಕೃತಿಯಲ್ಲಿ

**''ಯೋಽಸೌ ಧ್ವನಿವಿಶೇಷಸ್ತು ಸ್ವರವರ್ಣವಿಭೂಷಿತಃ |**
**ರಂಜಕೋ ಜನಚಿತ್ತಾನಾಂ ಸ ರಾಗಃ ಕಥಿತೋ ಬುಧೈಃ ||''**

(ಸ್ವರ-ಅಕ್ಷರಗಳಿಂದ ಕೂಡಿರುವ, ಜನರ ಮನಸ್ಸಿಗೆ ಮುದವನ್ನು ಕೊಡುವ ವಿಶಿಷ್ಟವಾದ ದನಿಯೇ ರಾಗ ಎನ್ನುವುದು ಇದರ ಅರ್ಥ.)

iii) ಅಹೋಬಲನು ತನ್ನ 'ಸಂಗೀತಪಾರಿಜಾತ'ದಲ್ಲಿ

**''ರಂಜಕಃ ಸ್ವರಸಂದರ್ಭೋ ರಾಗ ಇತ್ಯಭಿಧೀಯತೇ''** ಎಂದು ಹೇಳುತ್ತಾನೆ. (ಸಂತೋಷವನ್ನು ಕೊಡುವ ಸ್ವರಗಳ

ಸಮೂಹವನ್ನು ರಾಗವೆಂದು ಕರೆಯುತ್ತಾರೆ ಎನ್ನುವುದು ಇದರ ಅರ್ಥ.) ಭಾರತದೇಶದ ಎಲ್ಲ ಸಂಗೀತಪ್ರಕಾರಗಳಲ್ಲೂ ರಾಗವೇ ಮುಖ್ಯವಾಗಿದೆ.

ಸಪ್ತಸ್ವರಗಳ ಭೇದಗಳನ್ನು ಯಥಾಕ್ರಮವಾಗಿ ನಾನಾ ಪ್ರಕಾರದಲ್ಲಿ ಸೇರಿಸಿದಾಗ ಉಂಟಾಗುವ ಬಗೆ ಬಗೆಯ ರೂಪಗಳ ಛಾಯೆಯೇ ರಾಗವೆನಿಸುತ್ತದೆ. ನಿರ್ದಿಷ್ಟವಾದ ಸ್ವರಗಳ ಹೊಂದಾಣಿಕೆಯಿಂದ ರಾಗಗಳು ತಮ್ಮ ಸ್ವರೂಪವನ್ನು ಪಡೆಯುತ್ತವೆ. ಕರ್ಣಾಟಕ ಸಂಗೀತಪ್ರಕಾರದಲ್ಲಂತೂ ಪ್ರತಿಯೊಂದು ರಾಗಕ್ಕೂ ಅದರ ಸ್ವರೂಪ ಮತ್ತು ಸಂಚಾರಕ್ರಮಗಳು ನಿಶ್ಚಿತವಾಗಿವೆ. ಷಡ್ಜಸ್ವರವಿಲ್ಲದ ರಾಗವೇ ಇಲ್ಲ. ರಾಗವೂ ಪೂರ್ಣವೆನಿಸಬೇಕಾದರೆ ಷಡ್ಜಸ್ವರದ ಸಂವಾದಿಸ್ವರವಾದ ಮಧ್ಯಮಸ್ವರವಾಗಲೀ ಅಥವಾ ಪಂಚಮ-ಸ್ವರವಾಗಲೀ ಇದ್ದೇ ಇರಬೇಕು. ಒಂದು ರಾಗವು ಪರಿಪೂರ್ಣರಾಗವೆನಿಸಲು ಅದರ ಆರೋಹಣ ಅವ-ರೋಹಣಗಳಲ್ಲಿ ಕಡೆಯಪಕ್ಷ ಐದು ಸ್ವರಗಳಾದರೂ ಇರಬೇಕು. ಒಂದು ರಾಗದ ಆರೋಹಣದಲ್ಲಿ ನಾಲ್ಕು ಸ್ವರಗಳಿದ್ದರೆ ಆ ರಾಗದ ಅವರೋಹಣದಲ್ಲಿ ಐದು ಸ್ವರಗಳಿರಬೇಕು. ಹಾಗೆಯೇ ಅವರೋಹಣದಲ್ಲಿ ನಾಲ್ಕುಸ್ವರಗಳಿದ್ದರೆ ಆರೋಹಣದಲ್ಲಿ ಐದು ಸ್ವರಗಳು ಇರಲೇಬೇಕು. ಗ್ರಹ, ಅಂಶ, ತಾರ, ಮಂದ್ರ, ನ್ಯಾಸ, ಅಪನ್ಯಾಸ, ಸನ್ಯಾಸ, ವಿನ್ಯಾಸ, ಬಹುತ್ವ, ಅಲ್ಪತ್ವ, ಅಂತರಮಾರ್ಗ, ಷಾಡವ ಮತ್ತು ಔಡವ-ಗಳೆನ್ನುವುವು ರಾಗಕ್ಕೆ ಹೇಳಿರುವ ಹದಿಮೂರು ಲಕ್ಷಣಗಳು. ಇವುಗಳಲ್ಲಿ ಗ್ರಹ, ಅಂಶ, ನ್ಯಾಸಗಳು ಮುಖ್ಯವಾದವುಗಳು.

## ಜನಕ-ಜನ್ಯರಾಗಗಳು

ರಾಗಗಳಲ್ಲಿ ಜನಕರಾಗಗಳು ಮತ್ತು ಜನ್ಯರಾಗಗಳೆಂದು ಎರಡು ವಿಧ.

**ಜನಕರಾಗಗಳು :** ಸಪ್ತಸ್ವರಗಳು ಕ್ರಮವಾಗಿದ್ದು, ಆರೋಹಣ-ಅವರೋಹಣಗಳಲ್ಲಿ ಸಪ್ತಸ್ವರಗಳು ಇದ್ದು ಆರೋಹಣದಲ್ಲಿ ಬರುವ ಸ್ವರಗಳೇ ಅವರೋಹಣದಲ್ಲೂ ಕ್ರಮವಾಗಿ ಬಂದರೆ, ಅಂತಹ ರಾಗಗಳನ್ನು ಜನಕರಾಗಗಳೆಂದು ಕರೆಯುತ್ತಾರೆ. ಇಂತಹ ಜನಕರಾಗಗಳು ಒಟ್ಟು ಎಪ್ಪತ್ತೆರಡು ಇವೆ. ಜನಕರಾಗವನ್ನು ಮೇಳರಾಗ, ಮೇಳಕರ್ತೃರಾಗ, ರಾಗಾಂಗರಾಗ, ಸಂಪೂರ್ಣರಾಗ ಎಂದೂ ಕರೆಯುತ್ತಾರೆ. ಉದಾಹರಣೆಗೆ: ಮಾಯಾಮಾಳವಗೌಳರಾಗ.

**ಜನ್ಯರಾಗಗಳು :** ಜನಕರಾಗದಲ್ಲಿ ಹುಟ್ಟುವ ರಾಗಗಳನ್ನು ಜನ್ಯರಾಗಗಳೆಂದು ಕರೆಯುತ್ತಾರೆ. ಜನ್ಯರಾಗಗಳಲ್ಲಿ ಆರೋಹಣ ಅಥವಾ ಅವರೋಹಣದಲ್ಲಿ ಅಥವಾ ಆರೋಹಣ-ಅವರೋಹಣ-ಗಳೆರಡರಲ್ಲೂ ಒಂದೋ, ಎರಡೋ ಸ್ವರಗಳು ಬಿಟ್ಟುಹೋಗಿರುತ್ತವೆ. ಸಪ್ತಸ್ವರಗಳೂ ಪೂರ್ಣವಾಗಿ ಇರುವುದಿಲ್ಲ. ಒಂದು ವೇಳೆ ಏಳು ಸ್ವರಗಳು ಬಂದರೂ ಆರೋಹಣದಲ್ಲಿ ಬರುವ ಸ್ವರಗಳಲ್ಲಿ ಒಂದು ಅಥವಾ ಎರಡು ಸ್ವರಗಳ ಸ್ಥಾನವು ಅವರೋಹಣ ಕ್ರಮದಲ್ಲಿ ವ್ಯತ್ಯಾಸವಾಗಿರುತ್ತದೆ. ಉದಾಹರಣೆಗೆ : ಭೈರವೀರಾಗದಲ್ಲಿ ಆರೋಹಣದಲ್ಲಿ ಚತುಃಶ್ರುತಿ ಧೈವತಸ್ವರವೂ, ಅವರೋಹಣದಲ್ಲಿ ಶುದ್ಧಧೈವತ ಸ್ವರವೂ ಬರುತ್ತದೆ. ಕೆಲವೊಮ್ಮೆ ಏಳು ಸ್ವರಗಳು ಆರೋಹಣ-ಅವರೋಹಣಗಳಲ್ಲಿ ಬಂದರೆ ಆಗ ಅವುಗಳ ಸಂಚಾರವು ವಕ್ರವಾಗಿರುತ್ತದೆ.

**ಜನ್ಯರಾಗಗಳು -** i) ಉಪಾಂಗರಾಗ ಮತ್ತು ii) ಭಾಷಾಂಗರಾಗಗಳೆಂದು ಎರಡು ವಿಧಗಳಾಗಿವೆ.

**i) ಉಪಾಂಗರಾಗ :** ಜನಕರಾಗದ ಸ್ವರಗಳನ್ನೇ ಹೊಂದಿದ್ದು ಒಂದು ಅಥವಾ ಎರಡು ಸ್ವರಗಳು ಬಿಟ್ಟು ಹೋದ ಅಥವಾ ವಕ್ರವಾದರೆ ಅಂತಹ ರಾಗವು ಉಪಾಂಗರಾಗವಾಗುತ್ತದೆ. ಉದಾಹರಣೆಗೆ : ಮೋಹನ, ಹಂಸಧ್ವನಿ, ಶ್ರೀರಾ ಮೊದಲಾದುವು.

**ii) ಭಾಷಾಂಗರಾಗ :** ಕೆಲವು ಜನ್ಯರಾಗಗಳು ತನ್ನ ಜನಕರಾಗದ ಸ್ವರಗಳೊಂದಿಗೆ ಬೇರೆ ಜನಕರಾಗದ ಒಂದು, ಎರಡು, ಅಥವಾ ಮೂರು ಸ್ವರಗಳನ್ನು ತೆಗೆದುಕೊಳ್ಳುತ್ತವೆ. ಇಂತಹ ರಾಗಕ್ಕೆ ಭಾಷಾಂಗರಾಗವೆಂದು ಹೆಸರು. ಉದಾಹರಣೆ : ಮುಖಾರಿ, ಭೈರವಿ, ಬಿಲಹರಿ, ಕಾಂಭೋಜಿ ಮುಂತಾದುವು.

## ವಕ್ರರಾಗಗಳು

ಕೆಲವು ಜನ್ಯರಾಗಗಳಲ್ಲಿ ಆರೋಹಣ ಅಥವಾ ಅವರೋಹಣ, ಅಥವಾ ಆರೋಹಣ-ಅವರೋಹಣ ಎರಡರಲ್ಲೂ ಸ್ವರಗಳು ಕ್ರಮವಾಗಿ ಬರುವುದಿಲ್ಲ. ಇಂತಹ ರಾಗವನ್ನು ವಕ್ರರಾಗವೆನ್ನುತ್ತಾರೆ. ಸ್ವರಗಳು ಕ್ರಮವಾಗಿ ಬರದೆ ಇರುವುದಕ್ಕೆ ವಕ್ರವೆನ್ನುತ್ತಾರೆ. ಇಂತಹ ವಕ್ರರಾಗಗಳಲ್ಲಿ ಒಂದು ಸ್ವರವು ಎರಡು ಅಥವಾ ಮೂರು ಸಲ ಪ್ರಯೋಗದಲ್ಲಿ ಬರುತ್ತದೆ. ಉದಾಹರಣೆಗೆ : ವಸಂತರಾಗ, ಶ್ರೀರಾಗ.

## ವರ್ಜ್ಯರಾಗಗಳು

ಕೆಲವು ಜನ್ಯರಾಗಗಳಲ್ಲಿ ಆರೋಹಣ ಅಥವಾ ಅವರೋಹಣದಲ್ಲಿ ಅಥವಾ ಆರೋಹಣ-ಅವರೋಹಣ ಎರಡರಲ್ಲೂ ಸ್ವರಗಳು ಬಿಟ್ಟು ಹೋಗಿರುತ್ತವೆ. ಇಂತಹ ರಾಗಗಳು ವರ್ಜ್ಯರಾಗಗಳು. ಜನ್ಯರಾಗವನ್ನು ಆರೋಹಣ ಮತ್ತು ಅವರೋಹಣಗಳಲ್ಲಿ ಬರುವ ಸ್ವರಗಳಿಗೆ ಅನುಸಾರವಾಗಿ ಆಧಾರ, ಸಂಪೂರ್ಣ, ಷಾಡವ, ಔಡವ ಮತ್ತು ಸ್ವರಾಂತರವೆಂಬ ಪ್ರಕಾರಗಳಿಂದ ಎಂಟು ವಿಧಗಳಾಗಿ ವಿಂಗಡಿಸಿದ್ದಾರೆ.

ವಕ್ರರಾಗಗಳು ವರ್ಜ್ಯವಾಗಿರಬಹುದು ಅಥವಾ ಅಲ್ಲದಿರಬಹುದು, ಹಾಗೆಯೇ ವಕ್ರರಾಗಗಳು ಉಪಾಂಗವೂ ಆಗಿರಬಹುದು, ಭಾಷಾಂಗವೂ ಆಗಿರಬಹುದು. ಜನ್ಯರಾಗದ ವರ್ಗೀಕರಣವನ್ನು ಹೇಳುವಾಗ ಆರೋಹಣ ಮತ್ತು ಅವರೋಹಣಗಳನ್ನು ಬೇರೆ ಬೇರೆಯಾಗಿ ಪರಿಗಣಿಸಬೇಕು. ಒಂದು ಸ್ವರವು ರಾಗವೊಂದರ ಆರೋಹಣ-ಅವರೋಹಣಗಳಲ್ಲಿ ಎರಡು ಸಲ ಬಂದಿದ್ದರೆ, ಆಗ ಅದನ್ನು ಒಂದೇ ಸ್ವರವೆಂದು ತಿಳಿದುಕೊಳ್ಳಬೇಕು.

## ರಾಗಗಳ ವರ್ಗೀಕರಣ

ರಾಗಗಳನ್ನು ವರ್ಗೀಕರಿಸುವಾಗ ಸಂಪೂರ್ಣ, ಔಡವ, ಷಾಡವ, ಸ್ವರಾಂತರಗಳೆಂಬ ಪ್ರಭೇದಗಳ ಮೂಲಕ ವಿವರಣೆಯನ್ನು ನೀಡುತ್ತಾರೆ.

**(i) ಸಂಪೂರ್ಣರಾಗ :** ಸಪ್ತಸ್ವರಗಳೂ ಆರೋಹಣ-ಅವರೋಹಣಕ್ರಮಗಳಲ್ಲಿ ಇದ್ದರೆ ಅದು ಸಂಪೂರ್ಣರಾಗ.

**(ii) ಔಡವರಾಗ :** ಆರೋಹಣ ಅಥವಾ ಅವರೋಹಣದಲ್ಲಿ ಐದು ಸ್ವರಗಳು ಬಂದರೆ ಅಂತಹ ರಾಗವು ಔಡವರಾಗ.

**(iii) ಷಾಡವರಾಗ :** ಆರೋಹಣ ಅಥವಾ ಅವರೋಹಣದಲ್ಲಿ ಆರು ಸ್ವರಗಳು ಪ್ರಯೋಗವಾದಲ್ಲಿ ಅಂತಹ ರಾಗವು ಷಾಡವರಾಗವೆನಿಸುತ್ತದೆ.

**(iv) ಸ್ವರಾಂತರರಾಗ :** ಆರೋಹಣ-ಅವರೋಹಣಗಳಲ್ಲಿ ನಾಲ್ಕು ಸ್ವರಗಳು ಬಂದರೆ ಅದು ಸ್ವರಾಂತರರಾಗವಾಗುತ್ತದೆ.

## ಅನುಮಂದ್ರ-ಅತಿತಾರಗಳ ವಿವರಣೆ

1) ಮಂದ್ರಸ್ಥಾಯಿ ಷಡ್ಜದಿಂದ ಕೆಳಕ್ಕೆ ಬರುವ ಸ್ವರಗಳ ಸಮೂಹವನ್ನು ಅನುಮಂದ್ರಸ್ವರವೆಂದು ಕರೆಯುತ್ತಾರೆ.

ಉದಾಹರಣೆ : ನಿ, ಧ, ಧ, ಪ, ಜ, ಮ ಮುಂತಾದವು.

2) ಮಧ್ಯಸ್ಥಾಯಿಷಡ್ಜದಿಂದ ಆದ ಮೇಲೆ ಅದರ ಮೂಲಕ ಬರುವ ಸ್ವರಗಳ ಸಮೂಹವು ಅತಿತಾರವೆನಿಸುತ್ತದೆ.

## ಗ್ರಹ-ನ್ಯಾಸ-ಅಂಶಶಬ್ದಗಳ ವಿವರಣೆ

**ಗ್ರಹ :** ಯಾವ ಸ್ವರದಿಂದ ರಾಗವು ಪ್ರಾರಂಭವಾಗುವುದೋ ಆ ಆರಂಭದ ಸ್ವರಕ್ಕೆ 'ಗ್ರಹ'ವೆಂದು ಹೆಸರು.

ರಾಗ ಮತ್ತು ತಾಳಗಳೆರಡರಲ್ಲೂ ಗ್ರಹವೆಂಬ ಶಬ್ದವನ್ನು ಬಳಸುತ್ತಾರೆ. ರಾಗವು ಪ್ರಾರಂಭವಾಗುವ ಸ್ವರವೇ ಗ್ರಹಸ್ವರ. ಇದು ಸ್ವರದ ಅಂಗ. ರಾಗವನ್ನು ಅಥವಾ ಕೃತಿಯನ್ನು ಪ್ರಾರಂಭ ಮಾಡುವ ಸ್ವರಕ್ಕೆ ಗ್ರಹವೆಂದು ಹೆಸರು. ಇದಕ್ಕೆ ಜೀವಸ್ವರ ಅಥವಾ ಅಂಶಸ್ವರವೆಂದು ಹೆಸರು.

ತಾಳದಲ್ಲಿ ಗ್ರಹವು ಸಮಗ್ರಹ ಮತ್ತು ವಿಷಮಗ್ರಹ ಎಂದು ಎರಡು ವಿಧವಾಗಿದೆ.

1) **ಸಮಗ್ರಹ :** ಗಾಯನ ಮತ್ತು ತಾಳಗಳೆರಡನ್ನೂ ಏಕಕಾಲದಲ್ಲಿ ಪ್ರಾರಂಭಿಸಿದರೆ ಅದು ಸಮಗ್ರಹವಾಗುತ್ತದೆ. ಗಾಯನ ಮತ್ತು ತಾಳಗಳು ಒಂದೇ ಕಾಲದಲ್ಲಿ ಪ್ರಾರಂಭವಾಗದಿದ್ದರೆ ಅದು ವಿಷಮಗ್ರಹ.

2) ವಿಷಮಗ್ರಹದಲ್ಲಿ ಅತೀತ ವಿಷಮಗ್ರಹ ಮತ್ತು ಅನಾಗತವಿಷಮಗ್ರಹವೆಂದು ಎರಡು ವಿಧ.

i) **ಅತೀತವಿಷಮಗ್ರಹ :** ಗಾಯನವು ಆರಂಭವಾದ ಮೇಲೆ ತಾಳಕ್ರಿಯೆಯು ಪ್ರಾರಂಭವಾದರೆ ಅದು ಅತೀತವಿಷಮಗ್ರಹ.

ii) **ಅನಾಗತವಿಷಮಗ್ರಹ :** ತಾಳಕ್ರಿಯೆಯನ್ನು ಆರಂಭಿಸಿದ ನಂತರ ಗೀತೆಯು ಪ್ರಾರಂಭವಾದರೆ ಅದು ಅನಾಗತವಿಷಮಗ್ರಹ.

1) **ನ್ಯಾಸ :** ರಾಗವು ಯಾವ ಸ್ವರದಲ್ಲಿ ಕೊನೆಗೊಳ್ಳುತ್ತದೋ ಆ ಮುಕ್ತಾಯದ ಸ್ವರಕ್ಕೆ ನ್ಯಾಸ ಎಂದು ಹೆಸರು. ರಾಗವನ್ನು ಮುಕ್ತಾಯಗೊಳಿಸುವ ಸ್ವರವೇ ನ್ಯಾಸಸ್ವರ. ಇದೂ ಸಹ ಸ್ವರಾಂಗ.

2) **ಅಂಶ :** ರಾಗದಲ್ಲಿ ಹೆಚ್ಚಾಗಿ ಬರುವ ವಿಶಿಷ್ಟವಾದ ಸ್ವರಕ್ಕೆ ಅಂಶವೆಂದು ಹೆಸರು. ಇದಕ್ಕೆ ಜೀವಸ್ವರ, ರಾಗಛಾಯಾಸ್ವರ ಎಂದೂ ಹೆಸರುಗಳಿವೆ. ರಾಗದಲ್ಲಿ ರಾಗವಿಸ್ತಾರಕ್ಕೆ ಉಪಯೋಗಿಸಲ್ಪಡುವ ಸ್ವರವೇ ಅಂಶಸ್ವರ.

3) **ರಾಗಮಾಲಿಕೆ ಅಥವಾ ರಾಗಕದಂಬಕ :** ರಾಗಗಳ ಸಾಲಿಗೆ ರಾಗಮಾಲಿಕೆ ಅಥವಾ ರಾಗಕದಂಬಕ ಎಂದು ಹೆಸರು. ಕದಂಬಕವೆಂದರೆ ಗುಂಪು ಎಂದು ಅರ್ಥ. ಅನೇಕ ರಾಗಗಳನ್ನು ಒಂದಾದ ನಂತರ ಮತ್ತೊಂದು ಬರುವಂತೆ ಮಧುರವಾಗಿ, ಕಿವಿಗೆ ಇಂಪಾಗಿರುವಂತೆ ಹಾಡುವುದಕ್ಕೆ ಅಥವಾ ನುಡಿಸುವುದಕ್ಕೆ ರಾಗಮಾಲಿಕೆ ಎಂದು ಹೆಸರು.

**4) ರಾಗಾಲಾಪನೆ :** ಆಲಾಪನೆ ಎಂದರೆ ವಿಸ್ತಾರ ಎಂದು ಅರ್ಥ. ರಾಗಗಳನ್ನು ವಿಸ್ತರಿಸಿ ಹಾಡುವುದಕ್ಕೆ ರಾಗಾಲಾಪ ಎಂದು ಹೆಸರು. ರಸ-ಭಾವಗಳಿಂದ ಕೂಡಿಕೊಂಡು, ಗಮಕಯುಕ್ತವಾಗಿ, ಜನರ ಮನಸ್ಸಿಗೆ ರಂಜಕವಾಗುವಂತೆ, ಕಿವಿಗಳಿ ಆಪ್ಯಾಯಮಾನವಾಗುವಂತೆ ರಾಗವನ್ನು ವಿಸ್ತರಿಸಿ ಹಾಡುವುದನ್ನೇ ರಾಗಾಲಾಪನೆ ಎನ್ನುತ್ತಾರೆ.

**5) ರಾಗ-ರಾಗಿಣಿ :** ರಾಗದ ಸ್ವರೂಪವು ಪುರುಷರೂಪವಾಗಿದ್ದರೆ ರಾಗವೆಂದು, ಸ್ತ್ರೀರೂಪವಾಗಿದ್ದರೆ ರಾಗಿಣಿಯೆಂದೂ ಹೆಸರು. ರಾಗದ ಹೆಸರನ್ನು ಹೇಳುವ ಶಬ್ದವು ಪುಂಲಿಂಗದಲ್ಲಿ ಇದ್ದರೆ ಆಗ ಅದು ರಾಗವಾಗುತ್ತದೆ. ಸ್ತ್ರೀಲಿಂಗದಲ್ಲಿದ್ದ ರಾಗಿಣಿಯಾಗುತ್ತದೆ.

**6) ಗ್ರಾಮ :** ಸ್ವರಗಳ ಗುಂಪಿಗೆ ಗ್ರಾಮವೆಂದು ಹೆಸರು. ಇದು ಮೂರ್ಛನೆ, ತಾನ ಮೊದಲಾದವುಗಳಿಗೆ ಆಶ್ರಯವಾಗಿದೆ. ಗ್ರಾಮದಲ್ಲಿ ಅನೇಕ ಬಗೆಗಳುಂಟು.

**7) ಮೂರ್ಛನಾ :** ಗ್ರಹಭೇದದಿಂದ ಷಡ್ಜ, ಗಾಂಧಾರ ಮತ್ತು ಮಧ್ಯಮಗ್ರಾಮಗಳಿಂದ ಉಂಟಾದ ಸ್ವರಮೇಳಗಳಿಗೆ ಮೂರ್ಛನೆಗಳೆಂದು ಹೆಸರು. ಮೂರ್ಛನೆಯಲ್ಲೂ ಅನೇಕ ವಿಧಗಳುಂಟು.

## ಸಪ್ತಸ್ವರಗಳ ವಿಭಾಗ

ಸ್ವರಗಳನ್ನು ವಾದಿಸ್ವರಗಳು, ಸಂವಾದಿಸ್ವರಗಳು, ಅನುವಾದಿಸ್ವರಗಳು ಮತ್ತು ವಿವಾದಿಸ್ವರಗಳೆಂದು ವಿಭಾಗ ಮಾಡಿದ್ದಾರೆ.

**i) ವಾದಿಸ್ವರ :** ಒಂದು ರಾಗದಲ್ಲಿ ಮತ್ತೆ ಮತ್ತೆ ಉಪಯೋಗಿಸುವಂತಹ ಸ್ವರಕ್ಕೆ ವಾದಿಸ್ವರವೆಂದು ಹೆಸರು. ಇದಕ್ಕೆ ಜೀವಸ್ವರ ಅಥವಾ ಅಂಶಸ್ವರವೆಂದೂ ಹೆಸರು.

ಪ್ರತಿಯೊಂದು ರಾಗದಲ್ಲೂ ವಾದಿಸ್ವರಗಳು ಬೇರೆ ಬೇರೆ ಇರುತ್ತವೆ. ಒಮ್ಮೊಮ್ಮೆ ಒಂದಕ್ಕಿಂತ ಹೆಚ್ಚುಸ್ವರಗಳೂ ವಾದಿಸ್ವರಗಳಾಗಿರಬಹುದು. ವಾದಿಸ್ವರವು ರಾಜನಂತೆ ಮುಖ್ಯವಾದುದು.

ಷಡ್ಜ ಮತ್ತು ಪಂಚಮಸ್ವರಗಳೇ ವಾದಿಸ್ವರಗಳು. ಪಂಚಮಸ್ವರವಿಲ್ಲದ ರಾಗಗಳೂ ಬಹಳಷ್ಟಿವೆ.

**ii) ಸಂವಾದಿಸ್ವರ :** ರಾಗದಲ್ಲಿ ಬರುವ ಎರಡು ಸ್ವರಗಳ ಮಧ್ಯೆ ಎಂಟು ಅಥವಾ ಹನ್ನೆರಡು ಶ್ರುತಿಗಳ ಅಂತರವಿದ್ದಲ್ಲಿ ಆ ಸ್ವರವನ್ನು ಸಂವಾದಿಸ್ವರವೆಂದು ಕರೆಯುತ್ತಾರೆ.

ಈ ಎರಡು ಸ್ವರಗಳ ಮಧ್ಯದಲ್ಲಿ ದನಿಯ ಮೈತ್ರಿಯಿರುವುದರಿಂದ ಏಕಕಾಲದಲ್ಲಿ ಈ ಸ್ವರಗಳನ್ನು ದನಿ ಮಾಡಿದಾಗ ಕೇಳಲು ಕಿವಿಗೆ ಬಹಳ ಇಂಪಾಗಿರುತ್ತದೆ.

ಷಡ್ಜ-ಮಧ್ಯಮ, ಷಡ್ಜ-ಪಂಚಮ, ರಿಷಭ-ಧೈವತ, ಗಾಂಧಾರ-ನಿಷಾದಗಳೇ ಸಂವಾದಿಸ್ವರಗಳು.

**iii) ಅನುವಾದಿಸ್ವರ :** ವಾದಿ, ಸಂವಾದಿ, ವಿವಾದಿಗಳಲ್ಲದ ಸ್ವರಗಳೇ ಅನುವಾದಿಸ್ವರಗಳು.

**iv) ವಿವಾದಿಸ್ವರ :** ರಾಗದಲ್ಲಿ ಎರಡುಸ್ವರಗಳ ಅಂತರವು ಎರಡು ಶ್ರುತಿಗಳಾಗಿದ್ದರೆ ಅಂತಹ ಸ್ವರಗಳಿಗೆ

ವಿವಾದಿಸ್ವರಗಳೆಂದು ಹೆಸರು. ಇವುಗಳನ್ನು ಏಕಕಾಲದಲ್ಲಿ ದನಿಮಾಡಿದಾಗ ಕಿವಿಗಳಿಗೆ ಕಠೋರವಾಗಿ ಕೇಳುವುದರಿಂದ ಇವುಗಳು ಶತ್ರುಸ್ವರಗಳೆಂದೂ ಕರೆಯಲ್ಪಡುತ್ತವೆ.

## ರಾಗಗಳಲ್ಲಿ ಮೇಳಗಳು

ಕರ್ಣಾಟಕ ಸಂಗೀತದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ರಾಗಗಳು ಇವೆ. ಇಲ್ಲಿರುವ ರಾಗಗಳನ್ನು ಮೇಳ ಮತ್ತು ಜನ್ಯಗಳೆಂದು ವಿಭಾಗ ಮಾಡಿದ್ದಾರೆ. ಮೇಳರಾಗಗಳಿಗೆ ಜನಕರಾಗಗಳು, ಮೇಳಕರ್ತರಾಗಗಳು, ರಾಗಾಂಗರಾಗಗಳೆಂದೂ ಕರೆಯುತ್ತಾರೆ.

ಒಂದು ರಾಗವನ್ನು ಮೇಳರಾಗವೆಂದು ಹೇಳಬೇಕಾದಲ್ಲಿ i) ಸ್ವರಸಂಪೂರ್ಣತೆ ii) ಸ್ವರಾನುಕ್ರಮತೆ iii) ಸ್ವರಸಾಮ್ಯತೆ ಎಂಬ ಮೂರು ಅಂಶಗಳು ಬೇಕು.

i) ಆರೋಹಣ-ಅವರೋಹಣಗಳೆರಡರಲ್ಲೂ ಸಪ್ತಸ್ವರಗಳು ಇದ್ದರೆ ಅದು ಸ್ವರಸಂಪೂರ್ಣತೆ-ಯಾಗುತ್ತದೆ.

ii) ಆರೋಹಣದಲ್ಲಿ ಬರುವ ಸ್ವರಗಳೇ ಅವರೋಹಣದಲ್ಲೂ ಬರಬೇಕು. ಹಾಗೆ ಬಂದರೆ ಅದು ಸ್ವರಾನುಕ್ರಮತೆ.

iii) ಆರೋಹಣದ ಸ್ವರಸ್ಥಾನಗಳು ಏರಿಕೆಯ ಕ್ರಮದಲ್ಲಿದ್ದು, ಅವರೋಹಣದ ಸ್ವರಸ್ಥಾನಗಳು ಇಳಿಕೆಯ ಕ್ರಮದಲ್ಲಿರಬೇಕು. ಹೀಗೆ ಇದ್ದರೆ ಅದು ಸ್ವರಸಾಮ್ಯತೆ.

ಕರ್ಣಾಟಕಸಂಗೀತದಲ್ಲಿ ಒಂದು ಸ್ಥಾಯಿಯಲ್ಲಿರುವ ಏಳು ಸ್ವರಗಳ, ಹದಿನಾರು ಭೇದಗಳ ಆಧಾರದಿಂದ ಎಪ್ಪತ್ತೆರಡು ಮೇಳಗಳು ರಚಿತಗೊಂಡಿವೆ. ಈ ಮೇಳಗಳ ರಚನೆಯು ಒಂದು ಕ್ರಮಬದ್ಧತೆಯಲ್ಲಿ ಹುಟ್ಟಿಕೊಂಡಿವೆ. ಪ್ರಕೃತಿಸ್ವರಗಳಾದ ಪಂಚಮಸ್ವರ ಮತ್ತು ಮಧ್ಯಮಸ್ವರಗಳು ಇಲ್ಲದಿರುವ ಮೇಳಗಳೇ ಇಲ್ಲ. ಮಧ್ಯಮದಲ್ಲಿ ಶುದ್ಧಮಧ್ಯಮ ಪ್ರಯೋಗದಿಂದ ಮೂವತ್ತಾರು ಮೇಳಗಳು, ಪ್ರತಿಮಧ್ಯಮ ಪ್ರಯೋಗದಿಂದ ಮೂವತ್ತಾರು ಮೇಳಗಳು ರೂಪುಗೊಂಡಿವೆ. ಶುದ್ಧಮಧ್ಯಮಮೇಳಗಳನ್ನು ಪೂರ್ವಾಂಗಮೇಳಗಳೆಂದೂ ಪ್ರತಿಮಧ್ಯಮದ ಮೂವತ್ತಾರು ಮೇಳಗಳನ್ನು ಉತ್ತರಾಂಗಮೇಳಗಳೆಂದು ಕರೆದಿದ್ದಾರೆ. ಒಟ್ಟಾರೆ ಮೂವತ್ತಾರುರಾಗಗಳು, ಎಪ್ಪತ್ತೆರಡು ರಾಗಮೇಳಗಳು ಹುಟ್ಟಿವೆ.

## ತಾಳಗಳು

ಸಂಗೀತವನ್ನು ಹಾಡುವಾಗ ಗೀತೆ ಅಥವಾ ಕೀರ್ತನೆಯ ಕಾಲಪ್ರಮಾಣವನ್ನು ಕೈಗಳಿಂದಲಾಗಲೀ ಅಥವಾ ತಾಳಯಂತ್ರಗಳಿಂದಲಾಗಲೀ ತೋರಿಸುವುದಕ್ಕೆ ತಾಳವೆಂದು ಹೆಸರು. ಗಾಯನದ ಪ್ರಮಾಣವನ್ನು ಅಳೆಯುವ, ರಾಗ, ಭಾವಶೋಭೆ ಮತ್ತು ಸಂಪೂರ್ಣತೆಯನ್ನು ತಂದುಕೊಡುವ ಸಾಧನವೇ ತಾಳ.

ತಾಳವು ಮಾರ್ಗತಾಳ ಮತ್ತು ದೇಶೀತಾಳವೆಂದು ಎರಡು ವಿಧ. ಮಾರ್ಗತಾಳಗಳನ್ನು ಈಶ್ವರನು ತಿಳಿಸಿದ್ದಾನೆಂದು ಪ್ರತೀತಿಯಿದೆ. ಮಾರ್ಗತಾಳಗಳಿಗಿಂತ ಬೇರೆಯದಾದ ತಾಳಗಳಿಗೆ ದೇಶೀತಾಳಗಳೆಂದು ಹೆಸರು. ಮಾರ್ಗತಾಳಗಳಲ್ಲಿ ಶುದ್ಧ, ಸಾಲಗ ಮತ್ತು ಸಂಕೀರ್ಣಗಳೆಂಬ ಭೇದಗಳಿವೆ. ಚಚ್ಚತ್ಪುಟ, ಚಾಚತ್ಪುಟ, ಷಟ್ಪಿತಾಪುತ್ರಿಕ, ಸಂಪದ್ವೇಷ್ಟಕ, ಉದ್ಘಟಗಳು ಮಾರ್ಗತಾಳಗಳು. ದೇಶೀತಾಳಗಳಲ್ಲಿ ಮುಖ್ಯವಾಗಿ ಧ್ರುವ, ಮಠ್ಯ, ರೂಪಕ, ಝಂಪೆ, ತ್ರಿಪುಟ, ಅಟ್ಟ ಮತ್ತು

ಏಕತಾಳಗಳೆಂದು ಏಳು ವಿಧ. ಸಪ್ತಸ್ವರಗಳಂತೆ ಸಪ್ತತಾಳಗಳು ಇವೆ. ಸಪ್ತತಾಳಗಳಲ್ಲಿ ಲಘು, ದ್ರುತ, ಅನುದ್ರುತಗಳೆಂಬ ಅಂಗಗಳನ್ನು ಮಾತ್ರ ಉಪಯೋಗಿಸುತ್ತಾರೆ. ಪ್ರಾಚೀನ ಪದ್ಧತಿಯಲ್ಲಿ ಇರುವ 108 ತಾಳಗಳಲ್ಲಿ ಅನುದ್ರುತ, ದ್ರುತ, ಲಘು, ಗುರು, ಪ್ಲುತ, ಕಾಕಪಾದಗಳೆಂಬ ಷಡಂಗಗಳನ್ನು ಉಪಯೋಗಿಸುತ್ತಾರೆ. ಪುರಂದರದಾಸರು ಅಲಂಕಾರ, ಗೀತೆ, ಕೀರ್ತನೆ ಸುಳಾದಿಗಳೆಂಬ ತಮ್ಮ ರಚನೆಗಳನ್ನು ಈ ಏಳು ತಾಳಗಳನ್ನು ಉಪಯೋಗಿಸಿಕೊಂಡು ರಚಿಸಿರುವ ಕಾರಣ ಇವಕ್ಕೆ ಸುಳಾದಿ ಸಪ್ತತಾಳಗಳೆಂದು ಹೆಸರು.

ಏಳುತಾಳಗಳು ತ್ರಿಶ್ರ (3), ಚತುರಶ್ರ (4), ಖಂಡ (5), ಮಿಶ್ರ (7), ಸಂಕೀರ್ಣ (9) ಎಂಬ ಐದು ಜಾತಿಭೇದಗಳಿಂದ 35 ತಾಳಗಳಾಗುತ್ತವೆ. ಈ 35 ತಾಳಗಳು ಪುನಃ ತ್ರಿಶ್ರ, ಚತುರಶ್ರ, ಖಂಡ, ಮಿಶ್ರ, ಸಂಕೀರ್ಣ ಎಂಬ ಐದು ರೀತಿಯ ಗತಿಭೇದಗಳಿಂದ 175 ತಾಳಗಳಾಗುತ್ತವೆ.

ತಾಳದಲ್ಲಿ ಐದು ಜಾತಿಭೇದಗಳು ಲಘುವಿಗೆ ಮಾತ್ರ ಅನ್ವಯವಾಗುತ್ತದೆ.

## ಛಾಪುತಾಳಗಳು ಮತ್ತು ಅವುಗಳ ವಿವಿಧತೆ

ಛಾಪುತಾಳವು ಪುರಾತನ ತಾಳಗಳಲ್ಲಿ ಒಂದು. ಉತ್ತರಭಾರತದ ಸಂಗೀತದಲ್ಲಿ ಇದು ಕಂಡು ಬರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಹಾಡುವ ಜನಪದ ಗೀತೆಗಳಲ್ಲಿ ಈ ತಾಳವು ಉಪಯೋಗಿಸಲ್ಪಡುತ್ತದೆ. ಛಾಪುತಾಳದಲ್ಲಿ i) ತ್ರಿಶ್ರಛಾಪು ii) ಖಂಡಛಾಪು iii) ಮಿಶ್ರಛಾಪು iv) ಸಂಕೀರ್ಣಛಾಪು ಎಂಬ ಭೇದಗಳಿವೆ.

ಹಿಂದೂಸ್ಥಾನಿ ಪದ್ಧತಿಯಲ್ಲಿ ದೇಶಾದಿ, ಮಧ್ಯಾದಿತಾಳಗಳು ಹೆಚ್ಚಾಗಿ ಕಂಡುಬರುತ್ತವೆ. ತ್ಯಾಗರಾಜರೂ ಸಹ ಕರ್ಣಾಟಕ ಸಂಗೀತದಲ್ಲಿ ಈ ತಾಳದ ಮೂಲಕ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಆದಿತಾಳಕ್ಕೂ ದೇಶಾದಿತಾಳಕ್ಕೂ ಇರುವ ಅಕ್ಷರಕಾಲ ಒಂದೇ ಆದರೂ ದೇಶಾದಿತಾಳದ ಅಂಗರಚನೆ ಭಿನ್ನವಾಗಿದೆ. ಅಂದರೆ ಆದಿತಾಳದಂತೆ ಲಘು ಮತ್ತು ದ್ರುತಗಳು ಇರುವುದಿಲ್ಲ.

## ತಾಳದ ಅಂಗಗಳು

ತಾಳದ ದಶಪ್ರಾಣಗಳಲ್ಲಿ ತಾಳಾಂಗವೂ ಒಂದಾಗಿದೆ. ತಾಳವನ್ನು ಎಣಿಕೆ ಮಾಡುವಾಗ ಬರುವ ಅವಯವಗಳನ್ನು ತಾಳಾಂಗಗಳೆನ್ನುತ್ತಾರೆ. ಸುಳಾದಿಸಪ್ತತಾಳಗಳಲ್ಲಿ ಲಘು, ದ್ರುತ, ಅನುದ್ರುತಗಳೆಂಬ ಮೂರು ತಾಳಾಂಗಗಳನ್ನು ಬಳಸುತ್ತಾರೆ. ಇವುಗಳ ವಿವರಣೆ ಹೀಗಿದೆ -

i) ಲಘು : ಒಂದು ಘಾತವನ್ನು (ಪೆಟ್ಟನ್ನು) ಹಾಕಿ ಬೆರಳುಗಳನ್ನು ಎಣಿಸುವುದು. ಇದರ ಚಿಹ್ನೆ " | "

ii) ದ್ರುತ : ಒಂದು ಘಾತವನ್ನು ಹಾಕಿ ವಿಸರ್ಜಿತವನ್ನು ಹಾಕುವುದು ದ್ರುತ. ಇದರ ಚಿಹ್ನೆ " 0 "

iii) ಅನುದ್ರುತ : ಒಂದು ಘಾತವನ್ನು ಮಾತ್ರ ಹಾಕುವುದಕ್ಕೆ ಅನುದ್ರುತವೆಂದು ಹೆಸರು. ಇದರ ಚಿಹ್ನೆ " U "

ಜಾತಿ : ತಾಳದ ದಶಪ್ರಾಣಗಳಲ್ಲಿ ಜಾತಿಯು ಒಂದು. ಜಾತಿಯು ಲಘುವಿಗೆ ಮಾತ್ರ ಅನ್ವಯವಾಗುತ್ತದೆ. ಲಘುಜಾತಿಯಲ್ಲಿ ತ್ರಿಶ್ರ, ಚತುರಶ್ರ, ಖಂಡ, ಮಿಶ್ರ, ಸಂಕೀರ್ಣವೆಂದು ಐದು ವಿಧಗಳು.

i) ತ್ರಿಶ್ರಜಾತಿಗೆ ಮೂರು ಲಘು ಅಕ್ಷರಗಳು

ii) ಚತುರಶ್ರಜಾತಿಗೆ ನಾಲ್ಕು ಲಘು ಅಕ್ಷರಗಳು

iii) ಖಂಡಜಾತಿಗೆ ಐದು ಲಘು ಅಕ್ಷರಗಳು

iv) ಮಿಶ್ರಜಾತಿಗೆ ಏಳು ಲಘು ಅಕ್ಷರಗಳು

v) ಸಂಕೀರ್ಣಜಾತಿಗೆ ಒಂಭತ್ತು ಲಘು ಅಕ್ಷರಗಳು

ಸೂಳಾದಿ ಸಪ್ತತಾಳಗಳನ್ನು ಹೀಗೆ ವಿವರಿಸಿದ್ದಾರೆ -

| | ತಾಳ | ಅಂಗಗಳು | ಸಂಜ್ಞೆ |
|---|---|---|---|
| i) | ಧ್ರುವತಾಳ | 1 ಲಘು 2 ದ್ರುತ 2 ಲಘುಗಳು | \|0\|\| |
| ii) | ಮಠ್ಯತಾಳ | 1 ಲಘು 1 ದ್ರುತ 1 ಲಘು | \|0\| |
| iii) | ರೂಪಕತಾಳ | 1 ದ್ರುತ 1 ಲಘು | 0\| |
| iv) | ಝಂಪೆತಾಳ | 1 ಲಘು 1 ಅನುದ್ರುತ 1 ದ್ರುತ | \|U0 |
| v) | ತ್ರಿಪುಟತಾಳ | 1 ಲಘು 2 ದ್ರುತಗಳು | \|00 |
| vi) | ಅಟ್ಟತಾಳ | 2 ಲಘುಗಳು 2 ದ್ರುತಗಳು | \|\|00 |
| vii) | ಏಕತಾಳ | 1 ಲಘು | \| |

**ಸಂಗೀತದ ಕಾಲ :** ಸಂಗೀತದ ಗೇಯರಚನೆಯನ್ನು ಅಳೆಯುವ ವೇಗದ ಮಾಪನವು ಕಾಲ. ಸಂಗೀತದಲ್ಲಿ ಮುಖ್ಯವಾಗಿ

- ಒಂದನೆಯ ಕಾಲ (ಪ್ರಥಮ ಕಾಲ)

ಎರಡನೆಯ ಕಾಲ (ದ್ವಿತೀಯ ಕಾಲ)

ಮೂರನೆಯ ಕಾಲ (ತೃತೀಯ ಕಾಲ) ಎಂಬುದಾಗಿ ಮೂರು ಕಾಲಗಳಿವೆ.

**i) ಒಂದನೆಯ ಕಾಲ :** ತಾಳಾಂಗದ ಒಂದು ಎಣಿಕೆಗೆ ಬರುವ ಒಂದು ಸ್ವರವನ್ನು ಒಂದನೆಯ ಕಾಲವೆಂದು ಹೇಳುತ್ತಾರೆ. ಉದಾಹರಣೆ : ಸ, ರಿ, ಗ, ಮ.

**ii) ಎರಡನೆಯ ಕಾಲ :** ತಾಳಾಂಗದ ಒಂದು ಎಣಿಕೆಗೆ ಎರಡು ಸ್ವರಗಳು ಬಂದರೆ ಅದು ದ್ವಿತೀಯ ಕಾಲ. ಇದು ಒಂದನೆಯ ಕಾಲದ ಸ್ವರದ ವೇಗಕ್ಕಿಂತ ಎರಡರಷ್ಟಿರುತ್ತದೆ. ಸ್ವರಗಳ ಮೇಲೆ ಅಥವಾ ಕೆಳಗೆ ಒಂದು ಗೆರೆಯನ್ನು ಎಳೆದು ಎರಡನೆಯ ಕಾಲವನ್ನು ಸೂಚಿಸುತ್ತಾರೆ.

**iii) ಮೂರನೆಯ ಕಾಲ :** ತಾಳಾಂಗದ ಒಂದು ಎಣಿಕೆಗೆ ನಾಲ್ಕು ಸ್ವರಗಳು ಬಂದರೆ ಅದನ್ನು ಮೂರನೆಯ ಕಾಲವೆಂದು

ಹೇಳುತ್ತಾರೆ. ಬರವಣಿಗೆಯಲ್ಲಿ ಸ್ವರಗಳ ಮೇಲೆ ಅಥವಾ ಕೆಳಗೆ ಎರಡು ಗೆರೆಗಳನ್ನು ಎಳೆದು ಮೂರನೆಯ ಕಾಲವನ್ನು ಸೂಚಿಸುತ್ತಾರೆ.

**ಅಕ್ಷರಕಾಲ :** ತಾಳದ ಒಂದು ಎಣಿಕೆಗೆ ಒಂದು ಸ್ವರವು ಬಂದರೆ ಅದನ್ನು ಅಕ್ಷರಕಾಲವೆಂದು ಕರೆಯುತ್ತಾರೆ. ಅಕ್ಷರಕಾಲವು ಅಭ್ಯಾಸಕಾಲದ ಗಾನರಚನೆಗಳಲ್ಲಿ ಕಂಡುಬರುತ್ತದೆ.

**ಆವರ್ತ :** ಒಂದು ತಾಳದ ತಾಳಾಂಗಗಳನ್ನು ಒಂದು ಬಾರಿ ಪೂರ್ಣವಾಗಿ ನಡೆಸುವುದಕ್ಕೆ ಆವರ್ತವೆಂದು ಹೆಸರು.

ಉದಾಹರಣೆ : ಸರಿಗಮ || ಪಧ | ನಿಸ ||

ಸಂಗೀತರಚನೆಗಳನ್ನು ಬರೆಯುವಾಗ ತಾಳದ ಆವರ್ತ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಎರಡು ಉದ್ದದ ಗೆರೆಗಳನ್ನು ಹಾಕುತ್ತಾರೆ. ಪ್ರತಿಯೊಂದು ಅಂಗದ ಕೊನೆಯಲ್ಲಿ ಒಂದು ಉದ್ದನೆಯ ಗೆರೆಯನ್ನು ಹಾಕುತ್ತಾರೆ.

## ಸಂಗೀತರಚನೆಗಳ ಸ್ವರೂಪ

ಸಂಗೀತದಲ್ಲಿ ಹಾಡಲು ಅಥವಾ ನುಡಿಸಲು ಅನುಕೂಲವಾಗುವಂತೆ ಮಾಡಿಕೊಂಡ ರಚನೆಗಳು ಸಂಗೀತರಚನೆಗಳು. ಇವುಗಳಲ್ಲಿ ಅಭ್ಯಾಸಗಾನರಚನೆಗಳು ಮತ್ತು ಸಭಾಗಾನರಚನೆಗಳೆಂದು ಎರಡು ಭಾಗಗಳಿವೆ.

ಅಭ್ಯಾಸಗಾನರಚನೆಗಳಲ್ಲಿ ಸ್ವರಾವಳಿ, ಗೀತೆ, ಜತಿಸ್ವರ, ಸ್ವರಜತಿಗಳು ಬರುತ್ತವೆ.

ಸಭಾಗಾನರಚನೆಗಳಲ್ಲಿ ವರ್ಣ, ಕೃತಿ, ಕೀರ್ತನೆ, ಪದ, ಜಾವಳಿ, ತಿಲ್ಲಾನ, ವಚನ ಮೊದಲಾದವುಗಳು ಬರುತ್ತವೆ.

## ಅಭ್ಯಾಸಗಾನರಚನೆಗಳ ಸ್ಥೂಲವಿವರಣೆ

**i) ಸ್ವರಾವಳಿ :** ಆವಳಿ ಎಂದರೆ ಗುಂಪು ಎಂದು ಅರ್ಥ. ಸ್ವರಗಳ ಗುಂಪಿಗೆ ಸ್ವರಾವಳಿ ಎಂದು ಹೆಸರು. ಸರಳೆವರಸೆ, ತಾರಸ್ಥಾಯಿವರಸೆ, ಮಂದ್ರಸ್ಥಾಯಿವರಸೆ, ದಾಟುವರಸೆ, ಜಂಟಿವರಸೆ, ಅಲಂಕಾರಗಳು ಸ್ವರಾವಳಿಗಳು.

**ಅ) ಸರಳೆವರಸೆ :** ವರಸೆ ಎಂದರೆ ಜೋಡಣೆ ಎಂದು ಅರ್ಥ. ಏಳು ಸ್ವರಗಳನ್ನು ಕ್ರಮವಾಗಿ, ಸರಳವಾಗಿ ಜೋಡಿಸಿ ಹೇಳುವುದೇ ಸರಳೆವರಸೆ. ಇಲ್ಲಿ ಮಧ್ಯಸ್ಥಾಯಿಸ್ವರಗಳು ಪ್ರಧಾನವಾಗಿರುತ್ತವೆ. ತಾರಷಡ್ಜಸ್ವರವು ಮಾತ್ರ ಇರುತ್ತದೆ.

**ಆ) ತಾರಸ್ಥಾಯಿವರಸೆ :** ಏಳು ಸ್ವರಗಳ ಕ್ರಮಪ್ರಕಾರದ ಜೋಡಣೆಯಲ್ಲಿ ಮಧ್ಯಸ್ಥಾಯಿ ಮತ್ತು ತಾರಸ್ಥಾಯಿಯ ಸ್ವರಗಳನ್ನು ಹಂತ ಹಂತವಾಗಿ ಹೊಂದಿರುವ ಸರಳವಾಗಿರುವ ಸ್ವರಗಳ ಜೋಡಣೆಯು ತಾರಸ್ಥಾಯಿವರಸೆಯಾಗಿರುತ್ತದೆ.

**ಇ) ಮಂದ್ರಸ್ಥಾಯಿವರಸೆ :** ಮಧ್ಯಸ್ಥಾಯಿ ಷಡ್ಜಸ್ವರದಿಂದ ಪ್ರಾರಂಭಿಸಿ ಅವರೋಹಣ ಕ್ರಮದಲ್ಲಿ ಬರುವ ಕ್ರಮವಾದ ಜೋಡಣೆಯು ಮಂದ್ರಸ್ಥಾಯಿವರಸೆಯಾಗುತ್ತದೆ. ಇಲ್ಲಿ ಮಂದ್ರಸ್ಥಾಯಿ ಮತ್ತು ಮಧ್ಯಸ್ಥಾಯಿಸ್ವರಗಳ ಜೊತೆಯಲ್ಲಿ ತಾರಷಡ್ಜಸ್ವರವೂ ಬರುತ್ತದೆ.

**ಈ) ದಾಟುಸ್ವರ :** ಸ್ವರಗಳು ಕ್ರಮವಾಗಿ ಬರದೆ, ಒಂದು, ಎರಡು ಅಥವಾ ಮೂರು ಸ್ವರಗಳನ್ನು ಬಿಟ್ಟು ಮುಂದಿನ ಸ್ವರವನ್ನು ಹೊಂದಿದ್ದರೆ ಅದು ದಾಟುವರಸೆಯಾಗುತ್ತದೆ. ಇಲ್ಲಿ ಸ್ವರಗಳು ವಕ್ರಗತಿಯಲ್ಲಿ ಸಂಚರಿಸುತ್ತವೆ.

